# ತಾಯಿನಾಡು



ಲೇಖಕ:—

ಭಿ. ಪ. ಕಾಳೆ

ಮ್ಯಾ. ಶ್ರೀ ಶೇಷಾಚಲ ಪ್ರೆಸ್ಸ, ಮತ್ತು ಶ್ರೀ. ಶೇ. ಗ್ರಂಥಮಾಲೆ,
ಆನಂದವನ.

---

ಪ್ರಕಾಶಕ:—

ಯ. ಗು. ಕುಲಕರ್ಣಿ

ಸಂಪಾದಕ, ಸ. ಚ. ಆನಂದವನ.

---

ಬೆಲೆ ೧ ರೂ.

# ತಾಯಿನಾಡು.

[ಸಾಮಾಜಿಕ ಕಾದಂಬರಿ.]



## ೧ನೆಯ ಪ್ರಕರಣ—ಶಿಶು ವರ್ಣನ.






ಸವಿ ಸನ್ ೧೯೪೭ ನೇ ವರುಷದ ಜಾನೇವಾರೀ ತಿಂಗಳಲ್ಲಿ ನಡೆದ ಸಂಗತಿಯು! ಜಗತ್ತಿಗೆ ಪ್ರಕಾಶವನ್ನು ಕೊಟ್ಟು, ಹರುಷವನ್ನುಂಟುಮಾಡುವಂಥ ದಿನಮಣಿಯು ತನ್ನ ಕೆಲಸವನ್ನು ಮುಗಿಸಿ ಪಶ್ಚಿಮಾಬ್ಧಿಯನ್ನು ಸೇರಲು, ಪೃಥ್ವಿಯ ಮೇಲೆ ಔದಾಸೀನತೆಯ ಛಾಯೆಯು ಸ್ಪಷ್ಟವಾಗಿ ತೋರತೊಡಗಿತು. ತನ್ನ ಮುಖದ ಮೇಲಿರುವ ಈ ಔದಾಸೀನ್ಯವನ್ನು ಅನ್ಯರು ನೋಡಬಾರದೆಂಬ ಭಾವದಿಂದಲೋ ಎಂಬಂತೆ ವಸುಂಧರೆಯು ಕೃಷ್ಣವಸ್ತ್ರವನ್ನು ಆಚ್ಛಾದಿಸಿಕೊಂಡಂತೆ ತೋರತೊಡಗಿತು. ಆಕಾಶದಲ್ಲಿ ಲಖಲಖಿಸುವ ತಾರೆಗಳಿಂದ ಧರಿತ್ರಿಯ ಮೇಲೆ ಎಷ್ಟು ಮಾತ್ರಕ್ಕೂ ಪ್ರಕಾಶವು ಬೀಳದೆ ಭೀಷಣತೆಯು ಮಾತ್ರ ಹೆಚ್ಚುತ್ತಿತ್ತು.

ಕಗ್ಗತ್ತಲೆಯ ರಾತ್ರಿ; ಅದರಲ್ಲೂ ಗಹನಾರಣ್ಯದಲ್ಲಿಯ ಮಾರ್ಗ ಕ್ರಮಣ; ನಡನಡುವೆ ಶ್ವಾಪದಗಳ ಭಯಂಕರ ಆಕ್ರಂದನದ ಶ್ರವಣ. ಇಂಥ ಪರಿಸ್ಥಿತಿಯಲ್ಲಿ ಸಿಕ್ಕ ಮಾನವರ ಎದೆಯು ಬಿರಿದು ಬೀಳುವದೇ ಸರಿ! ಆದರೆ ಕೃಷ್ಣಪಕ್ಷದ ಕತ್ತಲೆಗಿಂತಲೂ ಕಪ್ಪಾದ ಹೃದಯವುಳ್ಳ ದುಷ್ಟರಿಗೆ ಇಂಥ ಸ್ಥಿತಿಯಲ್ಲಿಯ ಮಾರ್ಗಕ್ರಮಣವು ಭಾರತಹುಣ್ಣಿವೆಯ ಬೆಳದಿಂಗಳದ ವನವಿಹಾರಕ್ಕಿಂತಲೂ ಸೊಗಸಾಗಿ ತೋರುವದು. ನಮ್ಮ ಕಥಾನಕಕ್ಕೆ ಯಾವ ರಾತ್ರಿಯು ಆರಂಭದ ಕಾಲವಾಯಿತೋ, ಆ ರಾತ್ರಿಯು ಕೃಷ್ಣ ಹೃದಯದ ದುಷ್ಟರಿಗೆ ಮಹದಾನಂದಕರವಾಗಿ ಪರಿಣಮಿಸಿತು. ಆ ದುರ್ಜನರ ಆನಂದಕ್ಕೆ ಪಾತ್ರವಾದ ಆ ರಾತ್ರಿಯಲ್ಲಿ ಅಂದರೆ ೧೯೪೭ನೇ ಜನವರಿ ತಿಂಗಳ ಒಂದು ರಾತ್ರಿಯಲ್ಲಿ ಆ ಭೀಷಣ ಅರಣ್ಯದ ದಾರಿಯಲ್ಲಿ ಒಂದು ಭಯಂಕರ ಪ್ರಸಂಗವು ಒದಗಿಹೋಯಿತು!

ಭಯಂಕರವಾದ ಅರಣ್ಯ; ಗುಡ್ಡುಗಾಡು ಪ್ರದೇಶ; ಶ್ವಾಪದ ಪ್ರಾಣಿಗಳ ಗರ್ಜನ; ಇಂಂಥ ಪ್ರದೇಶದಲ್ಲಿ ಕೃಷ್ಣಪಕ್ಷದ ಕಗ್ಗತ್ತಲೆಯಲ್ಲಿ ಪ್ರವಾಸ ಮಾಡ ಬೇಕಾದರೆ ಆ ಪ್ರವಾಸಿಯು ಸೈತಾನನಾದರೂ ಇರಬೇಕು; ಇಲ್ಲವೆ ಸರ್ವಸಂಗ ಪರಿತ್ಯಾಗ ಮಾಡಿದ ವೈರಾಗಿಯಾದರೂ ಇರಬೇಕು. ಇವರಿಬ್ಬರ ಹೊರತು ಉಳಿದವರಿಗೆ ಅಂಥಲ್ಲಿ ಪ್ರವಾಸ ಮಾಡಲು ಧೈರ್ಯಸಾಲದು! ಆದರೆ ಮನುಷ್ಯ ನಿಗೆ ಪ್ರಾಣಾಪತ್ತು ಪ್ರಾಪ್ತವಾಯಿತೆಂದರೆ ಎಂಥ ಕಗ್ಗತ್ತಲೆಯಲ್ಲಾದರೂ ಎಂಥ ಕಟ್ಟಡವಿಯಲ್ಲಾದರೂ ಪ್ರವಾಸ ಮಾಡಲೇಬೇಕಾಗುತ್ತದೆ.

ನಮ್ಮ ಕಥಾನಕವು ಪ್ರಾರಂಭವಾದ ಆ ಕಾಳರಾತ್ರಿಯಲ್ಲಿ ಯಾವ ದಾರಿ ಯ ಮೇಲೆ ಕೆಲಹೊತ್ತಿನ ಮೊದಲು ಭಯಂಕರ ಪ್ರಸಂಗವುಂಟಾಗಿತ್ತೋ ಅದೇ ದಾರಿಯಿಂದಲೇ ಕೆಲ ಜನ ರಾಹುತರು ಸಾಗಿದ್ದರು. ಆ ಗಹನಾರಣ್ಯದಲ್ಲಿ ಕೆಲ ದಾರೀ ಕ್ರಮಿಸಿದ ಬಳಿಕ ಅವರಿಗೆ ತಾವು ಹೋಗತಕ್ಕ ದಾರಿಯ ಮೇಲೆ ಎರಡು ಬಂಡಿಗಳು ನಿಂತಿರುವವೆಂಬದು ಕಂಡು ಬಂದಿತು. ಆ ಬಂಡಿಗಳಿಗೆ ಹೂಡಿದ ಎತ್ತುಗಳು ಹಾಗೇ ಮೆಲಕಾಡಿಸುತ್ತ ನಿಂತುಕೊಂಡಿದ್ದವು. ರಾಹುತರು ಬಂಡಿ ಗಳ ಒಡೆಯರನ್ನು ಕೂಗಿದರು; ಯಾರೂ ಉತ್ತರ ಕೊಡಲಿಲ್ಲ. ಮೂರು ಸಾರೆ ಕೂಗಿದರೂ ನಿಷ್ಪ್ರಯೋಜನವಾದದ್ದನ್ನು ಕಂಡು ಆ ರಾಹುತರು ತಮ್ಮ ತಮ್ಮೊಳಗೆ ಏನೇನೋ ಮಾತನಾಡಿಕೊಳ್ಳುತ್ತ ಅಲ್ಲಿಯೇ ನಿಂತುಕೊಂಡರು.

ಪ್ರಿಯ ವಾಚಕರೇ, ಆ ಕಟ್ಟಡವಿಯಲ್ಲಿ-ಆ ಭಯಂಕರ ಪ್ರದೇಶದಲ್ಲಿ-ಮಧ್ಯರಾತ್ರಿಯಲ್ಲಿ ಬಂದ ಆ ರಾಹುತರಾರು? ಅವರು ನೋಡಿದ ಬಂಡಿಗಳಾರವು? ಎಂದು ನೀವು ಯೋಚಿಸುತ್ತಿರಬಹುದಲ್ಲವೇ? ಬಂಡಿಗಳ ಸಂಗತಿಯು ಕಥೆಯನ್ನು ಓದುತ್ತ ಹೋದಂತೆ ನಿಮಗೇ ತಿಳಿಯಬಹುದಾದ್ದರಿಂದ ಮೊದಲು ರಾಹುತರ ಪರಿಚಯವನ್ನು ನಿಮಗೆ ಇಲ್ಲಿ ಮಾಡಿಕೊಡುವೆವು.

ದಿಲ್ಲಿಯ ಬಾದಶಾಹಿಯು ಮುರುಕಳಿಗೆ ಬಂದಿದ್ದು, ಅದು ಬೇಗನೆ ನಾಮಶೇಷವಾಗುವದೆಂಬ ಲಕ್ಷಣವು ಸ್ಪಷ್ಟವಾಗಿ ತೋರಹತ್ತಿತ್ತು. ಆಗ ನಮಗೇ ದಿಲ್ಲಿಯ ಸಿಂಹಾಸನವು ದೊರೆಯುವದೆಂಬ ಆಶೆಯಿಂದ ಕಾಬೂಲದ ಅಧಿಪತಿಯಾದ ಜುಮಾನಖಾ ಎಂಬವನು ಸೈನ್ಯದೊಡನೆ ಹಿಂದುಸ್ಥಾನದಲ್ಲಿ ನುಗ್ಗಿದ್ದನು. ಅದರಂತೆ ದಕ್ಷಿಣ ಕಡೆಯ ಮರಾಟರೂ ದಿಲ್ಲಿಯ ಸಿಂಹಾಸನ ವನ್ನು ಕೈವಶಮಾಡಿಕೊಂಡು ತಮ್ಮ ಕಾವೀ ನಿಶಾನೆಯನ್ನು ದಿಲ್ಲಿಯ ದುರ್ಗದ ಮೇಲೆ ಮೆರೆಯಿಸಬೇಕೆಂದು ಹೊಂಚುಹಾಕಿದ್ದರು. ದಿಲ್ಲಿಯು ಮರಾಟರ

ಕೈವಶವಾಗಿ ಸರ್ವತ್ರದಲ್ಲಿ ಮರಾಟರ ಅಧಿಕಾರವು ಪ್ರಸ್ಥಾಪಿತವಾಗುವದೆಂದು ಜನರು ಮಾತನಾಡಿತೊಳ್ಳಲಾರಂಭಿಸಿದರು. ಆದರೆ ಚಮತ್ಕಾರವೇನಂದರೆ— ಜುಮಾನಖಾನನೂ ಒತ್ತಟ್ಟಿಗೆ ಉಳಿದನು; ಮರಾಟರೂ ಒತ್ತಟ್ಟಿಗೆ ಉಳಿದರು. ಪಶ್ಚಿಮ ದೇಶದ ವಣಿಕ ಸಂಘವೊಂದು ದಿಲ್ಲಿಯ ರಾಜ್ಯಸೂತ್ರಗಳನ್ನು ಕೈವಶ ಪಡಿಸಿಕೊಂಡು ಸರ್ವರನ್ನೂ ಆಶ್ಚರ್ಯಚಕಿತರನ್ನಾಗಮಾಡಿತು. ಆ ಕಾಲಕ್ಕೆ ಈ ವಣಿಕ ಸಂಘಕ್ಕೆ ಕಂಪನಿ ಸರಕಾರವೆಂದು ಜನರು ಸಂಬೋಧಿಸತೊಡಗಿದರು. ಮುಂದೆ ಇಸವಿ ಸನ್ ೧೮೫೭ನೇ ವರುಷವು ಗತಿಸಿದ ಬಳಿಕ ಈ ಹೆಸರು ನಷ್ಟವಾಗಿ ಹಿಂದುಸ್ಥಾನ ಸರಕಾರವೆಂಬ ಹೆಸರು ಬಳಿಕೆಯಲ್ಲಿ ಬಂದಿತು. ಇರಲಿ.

ಕಾಬೂಲಾಧಿಪತಿಯು ಹಿಂದುಸ್ಥಾನದಲ್ಲಿ ನುಗ್ಗಿದ ಸುದ್ದಿಯು ಕಂಪನೀ ಸರಕಾರದ ಲಾರ್ಡ ವೆಲ್ಲಸ್ಲಿಗೆ ಗೊತ್ತಾಯಿತು. ಆಗ ಆತನು ಸೈನ್ಯವನ್ನು ಒಟ್ಟುಗೂಡಿಸಿ ಆ ಕಾಬೂಲಾಧಿಪತಿಯ ಸಮಾಚಾರವನ್ನು ತಕ್ಕೊಳ್ಳಬೇಕೆಂದು ನಿಶ್ಚಯಿಸಿದನು. ಆತನ ಸೈನಿಕರು ಹಗಲು-ರಾತ್ರಿಗಳಲ್ಲಿ ಅಯೋಧ್ಯಾ ಪ್ರಾಂತದಲ್ಲಿ ಸಂಚರಿಸತೊಡಗಿದರು; ಆದರೆ ಕಂಪನೀಸರಕಾರದ ಮೇಲೆ ದೈವಾನುಗ್ರಹ ವಿದ್ದದರಿಂದಲೋ ಏನೋ ಮರಾಟರಿಗೆ ಗೃಹಕಲಹದ ಮೂಲಕ ದಿಲ್ಲಿಯ ಕಡೆಗೆ ಇಣಿಕಿ ನೋಡಲು ಸಹ ಆಗಲಿಲ್ಲ. ಅದರಂತೆ ಕಾಬೂಲಾಧಿಪತಿಯ ಅವಸ್ಥೆಯೂ ಆಯಿತು; ಯಾಕಂದರೆ ಜುಮಾನಖಾನನು ಕಾಬೂಲವನ್ನು ಬಿಟ್ಟು ಹಿಂದುಸ್ಥಾನಕ್ಕೆ ಬರಲು, ಅಲ್ಲಿಯ ಕೆಲಜನರು ಬೇರೊಬ್ಬ ಪುಂಡನನ್ನು ಹುರಿದುಂಬಿಸಿ ಸಿಂಹಾಸನವನ್ನು ಸೆಳೆದುಕೊಳ್ಳುವ ಹವ್ಯಾಸಕ್ಕೆ ಬಿದ್ದರು. ಈ ಸಂಗತಿಯು ಜುಮಾನಖಾನನಿಗೆ ತಿಳಿದಕೂಡಲೆ ಆತನು ಕಾಬೂಲದ ಕಡೆಗೆ ಹಿಂತಿರುಗಬೇಕಾಯಿತು. ಮುಂದೆ ಕೆಲದಿನಗಳಲ್ಲಿ ಇರಾಣಕ್ಕೂ, ಕಾಬೂಲಕ್ಕೂ ಯುದ್ಧವು ಪ್ರಾರಂಭಿಸಿದ್ದರಿಂದ ಜುಮಾನಖಾನನಿಗೆ ಹಿಂದುಸ್ಥಾನಕ್ಕೆ ಬರಲು ಅವಕಾಶವೇ ಉಳಿಯಲಿಲ್ಲ; ಅದ್ದರಿಂದ ಕಂಪನೀಸರಕಾರದ ಅಧಿಕಾರವೇ ಸ್ಥಿರವಾಯಿತು. ಶತ್ರುಗಳ ಅಂಜಿಕೆಯು ಕಡಿಮೆಯಾದ್ದರಿಂದ ಎಲ್ಲ ಸೈನ್ಯವನ್ನು ಅಯೋಧ್ಯಾ ಪ್ರಾಂತದಲ್ಲಿಯೇ ಇಟ್ಟುಕೊಳ್ಳುವದು ಸರಿಯಲ್ಲವೆಂದು ತಿಳಿದು ಕಂಪನೀ ಸರಕಾರದ ಅಧಿಕಾರಿಯು ಕೆಲಸೈನ್ಯದೊಡನೆ ಬಂಗಾಲದ ಕಡೆಗೆ ಸಾಗುವಂತೆ ಕರ್ನಲ ಡಬ್ಲಿನ ಎಂಬ ಸೈನ್ಯಾಧಿಪತಿಗೆ ಅಪ್ಪಣೆ ಮಾಡಿದನು. ಮೇಲೆ ಹೇಳಿದಂತೆ ನಮ್ಮ ಕಥಾನಕವು ಪ್ರಾರಂಭವಾದ ರಾತ್ರಿಯಲ್ಲಿ ಯಾವ ರಾಹುತರು ದಾರಿಯಲ್ಲಿ ಎರಡು ಬಂಡಿಗಳನ್ನು ನೋಡಿದರೋ ಆ ರಾಹುತರು ಬೇರೆ ಯಾರೂ

ಆಗಿರದೆ ಕರ್ನಲ ಡಬ್ಲಿನನ ಸೈನಿಕರೇ ಆಗಿದ್ದರು.

ಈ ರಾಹುತರು ಸರಾಸರಿ ೨೦-೨೫ ಜನರಿರಬಹುದು. ಇವರು ಕರ್ನಲ ಡಬ್ಲಿನನ ಅಪ್ಪಣೆಯ ಮೇರೆಗೆ ದಾರಿಯನ್ನು ಗೊತ್ತುಹಚ್ಚುವದಕ್ಕಾಗಿ ಮುಂದೆ ಬಂದಿದ್ದರು. ದೊಡ್ಡ ಸೈನ್ಯ, ಹಾಗು ಕರ್ನಲ ಡಬ್ಲಿನ ಸಾಹೇಬನು ಹಿಂದಿನಿಂದ ಬರುತ್ತಿದ್ದರು. ದಾರಿಯಲ್ಲಿ ಬಂಡಿಯನ್ನು ನೋಡಿದ ಆ ರಾಹುತರು ಬಂಡೀ ಹೊಡೆಯುವವನನ್ನು ಎಚ್ಚರಗೊಳಿಸಲು ಮಾಡಿದ ಪ್ರಯತ್ನವು ನಿಷ್ಫಲವಾದ ಬಳಿಕ ಆತನಿಗೆ ತಮ್ಮ ಬರ್ಚಿಯ ತುದಿಯಿಂದ ತಿವಿದು ನೋಡಿದರು; ಆದರೂ ಅವನಿಗೆ ಎಚ್ಚರಿಕೆಯಾಗಲಿಲ್ಲ. ಆಗ ಆತನನ್ನು ಹಿಡಿದೆಳೆದರು; ಆದರೆ ಆತನ ದೇಹವು ತಣ್ಣಗೆ ಆಣೇಕಲ್ಲಿನಂತೆ ಹತ್ತಲು, ಆತನ ಮೈಯನ್ನು ಮುಟ್ಟಿದ ಸ್ವಾರನು ಗಾಬರಿಯಾಗಿ ಈತನು ಸತ್ತಿರುವನು, ಎಂದು ಕೂಗಿದನು. ಬಳಿಕ ಎಲ್ಲ ಸ್ವಾರರೂ ಮತ್ತೊಂದು ಬಂಡಿಯ ಬಳಿಗೆ ಹೋಗಿ ನೋಡಿದರು. ಅಲ್ಲಿಯೂ ಬಂಡಿಯನ್ನು ಹೊಡೆಯುವವನು ಮೃತನಾಗಿದ್ದದ್ದು ಕಂಡುಬಂದಿತು. ಬಂಡಿಯಲ್ಲಿ ನಿಶ್ಶಬ್ದವಿದ್ದು, ಒಂದು ಶಿಶುವು ಮಾತ್ರ ಆಗಾಗ್ಗೆ ಚೀರುತ್ತಿರುವದು ಅವರಿಗೆ ಕೇಳಬಂದಿತು. ಈ ಭಯಂಕರ ಪ್ರಕಾರವನ್ನು ನೋಡಿ, ಆ ರಾಹುತರು ಚಕಿತರಾಗಿ ಈ ಸಂಗತಿಯನ್ನು ಡಬ್ಲಿನ ಸಾಹೇಬನಿಗೆ ತಿಳಿಸಬೇಕೆಂದು ಬಗೆದರು. ನಾಲ್ವರು ಸೈನ್ಯದ ಕಡೆಗೆ ಧಾವಿಸಿದರು. ದೂರದಲ್ಲಿ ಸೈನ್ಯವು ಮಂದಗತಿಯಿಂದ ಬರುತ್ತಿದ್ದಿತು. ಸೈನ್ಯದ ಮುಂಭಾಗದಲ್ಲಿ ಡಬ್ಲಿನ ಸಾಹೇಬನಿದ್ದನು. ಬಂಡಿಯ ಬಳಿಯಿಂದ ಹೋದ ಸ್ವಾರರು ಸಾಹೇಬನಿಗೆ ತಾವು ನೋಡಿದ ಸಂಗತಿಯನ್ನು ಹೇಳಿದರು.

ಕರ್ನಲ್ ಡಬ್ಲಿನನು ಉದಾರಚರಿತನಾಗಿದ್ದನು. ಕೂಡಲೆ ಆತನು ಸೈನ್ಯದಲ್ಲಿಯ ಎರಡು-ಮೂರು ಹಿಲಾಲುಗಳನ್ನು ತಕ್ಕೊಂಡು ಆ ಬಂಡಿಗಳಿದ್ದಲ್ಲಿಗೆ ಹೋದನು. ಬಂಡೀ ಹೊಡೆಯುವವರಿಬ್ಬರೂ ಮೃತರಾದದ್ದನ್ನು ನೋಡಿ ಸಾಹೇಬನಿಗೆ ತುಂಬಾ ದಯವುಂಟಾಯಿತು. ಇವರಿಗೆ ಮರಣವು ಯಾತರಿಂದ ಪ್ರಾಪ್ತವಾಗಿರುವದೆಂಬದನ್ನು ಸಾಹೇಬನು ಪರೀಕ್ಷಿಸಿ ನೋಡುತ್ತಿರಲು, ಎರಡನೆಯ ಬಂಡಿಯಲ್ಲಿದ್ದ ಶಿಶುವು ಮತ್ತೆ ಚೀರತೊಡಗಿತು. ಆ ಶಿಶುವಿನ ರೋದನ ಸ್ವರ ಕೇಳಿ ಸಾಹೇಬನ ಅಂತಃಕರಣವು ಮತ್ತಿಷ್ಟು ಕರಗಿತು. ಚಿಕ್ಕ ಮಗುವು ಈ ಬಂಡಿಯಲ್ಲಿದ್ದದರಿಂದ ಇದರಲ್ಲಿ ಹೆಂಗಸರು ಇರಬೇಕು, ಎಂದು ತರ್ಕಿಸಿ ಆ ದಯಾಳುವಾದ ಸಾಹೇಬನು ತನ್ನ ಖಡ್ಗವನ್ನು ಬಂಡಿಯ ಮೇಲೆ ಬಡಿದು ಒಳಗೆ ಯಾರಿದ್ದೀರಿ? ಎಂದು ನುಡಿದನು. ಕೂಸಿನ ರೋದನದ ಹೊರತು

ಬೇರೆ ಯಾವಶಬ್ದ ವೂ ಕೇಳಬರಲಿಲ್ಲ. ಆಗ ಸಾಹೇಬನು ಬಂಡಿಯಲ್ಲಿ ಬೆಳಕುಬೀಳುವ ಹಾಗೆ ಹಿಲಾಲನ್ನು ಹಿಡಿಯುವಂತೆ ಹೇಳಿ ಬಂಡಿಯ ಮುಂಭಾಗದ ಬುರುಕೆ ಯನ್ನು ತಾನೇ ಓರೆಮಾಡಿದನು. ಆ ಕೂಡಲೆ ಒಳಗಿನ ಭಯಂಕರ ದೃಶ್ಯವನ್ನು ನೋಡಿ ಸಾಹೇಬನು ಕಳವಳಗೊಂಡನು. ಇಷ್ಟೇ ಅಲ್ಲ; ಆತನ ಕಣ್ಣಲ್ಲಿ ಅಶ್ರು ಗಳು ಸಹ ಸುರಿದವು. ಪರಮ ಲಾವಣ್ಯವತಿಯೂ, ಪೂರ್ಣಚಂದ್ರ-ವದನೆಯೂ ಸರ್ವಾಂಗ ಸುಂದರಿಯೂ ಆದ ಓರ್ವ ಸ್ತ್ರೀಯು ಮೃತಳಾಗಿ ಬಿದ್ದುಕೊಂಡಿ ದ್ದಳು. ಆಕೆಯ ಕಾಲುಗಳು ಬಂಡಿಯಿಂದ ಹೊರಬಿದ್ದಿದ್ದವು; ಹಾಗು ಅವಳ ಮಸ್ತಕವೂ ಬಂಡಿಯ ಎಡಗಡೆಯ ಗಾಲಿಯ ಕಡೆಗೆ ಹೊರಬಿದ್ದಿದ್ದು, ಆಕೆಯ ತಲೆಗೂದಲುಗಳಲ್ಲಿ ಕೆಲವು ಗಾಲಿಯ ಮೇಲೆ ಚಲ್ಲುವರೆದಿದ್ದವು. ಆ ಲಾವಣ್ಯ ವತಿಯ ಈ ಹೃದಯದ್ರಾವಕ ಸ್ಥಿತಿಯನ್ನು ನೋಡಿ ಅಲ್ಲಿದ್ದ ಎಲ್ಲ ಪ್ರೇಕ್ಷಕರ ಹೃದಯಗಳು ದುಃಖದಿಂದ ವ್ಯಾಪ್ತವಾದವು. ಆಗ ಸಾಹೇಬನು ಆ ಸ್ತ್ರೀಯನ್ನು ಬಂಡಿಯಲ್ಲಿ ವ್ಯವಸ್ಥಿತವಾಗಿ ಮಲಗಿಸುವಂತೆ ಸೇವಕರಿಗೆ ಅಪ್ಪಣೆ ಮಾಡಲು, ಅವರು ಆದರಂತೆ ಮಾಡಿದರು. ಆ ಸ್ತ್ರೀಯನ್ನು ನೆಟ್ಟಗೆ ಮಲಗಿಸಲು, ಆ ಚಿಕ್ಕ ಮಗುವು ಅವ್ವಾ! ಅವ್ವಾ! ಎಂದು ರೋದನ ಮಾಡುತ್ತ ಆ ಮೃತ ಸ್ತ್ರೀಯ ಮೊಲೆಯನ್ನು ಕುಡಿಯಲು ಪ್ರಯತ್ನಿಸಹತ್ತಿತು. ಆ ಚಿಕ್ಕ ಮಗುವಿನ ಸೌಂದರ್ಯ ವನ್ನೂ, ಇಂಥ ತಾರುಣ್ಯದಲ್ಲಿ ಆ ಸ್ತ್ರೀಗೆ ಇಂಥ ಭಯಂಕರ ರೀತಿಯಿಂದ ಮರಣವುಂಟಾದ ಪ್ರಕಾರವನ್ನು ನೋಡಿಯೂ, ಆ ಕೂಸಿನ ಆರ್ತಧ್ವನಿ ಯನ್ನು ಕೇಳಿಯೂ ಎಂಥ ಕಲ್ಲೆದೆಯವನ ಹೃದಯವಾದರೂ ಕರಗಬಹು ದಾಗಿತ್ತು. ಆದರೆ ದಯಾಳುವಾದ ಡಬ್ಲಿನ ಸಾಹೇಬನ ಹೃದಯವು ಕರಗಿದ್ದ ರಲ್ಲಿ ಆಶ್ಚರ್ಯವೇನು?

ಕೂಡಲೆ ಡಬ್ಲಿನ ಸಾಹೇಬನು ಬಂಡಿಯಲ್ಲಿ ಕೈಚಾಚಿ ಆ ಸುಂದರ ಶಿಶು ವನ್ನು ಎತ್ತಿ ಎದೆಗವಚಿಕೊಂಡನು. ತಾಯಿಯ ಮೊಲೆಕುಡಿಯಬೇಕೆಂದು ಹವಣಿಸುತ್ತಿದ್ದ ಆ ಶಿಶುವು ಸಾಹೇಬನ ಸಾಂತ್ವನೆಯಿಂದ ಹ್ಯಾಗೆ ಸಮಾಧಾನ ವನ್ನು ಹೊಂದಬೇಕು? ಸಾಹೇಬನು ಎಷ್ಟು ಪರಿಯಿಂದ ರಮ್ಮಿಸಿದರೂ ಆ ಶಿಶುವಿನ ಆರ್ತಸ್ವರವು ಹೆಚ್ಚಾಗಹೊಡಗಿತು. ಆ ಕೂಸಿನ ದೈನ್ಯವನ್ನು ನೋಡಿ ಸಾಹೇಬನಿಗೆ ಬಹಳ ದುಃಖವಾಯಿತು. ಆಗ ಅವನು ಯುರೋಪಿಯನ ಬಾಲ ಕರಿಗೆ ಮೊಲೆಯುಣಿಸುವದಕ್ಕಾಗಿ ದಂಡಿನ ಸಂಗಡ ಕರೆದುಕೊಂಡು ಬಂದಿದ್ದ ಹಿಂದುದಾಯಿಗಳಲ್ಲಿ ಒಬ್ಬಳನ್ನು ಕರೆಯಿಸಿ, ಆಕೆಗೆ ಆ ಶಿಶುವನ್ನು ಒಪ್ಪಿಸಿದನು.

ಮತ್ತು ಈ ಶಿಶುವನ್ನು ಬಹು ಚನ್ನಾಗಿ ಸಂರಕ್ಷಿಸಬೇಕೆಂದು ಆಜ್ಞಾಪಿಸಿದನು. ಆ ಹಿಂದುದಾಯಿಗೆ ಆ ಸುಂದರ ಶಿಶುವನ್ನು ನೋಡಿ ಬಹಳ ಸಂಭ್ರಮವಾಯಿತು. ಶಿಶುವಿಗೆ ಒಂದು ವರ್ಷ ಪೂರಾ ತುಂಬಿದ್ದಿಲ್ಲ; ಆದರೂ ಆ ಶಿಶುವು ಬಹಳ ಪುಷ್ಟವೂ ಮನೋಹರವೂ ಆಗಿದ್ದಿತು. ಅದರ ಸುವರ್ಣ ವರ್ಣದ ಮುಖವನ್ನೂ, ತಲೆಯ ಮೇಲಿನ ಕೆಂಗೂದಲುಗಳನ್ನೂ, ನೊಗಸಾದ ಅವಯವಗಳನ್ನೂ ನೋಡಿ ಆ ಹಿಂದುದಾಯಿಗೆ ಈ ಶಿಶುವು ಯಾವನೊಬ್ಬ ಯುರೋಪಿಯನ್ ಗೃಹಸ್ಥನದಾಗಿರ ಬೇಕೆಂದು ಅನಿಸಿತು; ಆದರೆ ಆಕೆಯು ಪ್ರತ್ಯಕ್ಷವಾಗಿ ಆ ಶಿಶುವಿನ ಮೃತ ತಾಯಿಯನ್ನೂ, ಆಕೆಗೆ ಇಂಥ ಶೋಚನೀಯ ಪ್ರಕಾರದಿಂದ ಮರಣವುಂಟಾದ ಸ್ಥಿತಿಯನ್ನೂ ನೋಡಿ ತುಂಬಾದುಃಖವುಂಟಾಗಿ ಈ ಶಿಶುವು ಹಿಂದುವಾಗಿರುವದು, ಎಂದು ತಿಳಿದುಕೊಂಡಳು. ತಾಯಿಯು ಎಷ್ಟು ಚಲುವೆಯೋ ಆಕೆಯ ಎರ ಡಷ್ಟು ಆ ಶಿಶುವು ಸುಂದರವಾಗಿದ್ದಿತು. ಆ ಹಿಂದುದಾಯಿಯು ಪ್ರೇಮದಿಂದ ಆ ಕೂಸಿಗೆ ಮೊಲೆಯುಣಿಸಲು ಅದು ಸ್ವಲ್ಪ ಸಮಾಧಾನವನ್ನು ಹೊಂದಿತು.

ಶಿಶುವು ಸಮಾಧಾನವಾದದ್ದನ್ನು ತಿಳಿದು ಸಾಹೇಬನಿಗೆ ಸ್ವಲ್ಪ ಆನಂದ ವಾಯಿತು. ಬಳಿಕ ಅವನು ಆ ಬಂಡಿಯನ್ನು ಸಂಪೂರ್ಣವಾಗಿ ಶೋಧಿಸುವ ಉದ್ಯೋಗಕ್ಕೆ ತೊಡಗಿದನು. ಬಂಡಿಯು ಪ್ರಶಸ್ತವಾಗಿದ್ದಿತು. ಅದಕ್ಕೆ ಉಪ ಯೋಗಿಸಿದ ಸಾಮಾನುಗಳನ್ನೂ, ಬಂಡಿಯ ಅಂತರ್ರಚನೆಯನ್ನೂ ಕಂಡು, ಈ ಬಂಡಿಯು ಸಾಮಾನ್ಯರದಾಗಿರದೆ ಯಾವನೋ ಒಬ್ಬ ದೊಡ್ಡ ಶ್ರೀಮಂತನ ದಾಗಿರಬೇಕೆಂದು ಆ ಸಾಹೇಬನಿಗೆ ಅನಿಸಿತು. ಮೊದಲು ಸಾಹೇಬನು ಆ ಮೃತ ಸ್ತ್ರೀಯನ್ನು ಬಂಡಿಯಿಂದ ಹೊರಗೆ ತೆಗೆಯಿಸಿದನು. ಒಳಗಿದ್ದ ಮತ್ತೊಂದು ಪರದೆಯನ್ನು ಓರೆಮಾಡಲು ಮತ್ತೊಬ್ಬ ಸ್ತ್ರೀಯು ಮೃತವಾಗಿರುವಳೆಂಬದು ಕಂಡುಬಂದಿತು. ಆ ಸ್ತ್ರೀಯು ಮೊದಲಿನ ಸ್ತ್ರೀಯ ಪರಿಚಾರಿಕೆಯಾಗಿರಬಹು ದೆಂದು ಡಬ್ಲಿನನು ತರ್ಕಿಸಿದನು. ಆ ಬಂಡಿಯಲ್ಲಿ ಇನ್ನೊಂದು ಹಾಸಿಗೆ ಇದ್ದಿತು. ಇದು ಈ ಬಂಡಿಯ ಯಜಮಾನನದಾಗಿದ್ದು, ಆತನು ಎಲ್ಲಿಗೆ ಹೋಗಿರಬಹು ದೆಂಬದು ತರ್ಕಕ್ಕೆ ನಿಲುಕದ ಮಾತಾಯಿತು.

ಆ ಬಂಡಿಯಲ್ಲಿ ಮೂರು ಪೆಟ್ಟಿಗೆಗಳಿದ್ದವು; ಒಂದು ದೊಡ್ಡ ಗಂಟು ಇದ್ದಿತು. ಡಬ್ಲಿನನು ಒಂದನೆಯ ಪೆಟ್ಟಿಗೆಯ ಬಾಯಿಯನ್ನು ತೆರೆದನು. ಅದ ರಲ್ಲಿ ರತ್ನ ಹಾಗು ಬೆಲೆಯುಳ್ಳ ಒಡವೆ, ಮುತ್ತು, ಮಾಣಿಕ ಮೊದಲಾದ ಪದಾರ್ಥಗಳಿದ್ದವು. ಮತ್ತೊಂದು ಪೆಟ್ಟಿಗೆಯಲ್ಲಿ ವಜ್ರದ ಹಿಡಿಕೆಯ ಒಂದು

ಖಡ್ಗ ಹಾಗು ಜಂಭಿಯಾ ಯುದ್ಧೋಪಯೋಗಿಯ ಬೇರೆ ಆಯುಧಗಳಿದ್ದವು. ಅವೆಲ್ಲ ರತ್ನಜಡಿತವಾಗಿದ್ದವು. ಮೂರನೆಯ ಪೆಟ್ಟಿಗೆಯಲ್ಲಿ ಯುದ್ಧದ ಹಾಗು ದರ್ಬಾರಿಯ ಪೋಷಾಕುಗಳಿದ್ದವು. ಗಂಟಿನಲ್ಲಿ ಸ್ತ್ರೀಯರ ಬೆಲೆಯುಳ್ಳ ಸೀರೆ-ಕುಪ್ಪಸಗಳಿದ್ದವು. ಇವೆಲ್ಲ ಪದಾರ್ಥಗಳನ್ನು ನೋಡಿ ಡಬ್ಲಿನನು ಆಶ್ಚರ್ಯ ಚಕಿತನಾದನು. ಈ ಬಂಡಿಯ ಒಡೆಯನು ದೊಡ್ಡ ಸರದಾರನಿದ್ದು, ಯಾವದೋ ಒಂದು ವಿಪತ್ತಿಗೆ ಒಳಗಾಗಿ ಹೀಗೆ ವಿಶೇಷ ಜನ ಸೇವಕರಿಲ್ಲದೆ ಈ ರಾತ್ರಿಯಲ್ಲಿ ಪ್ರಯಾಣಸನ್ನದ್ಧನಾಗಿರುವನು; ಆದರೆ ನೀಚರಾದ ದರವಡೆಗಾರರು ಇವರ ಬಂಡಿಯನ್ನು ಮುತ್ತಿ ಈ ಅನಾಹುತವನ್ನು ಮಾಡಿರಬೇಕು. ಆ ಸರದಾರನು ಕಳ್ಳರ ಕೈಗೆ ಸಿಕ್ಕದೆ ಓಡಿ ಹೋಗಿರಬೇಕು. ಇಲ್ಲವೆ ಕಳ್ಳರ ಕೈವಶನಾಗಿರ ಬೇಕು. ಕಳ್ಳರಿಗೆ ಈ ಬಂಡಿಯಲ್ಲಿಯ ಈ ಪದಾರ್ಥಗಳನ್ನು ಒಯ್ಯಲಿಕ್ಕೆ ಅವ ಕಾಶ ದೊರೆತಂತೆ ತೋರುವದಿಲ್ಲ. ನಮ್ಮ ರಾಹುತರು ಬಂದದ್ದರಿಂದ ಓಡಿ ಹೋಗಿ ಇಲ್ಲಿಯೇ ಎಲ್ಲಾದರೂ ಸಮೀಪದಲ್ಲಿ ಅಡಗಿಕೊಂಡಿರಬೇಕು, ಎಂದು ತರ್ಕಿಸಿದನು. ತನ್ನ ಈ ತರ್ಕವು ನಿಜವೆಂದು ಕಂಡುಬರಲು, ಆ ಸಾಹೇಬನು ತನ್ನ ಸೈನಿಕರಲ್ಲಿ ಕೆಲವರನ್ನು ಕರೆದು:-ನೀವು ಈಗಲೇ ಈ ಅಡವಿಯಲ್ಲಿ ನಾಲ್ಕು ಕಡೆಗೆ ಆಪ್ಪಾಡಿ ಈ ಬಂಡಿಗಳ ಮೇಲೆ ಅತ್ಯಾಚಾರ ನಡಿಸಿದ ಕಳ್ಳರು ಸಿಕ್ಕರೆ ಶೋಧಿಸಿಕೊಂಡು ಬರಬೇಕು. ನೀವು ಬರುವವರೆಗೆ ನಾನು ಇಲ್ಲಿಯೇ ಬೀಡುಬಿಟ್ಟುಕೊಂಡಿರುತ್ತೇನೆ. ನೀವು ಸಿಕ್ಕಲಿಲ್ಲವೆಂದು ಕೈಬೀಸುತ್ತ ಮಾತ್ರ ಬರಬಾರದು, ಎಂದು ಕಟ್ಟಪ್ಪಣೆ ಮಾಡಿದನು.

ಹೀಗೆ ಸೈನಿಕರಿಗೆ ಆಜ್ಞೆಮಾಡಿದ ಬಳಿಕ ಡಬ್ಲಿನ ಸಾಹೇಬನು ಎರಡನೆಯ ಬಂಡಿಯ ಶೋಧಕ್ಕೆ ನಡೆದನು. ಆ ಬಂಡಿಯಲ್ಲಿಯೂ ಮೊದಲನೆಯ ಬಂಡಿ ಯಂತೆ ಪ್ರೇತಗಳ ಸುಗ್ಗಿಯು! ಡಬ್ಲಿನ ಸಾಹೇಬನಿಗೆ ಆ ಬಂಡಿಯಲ್ಲಿ ಒಮ್ಮೆಲೆ ಎರಡು ಪ್ರೇತಗಳು ಕಂಡುಬಂದವು. ಈ ಪ್ರೇತಗಳು ಆ ಸರದಾರನ ಸೇವಕ ಕರವು ಇರಬಹುದೆಂದು ತಿಳಿದು ಸಾಹೇಬನು ಅವನ್ನು ಬಂಡಿಯಿಂದ ಹೊರಗೆ ತೆಗೆಯಿಸಿದನು. ಆ ಬಂಡಿಯ ಠೀವಿಯಿಂದ ಇದು ಸೇವಕರ ಬಂಡಿಯೇ ಇರ ಬಹುದೆಂದು ಸ್ಪಷ್ಟವಾಗಿ ಕಂಡುಬಂದಿತು. ಆ ಬಂಡಿಯಲ್ಲಿ ಮೂರು ಮಂದಿ ಸೇವಕರಿದ್ದು, ಇಬ್ಬರು ಮೃತರಾಗಿದ್ದು, ಇನ್ನೊಬ್ಬನು ಓಡಿಹೋಗಿರಬೇಕೆಂದು ತೋರಿತು. ಎರಡೂ ಬಂಡಿಗಳಲ್ಲಿ ಕೂಡಿ ನಾಲ್ಕು ಪ್ರೇತಗಳು ಸಿಕ್ಕರೂ, ಅವು ಗಳಿಗೆ ಒಂದಕ್ಕೂ ಶಸ್ತ್ರಾಘಾತವಾಗಲಿ, ಬೇರೆ ಪೆಟ್ಟುಗಳಾಗಲಿ ಯಾವವೂ ಆಗಿ

ದ್ದಿಲ್ಲ. ಇವರು ಯಾತರಿಂದ ಮೃತಪಟ್ಟಿರಬಹುದೆಂಬದರ ರಹಸ್ಯವೇ ಡಬ್ಲಿನ ಸಾಹೇಬನಿಗೆ ತಿಳಿಯದಾಯಿತು. ಇದಕ್ಕಾಗಿ ಅವನು ತುಂಬಾ ಆಶ್ಚರ್ಯಪಟ್ಟನು.

ಈ ವಿಲಕ್ಷಣ ಹಾಗು ಭಯಂಕರ ಪ್ರಸಂಗದಿಂದ ಡಬ್ಲಿನ ಸಾಹೇಬನ ಮನಸ್ಸಿನ ಮೇಲೆ ವಿಚಿತ್ರ ಪರಿಣಾಮವಾಯಿತು. ಒದಗಿದ ಪ್ರಸಂಗದಿಂದ ಅವನ ಮನಸ್ಸಿಗೆ ತುಂಬಾ ಅಸಮಾಧಾನವುಂಟಾಗಿದ್ದರೂ ತಾಯಿ-ತಂದೆಗಳನ್ನು ಕಳೆದುಕೊಂಡ ಸುಂದರ ಶಿಶುವು ಲಭಿಸಿದ್ದರಿಂದ ಅವನ ಮನಸ್ಸಿನಲ್ಲಿ ಬಗೆ ಬಗೆಯ ಕಲ್ಪನೆಗಳುಂಟಾಗತೊಡಗಿದವು. ಅವನ ಆ ಕಲ್ಪನೆಗಳಿಗೆ ಆ ಶಿಶು ದರ್ಶನವೇ ಕಾರಣವಾದ್ದರಿಂದ ಅವನು ಆ ಶಿಶುವನ್ನು ತನ್ನ ಬಳಿಗೆ ತರಿಸಿ ಕೊಂಡು ಪುನಃ ಪುನಃ ಅದರ ಚುಂಬನವನ್ನು ಹೊಂದತೊಡಗಿದನು.

---

## ೨ನೆಯ ಪ್ರಕರಣ—ಪರದೇಶಕ್ಕೆ ಗಮನ.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಕರ್ನಲ್ ಡಬ್ಲಿನ ಸಾಹೇಬನು ಆ ಸುಂದರ ಶಿಶುವಿನ ಆನಂದದಲ್ಲಿ ಮುಳುಗಿರಲು, ಇನ್ನೂ ರಾತ್ರಿಯು ಬಹಳಿರುವ ದೆಂದು ಅವನಿಗೆ ಕಂಡುಬಂದಿತು. ಅಷ್ಟರಲ್ಲಿ ತನ್ನ ಸೈನಿಕರು ಅಲ್ಲಿಗೆ ಬರಲು, ಅವರಲ್ಲಿ ಕೆಲವರನ್ನಿಟ್ಟುಕೊಂಡು ಉಳಿದವರಿಗೆ ಒಂದು ವಿಸ್ತಾರವಾದ ಬೈಲಲ್ಲಿ ಬೀಡು ಬಿಡಲು ಆಜ್ಞಾಪಿಸಿದನು. ಬಳಿಕ ಅವನು ಸ್ವಲ್ಪ ಹೊತ್ತು ನಿದ್ದೆಮಾಡ ಬೇಕೆಂದು ಪ್ರಯತ್ನಪಟ್ಟನು. ಆದರೆ ಅವನಿಗೆ ನಿದ್ದೆಯು ಹತ್ತದಂತಾಯಿತು. ಆ ಶಿಶುವನ್ನು ದಾಯಿಯ ಬಳಿಯಲ್ಲಿ ಕೊಟ್ಟು ತನ್ನ ಚಿಕ್ಕ ರಾಹುಟಿಯಲ್ಲಿ ಕುಳಿತು ಹಲವು ಬಗೆಯ ವಿಚಾರಗಳಲ್ಲಿ ಮಗ್ನನಾದನು. ಈ ಹುಡುಗನ ತಂದೆಯು ಯಾರು? ಆತನು ಜೀವಂತ ಇರಬಹುದೇ? ಎಂಬ ಮೊದಲಾದ ಯೋಚನೆಗಳನ್ನು ಮಾಡುತ್ತಿದ್ದನು. ಆತನ ಈ ಯೋಚನೆಯಲ್ಲಿ ಬೆಳಗು ಹರಿದು ಹೋಯಿತು. ಡಬ್ಲಿನ ಸಾಹೇಬನು ರಾಹುಟಿಯಿಂದ ಹೊರಗೆ ಬಂದು ಮತ್ತೆ ಆ ಶವಗಳನ್ನು ಪರೀಕ್ಷಿಸಿದನು. ಶವಗಳ ಬಣ್ಣವು ಹಚ್ಚಗಾದ್ದರಿಂದ ಯಾರೋ ದುಷ್ಟರು ಇವರಿಗೆ ವಿಷಭಕ್ಷಣ ಮಾಡಿಸಿರುವರೆಂದು ಆತನಿಗೆ ಕಂಡುಬಂದಿತು. ಬಳಿಕ ಅವನು ಆ ಬಂಡಿಗಳನ್ನೂ, ಪೆಟ್ಟಿಗೆಗಳನ್ನೂ ಮತ್ತೆ ಚನ್ನಾಗಿ ಶೋಧಿಸಿ ದನು. ಒಂದು ಪೆಟ್ಟಿಗೆಯಲ್ಲಿ ಒಂದು ಪತ್ರವು ಸಿಕ್ಕಿತು. ಅದರಲ್ಲಿ—"ನಿನ್ನ ವಿಷಯವಾಗಿ ರಾಜಕೀಯ ವಾತಾವರಣವು ಪ್ರಕ್ಷುಬ್ಧವಾಗಿಗೆ. ನೀನು ಈ

ಪತ್ರ ಕಂಡಕೂಡಲೆ ಇಂಗ್ಲಿಷರ ಆಶ್ರಯಕ್ಕೆ ಹೊರಟು ಹೋಗು; ಇಲ್ಲದಿದ್ದರೆ ನಿನ್ನ ರಾಜ್ಯ-ಲಕ್ಷ್ಮಿಗಳೆಲ್ಲವೂ ಧೂಳಿಸಾತ್ ಆಗುವವಲ್ಲದೆ, ನಿನ್ನ ಪ್ರಾಣವೂ ಉಳಿಯಲಾರದು; ಆದ್ದರಿಂದ ನೀನು ಯಾರಿಗೂ ತಿಳಿಯದಂತೆ ವಿಶ್ವಾಸುಕ ಸೇವಕರೊಡನೆ ರಾಜ್ಯತ್ಯಾಗವನ್ನು ಮಾಡು'' ಎಂಬ ಸಂಗತಿಯಿದ್ದಿತು. ಅದ ರಿಂದ ಈ ಬಂಡಿಯ ಯಜಮಾನನು ಯಾವನೋ ಒಬ್ಬ ಸಂಸ್ಥಾನಿಕನೆಂಬದು ಡಬ್ಲಿನ ಸಾಹೇಬನಿಗೆ ಗೊತ್ತಾಯಿತು; ಆದರೆ ಆತನ ಹೆಸರೇನು-ಸ್ಥಳವಾವುದು? ಎಂಬದು ಗೊತ್ತಾಗಲಿಲ್ಲ. ಬಳಿಕ ಅವನು ಆ ಶೋಧದಕಾರ್ಯವನ್ನು ನಿಲ್ಲಿಸಿ ಆ ಮಗುವನ್ನು ತರಿಸಿಕೊಂಡು ಅದರೊಡನೆ ವಿನೋದದಿಂದ ಕಾಲಕಳೆಯ ತೊಡಗಿದನು.

ಡಬ್ಲಿನ ಸಾಹೇಬನಿಗೆ ಮಕ್ಕಳಿದ್ದಿಲ್ಲ. ತನಗೆ ಸುಂದರ ಮಕ್ಕಳಾಗಬೇಕೆಂದು ಅವನು ಬಹಳವಾಗಿ ಇಚ್ಛಿಸುತ್ತಿದ್ದನು; ಆದರೆ ದುರ್ದೈವದಿಂದ ಆತನ ವಾಂಛಿತವು ಪೂರ್ಣವಾಗಿದ್ದಿಲ್ಲ. ಮಕ್ಕಳಿಲ್ಲದವರಿಗೆ ಪರರ ಮಕ್ಕಳನ್ನು ಕಂಡರೆ ಸಂತೋಷ ವಾಗುವದು. ಅದರಂತೆ ಡಬ್ಲಿನ ಸಾಹೇಬನಿಗೂ ಆ ಸುಂದರ ಶಿಶುವನ್ನು ಕಂಡು ಸಂತೋಷವಾಗಿದ್ದಿತು. ಆತನು ಆ ಹುಡುಗನನ್ನು ಎತ್ತಿಕೊಂಡು ಮುದ್ದಾಡಿ ದನು. ರಾತ್ರಿಯಲ್ಲಿ ದಾಯಿಯ ಮೊಲೆಹಾಲಿನಿಂದ ಸಂತೃಪ್ತನಾದ ಆ ಬಾಲಕನು ಮಂದಹಾಸ ಮುಖದಿಂದ ಬಹು ಮನೋಹರವಾಗಿ ತೋರುತ್ತಿದ್ದನು. ರಾತ್ರಿ ಯಲ್ಲಿ ಹಿಲಾಲಿನ ಬೆಳಕಿನಲ್ಲಿ ಆ ಹುಡುಗನ ಸೌಂದರ್ಯವು ಡಬ್ಲಿನ ಸಾಹೇಬನಿಗೆ ಅಷ್ಟೊಂದು ಚನ್ನಾಗಿ ಕಂಡುಬಂದಿರಲಿಲ್ಲ. ಈಗ ಬೆಳಗಿನಲ್ಲಿ ಬಾಲರವಿಯ ಪ್ರಕಾಶ ದಲ್ಲಿ ಆ ಹುಡುಗನ ಸೌಂದರ್ಯವು ಸಾಹೇಬನನ್ನು ಆನಂದಸಾಗರದಲ್ಲಿ ಮುಳು ಗಿಸಿಬಿಟ್ಟಿತು. ಹುಡುಗನ ಸೌಂದರ್ಯ, ಆತನು ತಾಯಿ-ತಂದೆಗಳನ್ನು ಕಳೆದು ಕೊಂಡು ಅನನ್ಯಗತಿಕನಾದದ್ದು ಇವೆಲ್ಲ ಲಕ್ಷದಲ್ಲಿ ಒಂದು ಆ ಸಾಹೇಬನ ಪ್ರೇಮವು ಆ ಹುಡುಗನ ಮೇಲೆ ಕ್ಷಣ-ಕ್ಷಣಕ್ಕೆ ಹೆಚ್ಚಾಗತೊಡಗಿತು.

ಮನುಷ್ಯನು ಸ್ವಾರ್ಥಪ್ರಿಯನಿರುತ್ತಾನೆ. ಅವನು ಯಾವಾಗಲೂ ತನ್ನ ಉನ್ನತಿಯ ಕಡೆಗೂ, ಹಾಗು ಸುಖದ ಕಡೆಗೂ ಲಕ್ಷ್ಯಗೊಡುತ್ತಿರುತ್ತಾನೆ. ಸಭ್ಯಜನರು ಪರರಿಗೆ ದುಃಖಕೊಡದ ಹಾಗೆ ತಮ್ಮ ಸ್ವಾರ್ಥವನ್ನು ಸಾಧಿಸಿ ಕೊಳ್ಳುತ್ತಾರೆ; ಆದರೆ ದುರ್ಜನರು ಪರರಿಗೆ ದುಃಖಕೊಟ್ಟು ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೆ. ಇದು ಮಾತ್ರ ನಿಂದ್ಯವಾದದ್ದು. ಇದಕ್ಕೆ ನೀಚ ಸ್ವಾರ್ಥವೆಂಬ ಹೆಸರು. ಡಬ್ಲಿನ ಸಾಹೇಬನು ಸಭ್ಯನೂ, ಕುಲೀನನೂ ಆದ

ದ್ದರಿಂದ ಆತನ ಸ್ವಾರ್ಥಪ್ರಿಯತೆಯಲ್ಲಿ ಯಾವ ಬಗೆಯ ದೋಷವೂ ಇದ್ದಿಲ್ಲ. ಈಶ್ವರನು ಈ ಮಗುವನ್ನು ತನಗೆ ದಯಪಾಲಿಸಿದ್ದರೂ ಈ ಶಿಶುವಿನ ಆಪ್ತರನ್ನು ಶೋಧಹಚ್ಚಬೇಕು. ಒಂದುವೇಳೆ ಯಾವ ಶೋಧವೂ ಆಗದಿದ್ದರೆ ಈ ಈ ಶಿಶುವನ್ನು ತಾನೇ ಸಂರಕ್ಷಿಸಬೇಕು, ಎಂದು ಮನದಲ್ಲಿ ನಿರ್ಧರಿಸಿದನು. ಈ ನಿರ್ಧಾರದಿಂದ ಆತನಿಗೆ ತನ್ನ ಹೊಟ್ಟೆಯಲ್ಲಿಯೇ ಸಂತತಿಯಾದಷ್ಟು ಸಂತೋಷವಾಯಿತು.

ಡಬ್ಲಿನ ಸಾಹೇಬನು ಎರಡು-ಮೂರು ತಾಸುಗಳವರೆಗೆ ಆ ಶಿಶುವಿನ ಸಂಗಡ ವಿನೋದದಿಂದ ಕಾಲಕ್ರಮಿಸಿ, ಆ ಶಿಶುವಿನಲ್ಲಿ ತನ್ನ ವಿಷಯವಾಗಿ ಪ್ರೇಮವುತ್ಪನ್ನವಾಗಬೇಕೆಂದು ಪ್ರಯತ್ನಿಸಿದನು. ಈಶ್ವರೀ ಮಾಯೆಯಿಂದಲೋ ಅಥವಾ ಪೂರ್ವಜನ್ಮದ ಋಣಸಂಬಂಧದಿಂದಲೋ ಆ ಶಿಶುವು ಡಬ್ಲಿನನ್ನು ನೋಡಿ ಸಂತೋಷಪಡಹೊಡಗಿತು. ಸ್ವಭಾವತಃ ಆ ಶಿಶುವು ಒಳ್ಳೇ ಸಮಾಧಾನವುಳ್ಳದ್ದಾದ್ದರಿಂದ ಸಾಹೇಬನಿಗೆ ತನ್ನ ಇಷ್ಟವು ಕೈಗೂಡುವದೆಂದು ಸ್ಪಷ್ಟವಾಗಿ ತೋರಿತು. ಇಷ್ಟರಲ್ಲಿ ಮಧ್ಯಾಹ್ನವಾಯಿತು. ಕಳ್ಳರ ಶೋಧಕ್ಕಾಗಿ ಹೋದವರು ಒಬ್ಬೊಬ್ಬರೇ ತಿರುಗಿ ಬರಲಾರಂಭಿಸಿದರು. ಎರಡು-ಮೂರು ಗುಂಪಿನವರು ಬಂದರು; ಆದರೆ ಕಳ್ಳರ ಸುತ್ತ್ರಾವು ಸುದ್ದಿ ಸಹ ಅವರಿಗೆ ಗೊತ್ತಾಗಲಿಲ್ಲ. ನಾಲ್ಕನೆಯ ಗುಂಪಿನವರು ಬಂದರು. ಸಾಹೇಬನು ಅವರೆಲ್ಲರ ಈ ದಡ್ಡತನಕ್ಕೆ ತುಂಬಾ ಸಿಟ್ಟುಮಾಡಿದನು. ಒಳಿಕ ಸಾಹೇಬನ ಮನಸ್ಸಿನಲ್ಲಿ ಒಂದು ವಿಚಾರ ಬಂದಿತು. ಈ ಶವಗಳನ್ನು ಇಲ್ಲಿಯೇ ಸಂಸ್ಕಾರಗೊಳಿಸದೆ, ಸಮೀಪದ ಒಂದು ಹಳ್ಳಿಗೆ ಹೋಗಿ ಅಲ್ಲಿಯ ಜನರಿಗೆ ಈ ಶವಗಳನ್ನು ತೋರಿಸಬೇಕು. ಅವರಲ್ಲಿ ಯಾರಾದರೂ ಇವುಗಳ ಗುರುತು ಹಿಡಿದರೆ ಮುಂದಿನ ಕೆಲಸಕ್ಕೆ ಸಹಾಯವಾಗುವದು. ಈ ಮೇರೆಗೆ ಯೋಚಿಸಿ, ಸಾಹೇಬನು ಆ ಶವಗಳನ್ನು ಬಂಡಿಯಲ್ಲಿ ಮಲಗಿಸಿ ಒಂದು ಹಳ್ಳಿಗೆ ತಕ್ಕೊಂಡು ಹೋದನು.

ಆ ಹಳ್ಳಿಯ ಜನರಿಗೆ ಈ ಸಂಗತಿಯು ಮೊದಲೇ ಗೊತ್ತಾಗಿದ್ದಿತು. ಆ ಊರ ಅಗಸೆಯಲ್ಲಿ ಒಬ್ಬ ಅಂಗಡಿಕಾರನ ಮನೆಯಿದ್ದಿತು. ಅವನ ಮನೆಯ ಮುಂದೆ ಈ ಬಂಡಿಗಳು ಹೋಗಿ ನಿಂತವು. ಕೆಲಜನ ಸ್ವಾರರೂ, ಸಾಹೇಬನೂ ಅವನ ಮನೆಯ ಪಡಸಾಲೆಯನ್ನೇರಿದರು. ಅಂಗಡಿಯವನು ಗಾಬರಿಯಾದನು. ಸಾಹೇಬನು ತನ್ನನ್ನು ಹಿಡಿದುಕೊಂಡು ಹೋಗುವನೆಂದು ತಿಳಿದು,

ಅವನು ಗಾಬರಿಯಾಗಿ:—ಸ್ವಾಮಿ, ಇದರಲ್ಲಿ ನನ್ನದೇನೂ ತಪ್ಪಿಲ್ಲ. ಅಂಗಡಿಕಾರನಾದ ನಾನು ಮುಂದಿಗೆ ವಿಷಕೂಡಿಸಿ ಪದಾರ್ಥಗಳನ್ನು ಕೊಟ್ಟರೆ ನನ್ನ ಉದ್ದಿಮೆಯು ಹ್ಯಾಗೆ ಸಾಗೀತು!" ಎಂದು ಹೇಳಿಕೊಳ್ಳಲಾರಂಭಿಸಿದನು. ಆ ಅಂಗಡಿಕಾರನ ಮಾತು ಕೇಳಿ, ಡಬ್ಲಿನ ಸಾಹೇಬನಿಗೆ ಆಶ್ಚರ್ಯವಾಯಿತು! ಈತನಿಗೆ ಇವರ ಪರಿಚಯುವಿರಬೇಕು. ಇವನನ್ನು ಬೆದರಿಸಿದರೆ ಇದರ ರಹಸ್ಯವು ಹೊರಬೀಳುವದು, ಎಂದು ಯೋಚಿಸಿ:—"ಎಲೋ, ನೀನು ಹೀಗೆ ಹೇಳಿಕೊಂಡರೆ ನಾವು ಕೇಳುವದಿಲ್ಲ. ಈ ಶವಗಳು ಯಾರವು? ಇವರನ್ನು ಹೀಗೆ ಕೊಂದವರಾರು? ಎಂಬ ನಿಜವಾದ ಸಂಗತಿಯನ್ನು ಹೇಳಿದ ಹೊರತು ನಿನ್ನನ್ನು ನಾವು ಬಿಡಲಾರೆವು. ವ್ಯರ್ಥವಾಗಿ ದುಃಖಕ್ಕೆ ಗುರಿಯಾಗಬೇಡ. ನಿನಗೆ ಗೊತ್ತಿದ್ದ ಸಂಗತಿಗಳನ್ನು ಹೇಳೆಂದು ಗದ್ದರಿಸಿದನು. ಆಗ ಅಂಗಡಿಕಾರನು ನನಗೆ ಗೊತ್ತಿದ್ದಷ್ಟು ಸಂಗತಿಗಳನ್ನು ಹೇಳುತ್ತೇನೆ ಸ್ವಾಮಿ, ಎಂದು ನುಡಿದು ಹೇಳಲುಪಕ್ರಮಿಸಿದನು:—

"ಈ ಜನರು ಯಾವ ಊರವರು ಎಂಬದು ನನಗೆ ಗೊತ್ತಿಲ್ಲ. ಇವರು ನಿನ್ನೆ ಹೊತ್ತುಮುಳುಗುವ ಮುಂದೆ ನಮ್ಮ ಗ್ರಾಮಕ್ಕೆ ಬಂದರು. ಇವರ ರೀತಿಯಿಂದ ಇವರು ದೊಡ್ಡ ಶ್ರೀಮಂತರಿರಬಹುದೆಂದು ತಿಳಿದೆನು. ಒರಿಯು ಶ್ರೀಮಂತರೇ ಯಾಕೆ ಯಾವನೋ ಒಬ್ಬ ರಾಜನಿರಬಹುದೆಂದು ನನಗೆ ತೋರಿತು. ಯಾವದೋ ಒಂದು ಆಪತ್ತು ಬಂದದ್ದರಿಂದ ಇವರು ಹೀಗೆ ತಪ್ಪಿಸಿಕೊಂಡು ಬಂದಿರಬಹುದೆಂದು ತಿಳಿದೆನು. ಎರಡೂ ಬಂಡಿಗಳಲ್ಲಿ ಕೂಡಿ ೮ ಜನರಿದ್ದರು. ಬಂಡೀ ಹೊಡೆಯುವವರು ಇಬ್ಬರು ಬೇರೆ. ಮೂವರು ಹೆಣ್ಣುಮಕ್ಕಳಿದ್ದರು. ಅವರಲ್ಲಿ ಒಬ್ಬಳು ಆ ರಾಜನ ಹೆಂಡತಿಯಾಗಿದ್ದು, ಉಳಿದಿಬ್ಬರು ದಾಸಿಯರಿರಬಹುದೆಂದು ತಿಳಿದೆನು. ಆ ರಾಜನು ಒಳ್ಳೇ ಸುಂದರನಿದ್ದನು. ಈ ಸ್ತ್ರೀ ಪ್ರೇತವು ಆತನ ಹೆಂಡತಿಯದೇ ಇರಬೇಕು. ಇವಂಗೆ ಒಬ್ಬ ಕಾರಭಾರಿಯು ಇದ್ದನು. ಎದುರಿಗೆ ಕಾಣುವ ಆ ತೋಟದಲ್ಲಿ ಅಡಿಗೆ ಮಾಡಿಕೊಂಡರು. ನಾನು ಇವರಿಗೆ ಯಥೇಷ್ಟವಾಗಿ ಹಾಲು-ಮೊಸರನ್ನು ಕೊಟ್ಟೆನು. ಅತ್ತಕಡೆಗೆ ಕಾಣುವ ಮಾವಿನ ಗಿಡಗಳ ಗುಂಪಿನಲ್ಲಿ ೮-೧೦ ಜನ ಬೈರಾಗಿಗಳಿದ್ದರು. ಅವರ ಬಳಿಗೆ ಇವರಲ್ಲಿದ್ದ ಒಬ್ಬ ದಾಸಿಯು ೨-೩ ಸಾರೆ ಹೋಗಿ ಬಂದಳು. ಆ ಕಾರಭಾರಿಯೂ ಹೋಗಿ ಬಂದನು. ಆದರೆ ಅವರ ಕಾರಸ್ಥಾನವು ನಮಗೆ ಹ್ಯಾಗೆ ತಿಳಿಯಬೇಕು? ಆ ರಾಜನಿಗೂ ತಿಳಿದಂತೆ ತೋರಲಿಲ್ಲ. ಆ ದಾಸಿ ಹಾಗು ಕಾರ

ಭಾರಿ ಇವರಿಬ್ಬರೂ ಸೇರಿ, ಆ ಬೈರಾಗಿಗಳ ಸಹಾಯದಿಂದ ಇಂಥ ಅನಾಹುತ ವನ್ನು ಮಾಡಿರಬಹುದೆಂದು ನನಗೆ ಈಗ ಹೊಳೆಯುತ್ತಿದೆ.''

ಈ ಮೇರೆಗೆ ಅಂಗಡಿಕಾರನು ನುಡಿಯಲು, ಕರ್ನಲ ಡಬ್ಲಿನನು ಅಂಗಡಿ ಕಾರನು ಹೇಳಿದ ಸಂಗತಿಯು ನಿಜವಿರಬಹುದೆಂದು ತಿಳಿದು ಈ ಬಗ್ಗೆ ಇನ್ನು ಹೆಚ್ಚು ವಿಚಾರಿಸಿ ಪ್ರಯೋಜನವಿಲ್ಲೆಂದು ಆ ಊರ ಬಳಿಯಲ್ಲಿಯೇ ಆ ಶವಗ ಳನ್ನು ಸಂಸ್ಕಾರಗೊಳಿಸಲು ಅಪ್ಪಣೆಕೊಟ್ಟು, ಆ ಬಂಡಿಗಳನ್ನು ಆಊರಲ್ಲಿ ಬಡವ ರಾದವರಿಗೆ ಉಚಿತವಾಗಿ ಕೊಟ್ಟು ದಂಡು ಬೀಡುಬಿಟ್ಟಲ್ಲಿಗೆ ನಡೆದನು.

ದಾರಿಯಲ್ಲಿ ಸಾಹೇಬನ ಮನಸ್ಸಿನಲ್ಲಿ ಹಲವು ವಿಚಾರಗಳು ಬಂದವು. ಈ ಬಾಲಕನಂತೂ ನಮ್ಮ ಪದರಿನಲ್ಲಿ ಬಿದ್ದನು. ಈತನ ತಂದೆಯ ಶೋಧವಾಗಲಿ, ಅಥವಾ ಬೇರೆ ಆಪ್ತರ ಶೋಧವಾಗಲಿ ಆಗುವದು ಶಕ್ಯವಿಲ್ಲ. ಈ ಬಾಲಕನನ್ನು ನಾನೇ ಜೋಪಾನ ಮಾಡಬೇಕೆಂದರೆ ಈತನು ಹಿಂದುವು, ನಾನು ಯುರೋಪಿ ಯನ್ನನು. ನಮ್ಮ ಜನರಿಗೆ ಈ ಸಂಗತಿಯು ಗೊತ್ತಾದರೆ ಅವರು ನನ್ನನ್ನು ನಿಂದಿ ಸದೆ ಇರಲಾರರು. ಯುರೋಪದಲ್ಲಿ ಡಬ್ಲಿನ ಮನೆತನವೆಂದರೆ ಬಹಳ ಗೌರವಕ್ಕೆ ಪಾತ್ರವಾದದ್ದು, ದರ್ಬಾರದಲ್ಲಿಯೂ ನಮಗೆ ಮನ್ನಣೆ ಹೆಚ್ಚು! ಹೀಗಿದ್ದು, ಈ ಹಿಂದೂ ಬಾಲಕನ ಸಲುವಾಗಿ ನಮ್ಮ ಮಾನ-ಮರ್ಯಾದೆಗಳೆಲ್ಲ ಹೊರಟು ಹೋಗುವವು. ಇನ್ನು ಈ ಹುಡುಗನನ್ನು ಯಾರಿಗಾದರೂ ಹಿಂದುಗಳಿಗೆ ಕೊಟ್ಟು ಬಿಡಬೇಕೆಂದರೆ ನನ್ನ ಮನಸ್ಸು ಒಪ್ಪದು. ಬಹಳ ಹೇಳುವದೇನು? ಈ ಶಿಶುವಿನ ವಿಯೋಗವನ್ನು ಒಂದು ತಾಸಾದರೂ ಸಹಿಸಲು ನನಗೆ ಅಶಕ್ಯವಾಗಿರುವದು. ಇಂಥ ನನ್ನ ಪಂಚಪ್ರಾಣವಾದ ಈ ಶಿಶುವನ್ನು ಬೇರೆಯವರಿಗೆ ಕೊಟ್ಟುಬಿಡು ವದು ನನ್ನಿಂದ ಸಾಧ್ಯವೇ ಇಲ್ಲ. ಹಾಗಾದರೆ ಹ್ಯಾಗೆ ಮಾಡಬೇಕು? ನನ್ನ ಪ್ರೇಮಕ್ಕೆ ಪಾತ್ರವಾದ ಈ ಶಿಶುವನ್ನು ನಾನು ಸಂರಕ್ಷಿಸಬೇಕೆಂದರೆ ಜಾತಿಯ ನಿರ್ಬಂಧದಿಂದ ನನಗೆ ಸ್ವಾತಂತ್ರ್ಯವಿರಬಾರದೆಂದರೆ ಕೇವಲ ಅನ್ಯಾಯವು! ಆದರೆ ಈ ನ್ಯಾಯಾ-ನ್ಯಾಯವನ್ನು ಈಗ ಕೇಳುವವರಾರು? ಈ ಬಾಲಕನು ಹಿಂದು ವೆಂದು ತಿಳಿದ ಕೂಡಲೆ ನನ್ನ ಜಾತಿ-ಬಾಂಧವರ ಮೋರೆಗಳು ಕರ್ರಗಾಗುವವು. ನನ್ನನ್ನು ದೂಷಿಸಹತ್ತುವರು. ಇದಕ್ಕಾಗಿ ಒಂದು ಹಂಚಿಕೆಯನ್ನು ಮಾಡಬೇಕು ಹಂಚಿಕೆ ಮಾಡದಿದ್ದರೆ ಕೆಲಸವು ಕೆಟ್ಟುಹೋಗುವದು. ನನ್ನ ಗೌರವವೂ ನನಗೆ ಉಳಿಯಬೇಕು. ಈ ಬಾಲಕನೂ ನನಗೆ ಲಭಿಸಬೇಕು. ಇವೆರಡೂ ಕೆಲಸಗಳು ಸಾಧಿಸುವಂತೆ ಯಾವ ಹಂಚಿಕೆ ಹಾಕಬೇಕು, ಎಂದು ಯೋಚಿಸಿದನು. ಕೂಡಲೆ

ಅವನಿಗೊಂದು ಯುಕ್ತಿಯು ಹೊಳೆಯಿತು.. ಇದರಂತೆ ನಡೆದರೆ ಒಳ್ಳೇದಾಗು ವದು, ಎಂದು ಭಾವಿಸಿ, ಆತನು ಸಮಾಧಾನವನ್ನು ತಾಳಿದನು.

ಈ ಮೇರೆಗೆ ಡಬ್ಲಿನ ಸಾಹೇಬನು ಸಮಾಧಾನವ ತಳೆಯುತ್ತಿರಲು, ಭಾವಣೆಯು ಬಂದಿತು. ಕೂಡಲೆ ಅವನು ಅಲ್ಲಿಂದ ಹೊರಡಲಿಕ್ಕೆ ದಂಡಿಗೆ ಅಪ್ಪಣೆ ಕೊಟ್ಟನು. ಕಲಕತ್ತಾ ನಗರಾಭಿಮುಖವಾಗಿ ಸೈನ್ಯವು ಪಯಣದ ಮೇಲೆ ಪಯಣ ಮಾಡುತ್ತ ಸಾಗಿತು.

ಇನ್ನು ನಾಲ್ಕು ದಿನಗಳ ದಾರಿಯನ್ನು ಕ್ರಮಿಸಿದರೆ ಕಲಕತ್ತಾ ನಗರಿ ಯನ್ನು ಮುಟ್ಟುವಷ್ಟು ಅಂತರದಲ್ಲಿ ಒಂದು ದಿನ ದಂಡಿನ ಬೀಡು ಬಿಟ್ಟಿತು. ಆಗ ಸಾಹೇಬನು ತಾನು ಯೋಚಿಸಿದಂತೆ ಕಾರ್ಯವನ್ನು ಸಾಧಿಸಿಕೊಳ್ಳ ಬೇಕೆಂದು ತಾನು ಕಲಕತ್ತಾನಗರಕ್ಕೆ ಹೋಗದೆ ಬರಿಯ ಸೈನಿಕರಿಗೆ ಹೋಗಲು ಅಪ್ಪಣೆ ಕೊಟ್ಟನು; ಮತ್ತು ದಂಡಿನಲ್ಲಿ, ಆ ಕೂಸನ್ನು ಸಂರಕ್ಷಿಸಿದ ದಾಯಿಯ ಮುಖಾಂತರವಾಗಿ ಡಬ್ಲಿನ ಸಾಹೇಬರು ಈ ಹಿಂದೂ ಶಿಶುವನ್ನು ಅದರ ಆಪ್ತರನ್ನು ಶೋಧಿಸಿ, ಅವರಿಗೆ ಕೊಟ್ಟುಬಿಡುವರಂತೆ, ಎಂಬ ಸುದ್ದಿಯನ್ನು ಹಬ್ಬಿಸಿದನು. ಸೈನಿಕರಿಗೆ ಈ ಸಂಗತಿಯು ನಿಜವೆಂದು ತೋರಿತು. ಯಾಕಂ- ದರೆ ಯುರೋಪಿಯನ್ನ ಗೃಹಸ್ಥನು ಯಾವನೊಬ್ಬ ಹಿಂದೂ ಬಾಲಕನನ್ನು ಕೊನೆಯವರೆಗೆ ಸಂರಕ್ಷಿಸುವದು ಅಶಕ್ಯವೆಂದು ಅವರು ಮೊದಲೇ ಭಾವಿಸಿ ದ್ದರು. ಈ ಸುದ್ದಿಯಿಂದ ತಾವು ಗ್ರಹಿಸಿದ್ದೇ ನಿಜವೆಂದು ಅವರು ತಿಳಿದದ್ದು ಸ್ವಾಭಾವಿಕವೇ ಸರಿ!

ಡಬ್ಲಿನ ಸಾಹೇಬನು ಒಬ್ಬ ದಾಯಿ ಹಾಗು ಇಬ್ಬರು ಮೂವರು ವಿಶ್ವಾ ಸುಕ ಹಿಂದೂ ಸೇವಕರು ಇಷ್ಟು ಜನರ ಹೊರತು ಉಳಿದ ಎಲ್ಲ ಜನರನ್ನು ಕಳುಹಿಸಿದನು. ಆ ಜನರ ಸಂಗಡ ಕಲಕತ್ತೆಯ ಲೆಫ್ಟನೆಂಟ ಗವ್ಹರ್ನರರಿಗೆ ಒಂದು ಪತ್ರವನ್ನೂ, ತನ್ನ ಹೆಂಡತಿಗೆ ಒಂದು ಪತ್ರವನ್ನೂ ಕಳಿಸಿದ್ದನು. ಹೆಂಡತಿಗೆ ಬರೆದ ಪತ್ರದಲ್ಲಿ ಬೇರೆ ಯಾವ ಸಂಗತಿಯನ್ನೂ ಬರೆಯದೆ ನೀನು ಈ ಪತ್ರ ಕಂಡ ಕೂಡಲೆ ನನ್ನ ಬಳಿಗೆ ಹೊರಟು ಬಾ ಎಂಬದಿಷ್ಟೇ ಸಂಗತಿಯನ್ನು ಬರೆದಿದ್ದನು.

ಸೈನಿಕರು ಕಲಕತ್ತಾ ನಗರವನ್ನು ಮುಟ್ಟಿ ಡಬ್ಲಿನ ಸಾಹೇಬರು ತಮಗೆ ದಾರಿಯಲ್ಲಿ ದೊರೆತ ಹಿಂದೂ ಶಿಶುವನ್ನು ಯೋಗ್ಯ ಹಿಂದುವನ್ನು ನೋಡಿ ಒಪ್ಪಿ ಸಲು ನಿಂತುಕೊಂಡಿರುವ ಸುದ್ದಿಯನ್ನು ಹೇಳಿದರು. ಈ ಸಂಗತಿಯನ್ನು ಕಲ

ಕತ್ತ್ರಿಯಲ್ಲಿದ್ದ ಎಲ್ಲ ಯುರೋಪಿಯನ್ನರೂ ನಿಜವೆಂದು ನಂಬಿದರು. ಗಂಡನ ಪತ್ರವನ್ನು ನೋಡಿ ಲೇಡೀ ಡಬ್ಲಿನಳು ಕಲಕತ್ತ್ರೆಯಿಂದ ಹೊರಟು ಗಂಡನು ಯಾವ ಹಳ್ಳಿಯಲ್ಲಿ ಇಳಿದುಕೊಂಡಿದ್ದನೋ ಅಲ್ಲಿಗೆ ಬಂದಳು. ಆಗ ಡಬ್ಲಿನ ಸಾಹೇಬನು ಒಬ್ಬನೇ ತನ್ನ ಡೇರೆಯಲ್ಲಿ ಕುಳಿತುಕೊಂಡಿದ್ದನು. ಲೇಡೀ ಡಬ್ಲಿನಳು ಬರಲು ತಮ್ಮ ಪದ್ಧತಿಯಂತೆ ಯೋಗಕ್ಷೇಮದ ಸಂಗತಿಗಳಾದ ಬಳಿಕ ಡಬ್ಲಿನ ಸಾಹೇಬನು ಹೆಂಡತಿಯನ್ನು ಕುರಿತು:—ಪ್ರಿಯೇ, ಬಹು ದಿವಸಗಳ ವರೆಗೆ ಮಕ್ಕಳಿಲ್ಲವೆಂದು ಚಡಪಡಿಸುವ ನಿನಗೆ ದಯಾಳುವಾದ ದೇವರು ಒಂದು ಮಗುವನ್ನು ದಯಪಾಲಿಸಿದ್ದಾನೆ. ನಮ್ಮ ಹೊಟ್ಟೆಯಲ್ಲಿ ಹುಟ್ಟದಿದ್ದರೂ ದೇವರ ದಯದಿಂದ ಪ್ರಾಪ್ತವಾದ ಆ ಮಗುವು ನಮಗೆ ಹೊಟ್ಟೆಯಲ್ಲಿ ಹುಟ್ಟಿದ ಶಿಶುವಿಗಿಂತಲೂ ಹೆಚ್ಚು ಪ್ರೀತ್ಯಾಸ್ಪದವಾದದ್ದೇ ಸರಿ! ನೀನು ಆ ಮಗುವನ್ನು ಚನ್ನಾಗಿ ಸಂರಕ್ಷಿಸುವಿಯೆಂದು ನಂಬುತ್ತೇನೆ, ಎಂದನು.

ಲೇಡೀ ಡಬ್ಲಿನಳು:—(ಸ್ವಲ್ಪ ಅಸಮಾಧಾನ-ಆಶ್ಚರ್ಯಗಳಿಂದ) ದೇವರು ನಮಗೆ ಹೊಟ್ಟೆಯಲ್ಲಿ ಸಂತತಿಯನ್ನು ಕೊಡದಿದ್ದರೂ; ಜೋಪಾನಮಾಡುವ ದಕ್ಕಾಗಿಯಾದರೂ ಒಂದು ಮಗುವನ್ನು ಕೊಟ್ಟನು. ಇದಕ್ಕಾಗಿ ನಾವು ಆತನ ದಯಾಳುತನವನ್ನು ಕೊಂಡಾಡೋಣ! ನಿಮಗೆ ದೊರೆತ ಆ ಮಗುವು ಎಲ್ಲಿದೆ?

ಕೂಡಲೆ ಕರ್ನಲ್ ಡಬ್ಲಿನ ಸಾಹೇಬನು ದಾಯಿಯನ್ನು ಕೂಗಿ ಮಗುವನ್ನು ತರಲು ಆಜ್ಞಾಪಿಸಿದನು. ಮುಂದೆ ಕ್ಷಣ ಹೊತ್ತಿನಲ್ಲಿ ದಾಯಿಯು ಆ ಸುಂದರ ಶಿಶುವನ್ನು ಎತ್ತಿಕೊಂಡು ಬಂದಳು. ಆ ಶಿಶುವನ್ನು ನೋಡಿ ಲೇಡಿ ಡಬ್ಲಿನಳು ಹರುಷನಿರ್ಭರಳಾದಳು. ಆಕೆಯ ತೋಳುಗಳು ಆ ಕೂಸನ್ನೆತ್ತಿ ಕೊಳ್ಳಲು ಆತುರಪಟ್ಟವು. ಆಕೆಯು ಆ ಮಗುವನ್ನು ಎದೆಗವಚಿಕೊಂಡು ನೂರಾರು ಬಾರಿ ಆ ಕೂಸಿನ ಚುಂಬನವನ್ನು ತಕ್ಕೊಂಡಳು. ಆ ಕೂಸಿನ ಸುಂದರ ಮುಖ, ಶುದ್ಧ ಸುವರ್ಣವನ್ನು ಕೂಡಾ ಹೀಯಾಳಿಸುವಂಥ ಮೈಬಣ್ಣ, ಸತೇಜವೂ, ಕೆಂಪು ವರ್ಣದವೂ ಆದ ತಲೆಗೂದಲು, ತಿದ್ದಿ ಮಾಡಿದಂತಿದ್ದ ಮೈ-ಕಟ್ಟು ಇವುಗಳನ್ನು ನೋಡಿ—ಡಬ್ಲಿನ! ಈ ಕೂಸು ನಿಮಗೆ ಎಲ್ಲಿ ದೊರೆಯಿತು? ಇದು ಯಾವನೋ ಒಬ್ಬ ಶ್ರೀಮಂತ ಯುರೋಪಿಯನ್ ಗೃಹಸ್ಥನದಾಗಿರುವಂತೆ ತೋರುತ್ತದೆ. ಪಾಪ! ಈ ಕೂಸಿನ ತಾಯಿ-ತಂದೆಗಳು ಯಾವ ವಿಪತ್ತಿಗೆ ಗುರಿಯಾಗಿರಬಹುದು? ಎಂದಳು.

ಡಬ್ಲಿನ ಸಾಹೇಬನು:—ಅಹುದು! ಈ ಶಿಶುವು ನಮ್ಮ ಒಬ್ಬ ಜಾತಿಬಂಧು ವಿನದು, ಅಡವಿಯಲ್ಲಿ ಒಂದು ಮರದಡಿಯಲ್ಲಿ ಅಳುತ್ತ ಬಿದ್ದಿತ್ತು. ನಮ್ಮ ಸುದೈವ ದಿಂದ ನಮಗೆ ಲಭಿಸಿದೆ. ಯಾಕೆ ಕೂಸು ಲಕ್ಷಣವಾಗಿದೆಯೋ ಇಲ್ಲವೋ?

ಲೇಡಿ ಡಬ್ಲಿನ:—ಡಬ್ಲಿನ, ಈ ಕೂಸು ನಮಗೆ ಸ್ಥಿರವಾಗಿ ಲಭಿಸಿದರೆ, ನಮ್ಮ ಸಮಾನ ಭಾಗ್ಯವಂತರು ಇನ್ನಾರಿರುವರು! ಇಂಗ್ಲಂಡದಲ್ಲಿ ಒಳ್ಳೇ ಸುಂದರ ಶಿಶುಗಳು ಎನಿಸುವಂಥವು ಸಹ ಈ ಶಿಶುವನ್ನು ಸರಿಗಟ್ಟಲಾರವು; ಆದರೆ ಈ ಶಿಶುವು ನಮಗೆ ಸ್ಥಿರವಾಗಿ ಲಭಿಸುವ ಬಗೆಯೆಂತು? ನಾವು ಇಂಗ್ಲಂ ಡಕ್ಕೆ ಹೋದಬಳಿಕ ಈ ಶಿಶುವಿನ ಆಪ್ತೇಷ್ಟರು ಯಾರಾದರೂ ಈ ಶಿಶುವನ್ನು ಬೇಡಿದರೆ ಆಗ ನಮಗೆ ಎಷ್ಟು ದುಃಖವಾಗಬಹುದು?

ಡಬ್ಲಿನಸಾಹೇಬ:—ಪ್ರಿಯೇ, ಇನ್ನು ಸುಳ್ಳು ಮಾತಿನಿಂದ ಪ್ರಯೋಜನ ವಿಲ್ಲ. ನಿನಗೆ ಈ ಕೂಸಿನ ನಿಜವಾದ ಸಂಗತಿಯನ್ನು ಹೇಳುತ್ತೇನೆ ಕೇಳು. ಈ ಶಿಶುವು ಹಿಂದುಗಳದು. ಇದರ ತಾಯಿಯು ನಾನು ನೋಡಿದ ಬಂಡಿಯಲ್ಲಿಯೇ ಮೃತವಾಗಿದ್ದಳು. ತಂದೆಯು ಎಲ್ಲಿಗೋ ಜೀವ ಉಳಿಸಿಕೊಂಡು ಓಡಿಹೋಗಿರು ವನು; ಆದರೂ ಅವನು ಈಗಿನ ಪರಿಸ್ಥಿತಿಯಲ್ಲಿ ಬದುಕಿ ಉಳಿದಿರುವನೆಂದು ಹೇಳ ಲಿಕ್ಕೆ ಶಕ್ಯವಿಲ್ಲ. ಈ ಕೂಸಿನ ಆಪ್ತೇಷ್ಟರನ್ನು ಶೋಧಿಸಿದೆನು. ಯಾರೂ ಸಿಕ್ಕ ಲಿಲ್ಲ; ಆದ್ದರಿಂದ ದೇವರು ಈ ಕೂಸನ್ನು ನಮಗಾಗಿಯೇ ಹುಟ್ಟಿಸಿರುವನೆಂದು ತಿಳಿದೆನು. ಈ ಕೂಸನ್ನು ಬೇರೆಯವರು ಯಾರಾದರೂ ಬೇಡಿಯಾರೆಂಬ ಅಂಜಿ ಕೆಯು ಎಷ್ಟು ಮಾತ್ರಕ್ಕೂ ಇರುವದಿಲ್ಲ.

ಹಿಂದುವು ಎಂಬ ಸಂಗತಿಯನ್ನು ಕೇಳಿದರೂ ಲೇಡೀ ಡಬ್ಲಿನಳಲ್ಲಿ ಆ ಕೂಸಿನ ವಿಷಯಕ್ಕೆ ತಿರಸ್ಕಾರವುಂಟಾಗಲಿಲ್ಲ. ಅವಳಲ್ಲಿ ಸ್ನೇಹವು ಮಾತ್ರ ಮತ್ತಿಷ್ಟು ಹೆಚ್ಚಿತು. ಆಗ ಅವಳು ಗಂಡನನ್ನು ಕುರಿತು:—ಡಬ್ಲಿನ, ಈ ಸಂಗತಿಯು ನಮ್ಮ ಜಾತಿ ಬಾಂಧವರಿಗೆ ತಿಳಿದರೆ ಹ್ಯಾಗೆ? ಹಿಂದುವು ಯುರೋಪಿಯನ್ನನಂತೆ ಮಾನಕ್ಕೆ ಹ್ಯಾಗೆ ಪಾತ್ರನಾದಾನು? ಎಂದು ನುಡಿದಳು.

ಕರ್ನಲ್ಲ ಡಬ್ಲಿನ ಸಾಹೇಬ:—ಇದಕ್ಕಾಗಿಯೇ ನಿನ್ನನ್ನು ಇಲ್ಲಿಗೆ ಕರೆ ಯಿಸಿಕೊಂಡದ್ದು! ನಾನು ಈಗ ಕಲಕತ್ತೆಗೆ ಹೋಗುವದಿಲ್ಲ. ಐದುವರುಷಗಳ ರಜೆಯನ್ನು ಬೇಡಿದ್ದೇನೆ. ರಜೆಯು ಮುಂಜೂರಾಗಿ ಬಂದೊಡನೆ ಪರದೇಶ ಗಳಲ್ಲಿ ಸಂಚರಿಸಿ ಇಂಗ್ಲಂಡಕ್ಕೆ ಹೋಗೋಣ! ಈ ಬಾಲಕನು ನಮ್ಮ ಜಾತಿಯ ಶಿಶುವಿನಂತೆಯೇ ಇದ್ದದರಿಂದ ಅಲ್ಲಿ ಯಾರೂ ಶಂಕೆಯನ್ನು ತಕ್ಕೊಳ್ಳಲಾರರು.

ನನ್ನ ಮಗುವೆಂದು ನೀನು ಅಲ್ಲಿಯ ಜನರಿಗೆ ಹೇಳು. ಈ ಬಾಲಕನಾದರೂ ನಮ್ಮನ್ನೇ ನಿಜವಾದ ತಾಯಿ-ತಂದೆಗಳೆಂದು ಭಾವಿಸುವನು. ಯಾಕಂದರೆ ಈಗ ಇವನಿಗೆ ತನ್ನನ್ನು ಹಡೆದ ತಾಯಿ-ತಂದೆಗಳ ತಿಳುವಳಿಕೆಯಿಲ್ಲ. ದೇವರು ನಮಗೆ ಅಪಾರ ಸಂಪತ್ತಿಯನ್ನೂ, ಹೊಲ-ಮನೆಗಳನ್ನೂ ಕೊಟ್ಟಿರುವನು. ಈ ವೈಭವವನ್ನು ಅನ್ಯರಿಗೆ ಒಪ್ಪಿಸುವದಕ್ಕಿಂತ ನಾವು ಲಾಲನೆ-ಪಾಲನೆ ಮಾಡಿದ ಈ ಬಾಲಕನಿಗೇ ಒಪ್ಪಿಸುವದು ವಿಹಿತವಲ್ಲವೇ? ಯಾಕೆ ನನ್ನ ವಿಚಾರಗಳು ನಿನಗೆ ಸಮ್ಮತವಿರುವವೋ? ನೀನು ಈ ಮಗುವನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗುವಿನಂತೆ ಜೋಪಾನ ಮಾಡುವಿಯಾ? ನಿನ್ನ ಮನಸ್ಸಿನಲ್ಲಿದ್ದದ್ದನ್ನು ಹೇಳು.

ಡಬ್ಲಿನ ಸಾಹೇಬನ ಈ ವಿಚಾರಗಳಿಗೆ ಲೇಡೀಡಬ್ಲಿನಳು ಒಪ್ಪಿಕೊಂಡಳು. ಆ ಶಿಶುವಿನ ಮೇಲೆ ಆಕೆಯ ಮೋಹವು ಹೆಚ್ಚಾಯಿತು. ರಜೆಯು ಮಂಜೂರಾಗಿ ಬಂದ ಕೂಡಲೆ ಕೆಲ ದಿನ ಪರದೇಶಗಳಲ್ಲಿ ಸಂಚರಿಸಿ ಇಂಗ್ಲಂಡಕ್ಕೆ ಹೋಗಿ ಈ ಬಾಲಕನನ್ನು ಅಲ್ಲಿಟ್ಟು ತಿರುಗಿ ಹಿಂದುಸ್ಥಾನಕ್ಕೆ ಬರಬೇಕೆಂದು ಅವರು ನಿರ್ಧರಿಸಿದರು. ಅವರ ಈ ನಿರ್ಧಾರದಂತೆ ಮುಂದೆ ಕೆಲ ದಿನಗಳಲ್ಲಿ ರಜೆಯು ಮಂಜೂರಾಗಿ ಬಂದಿತು. ಆಗ ಡಬ್ಲಿನ ಸಾಹೇಬನು ಆ ವಿಶ್ವಾಸುಕ ದಾಯಿಯನ್ನು ಸಂಗಡ ಕರಕೊಂಡು ತಾನು ಹೊರಡುವ ಸಂಗತಿಯನ್ನು ಯಾರಿಗೂ ತಿಳಿಸದೆ ಮೊದಲು ಆಫ್ರಿಕೆಗೆ ಹೊರಟು ಹೋದನು. ಅಲ್ಲಿ ಒಂದು ವರುಷ ಇದ್ದು, ಬಳಿಕ ಅಮೇರಿಕೆಗೆ ಹೋದನು. ಅಲ್ಲಿ ಮೂರು ವರುಷ ಕಾಲ ಕ್ರಮಣ ಮಾಡಿ, ಬಳಿಕ ಇಂಗ್ಲಂಡಕ್ಕೆ ಅಂದರೆ ತನ್ನ ಜನ್ಮ ಭೂಮಿಗೆ ಪ್ರಯಾಣ ಬೆಳಸಿದನು.



## ೩ನೇ ಪ್ರಕರಣ—ವಾಟರ್ಲೂದ ಯುದ್ಧ.

ಶೈಶವಾವಸ್ಥೆಯು ಅತ್ಯಂತ ರಮಣೀಯವಾದ, ಅದರಲ್ಲಿಯ ಒಳ್ಳೇ ಸೌಖ್ಯದಾಯಕವಾದ ಕಾಲವು. ಯಾವುದೊಂದು ಶಿಶುವಿನ ಪುಟ್ಟ ಪುಟ್ಟ ಕೈ-ಕಾಲು, ಹಾವಭಾವ, ಕುಣಿದಾಟ, ನುಗ್ಗಾಟಗಳನ್ನು ನೋಡಿಯೂ, ತೊದಲ್ಮಾತುಗಳನ್ನು ಕೇಳಿಯೂ ಅದಾರಿಗೆ ಆನಂದವಾಗಲಿಕ್ಕಿಲ್ಲ? ಕರ್ನಲ್ ಡಬ್ಲಿನ್ ಮತ್ತು ಲೇಡೀ ಡಬ್ಲಿನ್ನರು ಇದುವರೆಗೂ ಸಂತತಿ ವಿಹೀನರಾಗಿದ್ದರು. ಅವರು ತಮಗೆ ಅನಾಯಾಸವಾಗಿ ಲಭಿಸಿದ ಆ ಪರದೇಶಿ ಕೂಸಿನ ಬಾಲಲೀಲೆಗಳನ್ನು ಕಂಡು ಆಗಾಗ್ಗೆ ಆನಂದಭರಿತರಾಗುತ್ತಿದ್ದರೆಂದು ಬೇರೆ ಹೇಳಬೇಕಾದುದಿಲ್ಲ. ಭಗವನ್ಮಾಯೆಯ ಮೂಲಕ ಆ ಶಿಶುವು ತುಸ ದಿನಗಳಲ್ಲೇ ತನ್ನ ಬಾಯಿಂದ ಹೊರಡುವ "ಅವ್ವಾ-ಅವ್ವಾ" "ಅಪ್ಪಾ-ಅಪ್ಪಾ" ಎಂಬ ಶಬ್ದಗಳನ್ನು ಮರೆತು, ಇಂಗ್ಲಿಷ ಪದ್ಧತಿಯಂತೆ "ಮಮ್ಮಾ-ಮಮ್ಮಾ" "ಪಪ್ಪಾ-ಪಪ್ಪಾ" ಎಂದು ತನ್ನ ಪಾಲಕರನ್ನು ಕುರಿತು ಸಂಬೋಧಿಸತೊಡಗಿತು. ಆ ಶಬ್ದಗಳನ್ನು ಕೇಳಿ ಆ ದಂಪತಿಗಳ ಸಂತೋಷಕ್ಕೆ ಮೇರೆಯೇ ಉಳಿಯದಾಯಿತು! ಹೊಟ್ಟೆಯ ಮಕ್ಕಳಿಂದ ಇದಕ್ಕೂ ಹೆಚ್ಚು ಅದಾವ ಬಗೆಯ ಸಂತೋಷವಾದೀತೆಂಬದರ ಕಲ್ಪನೆಯೇ ಆಗ ಅವರಿಗಾಗದಾಯಿತು.

ಈ ದೇಶದಿಂದ ಆ ದೇಶಕ್ಕೆ ಆ ದೇಶದಿಂದ ಮತ್ತೊಂದು ದೇಶಕ್ಕೆ ಹೀಗೆ ಪ್ರವಾಸಮಾಡುವಾಗ ಡಬ್ಲಿನ್ ಸಾಹೇಬನು ತನ್ನ ನೌಕರರನ್ನು ಬದಲಿಸುತ್ತಲೇ ಇದ್ದನು. ತನಗೆ ಲಭಿಸಿದ ಆ ಶಿಶುವಿನ ವಿಷಯದ ಗೋಪನ ಸ್ಫೋಟವಾಗಬಾರದೆಂದೇ ಆತನು ನೌಕರರನ್ನು ಬದಲಿಸುವ ಆ ಬೇತನ್ನು ನಡಿಸಿದ್ದನು. ಅದರಿಂದ ಅವನ ಇಷ್ಟಾರ್ಥವು ಕೈಗೂಡಿತು. ಶಿಶುವಿಗೆ ಮೊಲೆಹಾಲು ಕುಡಿಸುತ್ತಿದ್ದ ಓರ್ವ ಹಿಂದೂ ದಾದಿಯನ್ನು ಮಾತ್ರ ಅವನು ಕಡೆಯವರೆಗೂ ಬಿಟ್ಟು ಬಿಡಲಿಲ್ಲ. ಯಾಕಂದರೆ ಅವಳ ವಿಶ್ವಾಸದ ವಿಷಯವಾಗಿ ಅವನ ಖಾತ್ರಿಯಾಗಿತ್ತು. ಅಲ್ಲದೆ ಮೊಲೆ ಹಾಲು ಕುಡಿಸುವ ದಾದಿಗಳನ್ನು ಆಗಾಗ್ಗೆ ಬದಲಿಸುವದರಿಂದ ಶಿಶುಗಳ ಆರೋಗ್ಯಕ್ಕೂ, ಸೌಖ್ಯಕ್ಕೂ ಕುಂದು ಉಂಟಾಗುವದೆಂದು ಆ ಸಾಹೇಬನ ಮತವಾಗಿತ್ತು. ಆದರಿಂದ ಅವನು ಅವಳನ್ನು ಬಿಡಿಸಿರಲಿಲ್ಲ. ಇದಲ್ಲದೆ ಅವನು ಆ ದಾದಿಯನ್ನು ಬಿಡಿಸದಿರಲಿಕ್ಕೆ ಇನ್ನೊಂದು ಮುಖ್ಯ ಕಾರಣವೇನಂದರೆ, ಆ ದಾದಿಯು ಆ ಮಗುವನ್ನು ಬಿಟ್ಟು ಅರಕ್ಷಣ ಕೂಡ ಬದುಕಿರಲಾರ

ದಷ್ಟು ಪ್ರೇಮವನ್ನು ಆ ಕೂಸಿನಲ್ಲಿ ತಾಳಿದ್ದಳು! ಇಂಥ ವಿಶ್ವಾಸುಕ ಹಾಗು ಪ್ರೇಮಲ ದಾದಿಯಿಂದ ರಹಸ್ಯ ಸ್ಫೋಟವಾಗುವ ಅಂಜಿಕೆಯಿಲ್ಲೆಂದು ತಿಳಿದು ಅವನು ಅವಳನ್ನು ಇಂಗ್ಲಂಡಕ್ಕೆ ಕರೆದೊಯ್ದನು.

ಎಷ್ಟೋ ವರ್ಷಗಳ ತರುವಾಯು ಕರ್ನಲ್ ಡಬ್ಲಿನ್ನನು ಸ್ವದೇಶಕ್ಕೆ ಹೋದದ್ದರಿಂದ ಅಲ್ಲಿಯ ಅವನ ಆಪ್ತೇಷ್ಟರಿಗೂ, ಸ್ನೇಹಿತರಿಗೂ ಬಹು ಸಂತೋಷವಾಯಿತು. ಅವರು ಅವನನ್ನು ಈ ಸಾರೆ ಹೆಚ್ಚಾಗಿ ಪ್ರೀತಿಸುವ ಮುಖ್ಯ ಕಾರಣವೇನಂದರೆ, ಅವನಿಗೆ ಒಂದು ಸುಂದರ ಗಂಡು ಶಿಶುವು ಜನಿಸಿದೆಯೆಂದು. ಡಬ್ಲಿನ್ನನ ಮಗನಾದ ಆ ಪುಟ್ಟ ಡಬ್ಲಿನ್ನನಿಗೆ ಆ ದೇಶದ ಪದ್ಧತಿಯು ಪ್ರಕಾರ ನಾನಾ ಬಗೆಯು ಆಟಿಗೆಗಳು ಇನಾಮಾಗಿ ದೊರೆತವು. ಕರ್ನಲ್ ಡಬ್ಲಿನ್ನನು ಇಂಗ್ಲಂಡಕ್ಕೆ ತಲುಪಿದಾಗ ಪುಟ್ಟ ಡಬ್ಲಿನ್ನನ ವಯಸ್ಸು ಐದು ವರ್ಷದ್ದಾಗಿತ್ತು; ಆದರೆ ಕರ್ನಲ್ ಡಬ್ಲಿನ್ನನು ಅವನಿಗೆ ನಾಲ್ಕು ವರ್ಷಗಳೆಂದೇ ಅಲ್ಲಿಯವರಿಗೆ ಹೇಳಿದನು. ಡಬ್ಲಿನ್ನ ಸಾಹೇಬನು ಐದು ವರ್ಷಗಳ ರಜೆ ಪಡಕೊಂಡು ಹಿಂದುಸ್ಥಾನದಿಂದ ಹೊರಟಿದ್ದನು; ಆದರೆ ಅದೆಲ್ಲ ಕಾಲವು ದೇಶವಿಭ್ರಟನದಲ್ಲಿಯೇ ಕಳೆದು ಹೋಗಿತ್ತು. ಅದರಿಂದ ಅವನು ಮತ್ತೆ ಅರ್ಜಿಬರಕೊಂಡು ಇನ್ನೆರಡು ವರ್ಷಗಳ ರಜೆ ಪಡಕೊಂಡನು. ಕರ್ನಲ್ ಡಬ್ಲಿನ್ನನು ತಾನು ಇಂಗ್ಲಂಡದಿಂದ ಹೊರಡುವ ಮೊದಲು ಪುಟ್ಟ ಡಬ್ಲಿನ್ನನನ್ನು ಅಲ್ಲಿಯ “ಚರ್ಚ ಆಫ್ ಇಂಗ್ಲಂಡ” ಎಂಬ ಪ್ರಸಿದ್ಧ ಚರ್ಚಿಗೆ ಕರೆದೊಯ್ದು ಅವನ ನಾಮಕರಣ ವಿಧಿಯನ್ನು ಮಾಡಿಸಿದನು. ಆ ದೇಶದ ರಿವಾಜಿನಂತೆ ಆ ಪುಟ್ಟ ಡಬ್ಲಿನ್ನನಿಗೆ ಅಲ್ಲಿಯ ಧರ್ಮಗುರುಗಳು “ಹೆನರಿ ಡಬ್ಲಿನ” ಎಂಬ ಹೆಸರನ್ನಿಟ್ಟರು. ಇದರಿಂದ ನಾವಾದರೂ ಆ ಕುಮಾರನಿಗೆ ಇನ್ನುಮೇಲೆ ಹೆನರಿ ಡಬ್ಲಿನ್ನನೆಂದೇ ಸಂಬೋಧಿಸೋಣ.

ರಜೆಯು ತೀರುತ್ತ ಬರುತ್ತಲೆ ಕರ್ನಲ್ಲಡಬ್ಲಿನ್ನನು ತನ್ನ ಆಪ್ತರಿಷ್ಟರಿಗೂ ಎಲ್ಲ ಮಿತ್ರರಿಗೂ ಒಂದು ಸಂಭ್ರಮದ ಮೇಜವಾನಿಯನ್ನು ಮಾಡಿಸಿದನು. ಆ ದಿನ ಅವನು ಹೆನರಿ ಡಬ್ಲಿನ್ನನಿಗೆ ಅವರ ಪರಿಚಯ ಮಾಡಿಕೊಟ್ಟನಲ್ಲದೆ, ಅವನ ಶಿಕ್ಷಣ-ಆರೋಗ್ಯಗಳವಿಷಯವಾಗಿ ಲಕ್ಷ್ಯಗೊಡಬೇಕೆಂದು ಅವರೆಲ್ಲರಿಗೂ ವಿನಂತಿ ಮಾಡಿಕೊಂಡನು. ಅವರೆಲ್ಲರೂ ಅವನ ಮಾತಿಗೆ ಒಪ್ಪಿಕೊಂಡರು. ಮುಂದೆ ತುಸ ದಿನಗಳಲ್ಲೇ ಕರ್ನಲ್ಲ ಡಬ್ಲಿನ್ನನು ತನ್ನ ಹೆಂಡತಿಯೊಡನೆ ಜನ್ಮಭೂಮಿಯಾದ ಇಂಗ್ಲಂಡದೇಶದಿಂದ ಕರ್ಮಭೂಮಿಯಾದ ಹಿಂದುದೇಶದ ಕಡೆಗೆ ಪ್ರಯಾಣ ಬೆಳೆಸಿದನು.

ಹೆನರಿಡಬ್ಲಿನ್ನನಿಗೆ ಚಲೋ ಶಿಕ್ಷಣ ದೊರೆಯುವಂತೆ ಕರ್ನಲ್ಲಡಬ್ಲಿನ್ನನು ವ್ಯವಸ್ಥೆ ಮಾಡಿ ಒಂದುದರಿಂದಲೂ, ಸ್ವತಃ ಹೆನರಿ ಡಬ್ಲಿನ್ನನು ಒಳ್ಳೇ ತೈಲ ಬುದ್ಧಿಯವನಿದ್ದುದರಿಂದಲೂ ಅವನು ಬೇಗಬೇಗನೆ ತನ್ನ ಪ್ರಾಥಮಿಕ ಶಿಕ್ಷಣ ವನ್ನು ಮುಗಿಸಿ, ಉಚ್ಚತರಗತಿಯ ಶಿಕ್ಷಣವನ್ನು ಪ್ರಾರಂಭಿಸಿದನು. ತನ್ನ ವಯಸ್ಸಿನ ೧೭ನೇ ವರ್ಷ ಮುಗಿಯುವಷ್ಟರಲ್ಲಿ ಹೆನರಿಯು ಅಲ್ಲಿಯ ಬಿ. ಎ. ಪರೀಕ್ಷೆಯ ಮೇಲ್ತರಗತಿಯಲ್ಲಿ ಉತ್ತೀರ್ಣನಾದನು. ಈ ಸುದ್ದಿಯನ್ನು ಕೇಳಿ ಅವನ ತಂದೆ-ತಾಯಿಗಳಿಗೆ ಪರಮ ಸಂತೋಷವಾಯಿತು. ತಮ್ಮ ಮಗನ ಒಲವಿನ ಪ್ರಕಾರ ಅವನಿಗೆ ನೌಕರಿ ದೊರಕಿಸಿ ಕೊಡಬೇಕೆಂದು ಯೋಚಿಸಿ, ಆ ದೊರೆಗಳು ತಮ್ಮ ದೊರೆಸಾನಿಯವರೊಡನೆ ಮತ್ತೆ ಸ್ವದೇಶಕ್ಕೆ ಬಂದರು.

ಹೆನರಿಡಬ್ಲಿನ್ನನು ಒಳ್ಳೇ ಕುಶಾಗ್ರಬುದ್ಧಿಯವನಿದ್ದಂತೆ ಬಲು ಧೈರ್ಯಶಾಲಿಯೂ ಆಗಿದ್ದನು. ಶಿಪಾಯಿಗಿರಿಯಲ್ಲಿ ಡಬ್ಲಿನ್ನ ಮನೆತನವು ಪ್ರಾಚೀನ ಕಾಲದಿಂದಲೂ ಇಂಗ್ಲಂಡದೇಶದಲ್ಲಿ ಪ್ರಸಿದ್ಧಿ ಪಡೆದಿತ್ತು. ತಮ್ಮ ಪೂರ್ವಪರಂಪರೆಗನುಸಾರವಾಗಿ ಹೆನರಿಡಬ್ಲಿನ್ನನೂ ದಂಡಿನಲ್ಲಿಯೇ ನೌಕರಿ ಮಾಡಬೇಕೆಂದು ಇಚ್ಛಿಸಿದನು. ಮಗನ ಇಚ್ಛೆಯ ಪ್ರಕಾರ ಕರ್ನಲ್ಲಡಬ್ಲಿನ್ನನು ಇಂಗ್ಲಿಷ ದಂಡಿನ ಮುಖ್ಯಸ್ಥನಿಗೆ ಭೆಟ್ಟಿಯಾಗಿ ಮಗನನ್ನು ದಂಡಿನಲ್ಲಿ ಸೇರ್ಪಡಿಸಿದನು. ಮೊದಮೊದಲು ಹೆನರಿಗೆ ಸಾದಾ ಶಿಪಾಯಿಯ ಕೆಲಸವು ಕೊಡಲ್ಪಟ್ಟರೂ ಆತನ ಕರ್ತವ್ಯದಕ್ಷತೆ, ಸಮಯಸೂಚಕತೆ ಮುಂತಾದ ಅದ್ವಿತೀಯ ಗುಣಗಳಿಗೆ ಲುಬ್ಧನಾದ ಆ ದಂಡಿನ ಮುಖ್ಯಸ್ಥನು ತುಸ ದಿನಗಳಲ್ಲೇ ಅವನನ್ನು ಲೆಫ್ಟನೆಂಟ ಕರ್ನಲ್ಲನನ್ನಾಗಿ ಮಾಡಿದನು!

ಹೆನರಿ ಡಬ್ಲಿನ್ನನು ದಂಡಿನಲ್ಲಿ ಸೇರಿದಾಗ ಅವನಿಗೆ ೧೯ ವರ್ಷಗಳಾಗಿದ್ದವು. ಹಿಂದುಸ್ತಾನಕ್ಕೆ ಕಳಿಸಲಿಕ್ಕೆ ಯಾವ ದಂಡು ಆ ಕಾಲಕ್ಕೆ ಸಿದ್ಧವಾಗಿತ್ತೋ ಅದೇ ದಂಡಿನಲ್ಲಿಯೇ ಹೆನರಿಗೆ ನೌಕರಿಯು ದೊರೆತಿತ್ತು. ಅದರಿಂದ ತುಸ ದಿನಗಳಲ್ಲಿ ಅವನು ಆ ದಂಡಿನೊಡನೆ ಹಿಂದುಸ್ತಾನಕ್ಕೆ ಹೊರಡತಕ್ಕವನಿದ್ದನು; ಆದರೆ ಅದೇ ಕಾಲಕ್ಕೆ ಅದ್ವಿತೀಯ ಪ್ರತಾಪಾನ್ವಿತನೂ, ದಿಗ್ವಿಜಯಿಯೂ ಆಗಿದ್ದ ಫ್ರೆಂಚ-ಸಮ್ರಾಟ್ ನೆಪೋಲಿಯನ್ ಬೋನಾಪಾರ್ಟನು ಯುರೋಪಖಂಡದ ತುಂಬ ಯುದ್ಧದ ಗುಲ್ಲನ್ನೆಬ್ಬಿಸಿದ್ದರಿಂದ ಹೆನರಿಯು ಆ ದಂಡು ಇಂಗ್ಲಂಡದಿಂದ ಹೊರಗೆ ಹೊರಡಲಿಲ್ಲ. ಇಷ್ಟೇ ಅಲ್ಲ; ಬೇರೆ ಬೇರೆ ದೇಶಗಳಲ್ಲಿದ್ದ ಇಂಗ್ಲಿಷ ದಂಡುಗಳು ಲಗುಬಗೆಯಿಂದ ಇಂಗ್ಲಂಡಕ್ಕೆ ಬರಹತ್ತಿದವು. ಅದರಿಂದ ಹೆನರಿಯ ದಂಡು

ಅಂಥ ಇಕ್ಕಟ್ಟಿನ ಪ್ರಸಂಗದಲ್ಲಿ ಹಿಂದುಸ್ತಾನಕ್ಕೆ ಹೊರಡದೆ, ಅದು ಜರ್ಮನಿಯ ಕಡೆಗೆ ಸಾಗಿಸಲ್ಪಟ್ಟಿತು ಆಗ ನೆಪೋಲಿಯನ್ನನಿಗೆ ಎದುರಾಳಿಗಳಾದ ಎಲ್ಲ ಯುರೋಪಿಯನ್ ರಾಷ್ಟ್ರಗಳಲ್ಲಿ ಇಂಗ್ಲಂಡವೇ ಪ್ರಮುಖವಾಗಿದ್ದಿತು. ಈ ವರೆಗೆ ಲೋಕದೊಳಗೆ ಆದ ಪ್ರಸಿದ್ಧ ಕಾಳಗಗಳಲ್ಲಿ ವಾಟರ್ಲೂದ ಕಾಳಗವು ಜಗತ್ ಪ್ರಸಿದ್ಧವಾದದ್ದು. ಆ ಕಾಲಕ್ಕೆ ನಮ್ಮ ಹೆನರಿ ಡಬ್ಲಿನ್ನನು ಆ ರಣ ಭೂಮಿಯಲ್ಲಿ ಇಂಗ್ಲಿಷರ ಪರಿಯಿಂದ ಕಾದಿದನು. ನೆಪೋಲಿಯನ್ನನ ಯುದ್ಧ ಸಿದ್ಧತೆಯು ವಿಲಕ್ಷಣವಾಗಿತ್ತು. ಅಂತೇ ಅವನ ವ್ಯೂಹರಚನೆಯು ಆಯತ ಕಾಲಕ್ಕೆ ತಪ್ಪದಿದ್ದರೆ, ಇತರ ಕಾಳಗಗಳಂತೆ ಆ ವಾಟರ್ಲೂದಲ್ಲೂ ಅವನೇ ದಿಗ್ವಿ ಜಯ ಹೊಂದುತ್ತಿದ್ದನು; ಆದರೆ ಭವಿತವ್ಯತೆಯ ಮೂಲಕ ಆಯತಸಮಯಕ್ಕೆ ಬರತಕ್ಕ ಸಹಾಯಕ ದಂಡುಗಳು ಬಾರದ್ದರಿಂದ ಅವನ ವ್ಯೂಹರಚನೆಯು ವಿಸಂ ಗತವಾಗಿ, ಅವನು ಅಪಜಯಕ್ಕೆ ಗುರಿಯಾದನು; ಮತ್ತು ಅದಕ್ಕಾಗಿಯೇ ಇಂಗ್ಲಿಷ ವೀರನಾದ ಡ್ಯೂಕ ಆಫ್ ವೆಲ್ಲಿಂಗ್ಟನ್ನನು ಜಯಶಾಲಿಯಾದನು.

ಈ ವಾಟರ್ಲೂ ಕಾಳಗದಲ್ಲಿ ನೆಪೊಲಿಯನ್ನನ ಪರಾಭವವಾದದ್ದೇನೋ ನಿಜ; ಆದರೆ ಅದರಿಂದ ಅವನ ಚರಿತ್ರಕ್ಕೆ ಸ್ವಲ್ಪವೂ ಕುಂದು ಉಂಟಾಗಲಿಲ್ಲ. ಯಾಕಂದರೆ ಜಯಾಪಜಯುಗಳು ಕೇವಲ ಅದೃಷ್ಟದ ಫಲಗಳಾಗಿವೆ. ಕೆಲಜನ ಉಪದ್ವ್ಯಾಪಿ ಇತಿಹಾಸಕಾರರು ನೆಪೊಲಿಯನ್ನನ ಚರಿತ್ರಕ್ಕೆ ಕಲಂಕ ಹಚ್ಚಲು ಪ್ರಯತ್ನಿಸಿರುವರು; ಆದರೆ ಅದರಿಂದ ಅವರ ಕೃತಕಾರ್ಯವು ಸಾಧಿಸದೆ, ಅವರೇ ಜಗತ್ತಿನ ಉಪಹಾಸಕ್ಕೆ ಕಾರಣರಾಗಿರುತ್ತಾರೆ. ನೆಪೊಲಿಯನ್ನನಂಥ ಶೂರ, ಸಚ್ಚರಿತ್ರ, ಮುತ್ಸದ್ದಿ, ಉದಾರ, ಸತ್ಯಭಾಷಿ. ನಿಷ್ಕಪಟಿ ಹಾಗು ಧೋರಣೆ ಮನುಷ್ಯನು ನೆಪೋಲಿಯನ್ನನೇ ಹೊರತು ಅನ್ಯರಿಲ್ಲ. ಯುರೋಪದೊಳಗಂತೂ "ಡ್ಯೂಕ್‌ಆಫ್‌ವೆಲ್ಲಿಂಗಟನ್ನರು ಹತ್ತೆಂಟು ಜನ ದೊರೆತಾರು; ಆದರೆ ನೆಪೊಲಿ ಯನ್ನನು ಮಾತ್ರ ಅವನೊಬ್ಬನೇ'' ಎಂದು ಲೋಕರೂಢಿಯ ನುಡಿಯಾಗಿ ಹೋಗಿದೆ. ನೆಪೂಲಿಯನ್ನನ ಗುಣವರ್ಣನ ಮಾಡಿ ಇತರರನ್ನು ಹಳಿಯಬೇಕೆಂ ದು ನಮ್ಮ ಉದ್ದೇಶವಿಲ್ಲ. ಮುಖ್ಯವಾಗಿ ತಿಳಿಸತಕ್ಕ ಸಂಗತಿಯಿಷ್ಟೇ, ನಮ್ಮ ಹೆನರಿಡಬ್ಲಿನ್ನನು ಆ ವಾಟರ್ಲೂ ಕಾಳಗದಲ್ಲಿ ಕಡೆತನಕ ಹಾಜರಿದ್ದು ಒಳ್ಳೇ ಶೌರ್ಯದಿಂದ ಕಾದಿ ಪ್ರಸಿದ್ಧಿ ಪಡೆದನು. ಅದರಿಂದ ಅವನ ದಂಡಿನ ಮುಖ್ಯ ಸ್ಥನು ಕ್ಷಿಪ್ರದಲ್ಲಿಯೇ ಅವನನ್ನು ಕರ್ನಲ್ಲನನ್ನಾಗ ಮಾಡಿದನು.

ವಾಟರ್ಲೂ ಕಾಳಗದ ನಂತರ ಹೆನರಿಯು ಯಾವ ದಂಡಿನಲ್ಲಿದ್ದನೋ

ಅದು ಬೇಗನೆ ಹಿಂದುಸ್ಥಾನಕ್ಕೆ ರವಾನಿಸಲ್ಪಟ್ಟಿತು. ಅದರಿಂದ ಹೆನರಿಡಬ್ಲಿನ್ನನು ತನ್ನ ವಯಸ್ಸಿನ ಇಪ್ಪತ್ತು ವರ್ಷಗಳ ನಂತರ ತನ್ನ ಜನ್ಮಭೂಮಿಗೆ ಮರಳಿಬಂದು ತಲುಪಿದಂತಾಯಿತು; ಆದರೆ ತಾನು ತನ್ನ ಜನ್ಮಭೂಮಿಗೆ ಬಂದೆನೆಂಬಕಲ್ಪನೆಯು ಸಹ ಆತನಿಗಿರಲಿಲ್ಲ. ತನ್ನ ಜನ್ಮಭೂಮಿಯಾದ ಹಿಂದುಸ್ತಾನವನ್ನೇ ಆತನು ತನ್ನ ಕರ್ಮಭೂಮಿಯೆಂದು ತಿಳಿದಿದ್ದನು; ಮತ್ತು ಅದಕ್ಕಾಗಿಯೇ ಅವನು ತನ್ನ ಶಸ್ತ್ರವನ್ನು ತನ್ನ ಹಿಂದಬಾಂಧವರ ಮೇಲೆ ಸಾಗಿಸುತ್ತಿದ್ದನು. ಇದರಲ್ಲಿ ಅವನ ತಪ್ಪಾದರೂ ಏನು? ಅವನು ತಾನೊಬ್ಬ ಇಂಗ್ಲಿಷ ಗೃಹಸ್ಥನೆಂದೇ ತಿಳಕೊಂಡಿದ್ದನು. ಹೆನರಿಯು ಇಲ್ಲಿಗೆ ಬಂದಾಗ ಈ ದೇಶದಲ್ಲಿ ಅಲ್ಲಲ್ಲಿ ಸಣ್ಣ-ಪುಟ್ಟ ಯುದ್ಧಗಳು ನಡೆದಿದ್ದವು. ಆದುದರಿಂದ ಅವನು ಇತ್ತ ಬಂದ ಕೆಲವರ್ಷಗಳ ವರೆಗೆ ಒಂದೇಸವನೆ ಯುದ್ಧಮಾಡುತ್ತಲೇ ಇದ್ದನು. ೧೮೦೭-೧೮೧೮ನೇ ಇಸವಿಗಳಲ್ಲಿ ಇಂಗ್ಲಿಷರು ಮರಾಟರೊಡನೆ ಮಾಡಿದ ಪ್ರತಿಯೊಂದು ಕಾಳಗದಲ್ಲಿ ಹೆನರಿಯು ಇದ್ದೇ ಇದ್ದನು. ಅವುಗಳಲ್ಲಿ ಅವನು ತನ್ನ ಶೌರ್ಯ-ಸಾಹಸ-ಮುತ್ಸದ್ದಿಗಿರಿಗಳನ್ನು ಚೆನ್ನಾಗಿ ವ್ಯಕ್ತಗೊಳಿಸಿದನು. ೧೮೦೫ರಲ್ಲಿ ಆದ ಭರತಪುರದ ಕಾಳಗದಲ್ಲಿ ಹೆನರಿಡಬ್ಲಿನ್ನನು ತೋರಿದ ಯುದ್ಧಚಮತ್ಕಾರದಿಂದ ಎಲ್ಲ ಸೈನಿಕರು ಆಶ್ಚರ್ಯಭರಿತರಾದರು. ಆಗ ಆ ದಂಡಿನ ಮುಖ್ಯಸ್ಥನು ಹೆನರಿಯ ಚಿಕ್ಕವಯಸ್ಸಿನ ಕಡೆಗೆ ಕೂಡ ನೋಡದೆ, ಅವನನ್ನು ಆ ದಂಡಿನ 'ಮೇಜರ' ನನ್ನಾಗಿ ಮಾಡಿದನು!

ಹೆನರಿಯು ತನ್ನ ತಾಯಿ-ತಂದೆಗಳನ್ನು ಅತ್ಯಂತ ಪೂಜ್ಯರೆಂದು ತಿಳಿಯುತ್ತಿದ್ದನು. ಅವನು ಅವರಿಗೆ ತನ್ನ ಕುಶಲವಾರ್ತೆಯನ್ನು ಆಗಾಗ್ಗೆ ತಿಳಿಸುತ್ತಿದ್ದನಲ್ಲದೆ, ಆ ಪ್ರತಿಯೊಂದು ಪತ್ರದಲ್ಲಿ ಅವರ ವಿಷಯಕವಾಗಿ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಿದ್ದನು. ಕರ್ನಲ್ ಡಬ್ಲಿನ್ನ ಸಾಹೇಬನಿಗೆ ಮಗನ ಈ ಪ್ರಕಾರದ ಪ್ರೇಮಲ ಆಚರಣದಿಂದ ಒಳ್ಳೇ ಸಮಾಧಾನವಾಗುತ್ತಿತ್ತಲ್ಲದೆ, ಒಂದಿಷ್ಟು ಆಶ್ಚರ್ಯವೂ ಎನಿಸುತ್ತಿತ್ತು; ಯಾಕಂದರೆ ಪ್ರೌಢ ವಯಸ್ಸಿನ ಮಕ್ಕಳು ತಮ್ಮ ತಂದೆ-ತಾಯಿಗಳ ವಿಷಯವಾಗಿ ಅಷ್ಟೊಂದು ಕಳಕಳಿ ವಹಿಸುವದು ಆಂಗ್ಲ ಸಮಾಜದಲ್ಲಿ ಅಪರೂಪವೆಂದೇ ಹೇಳಬಹುದು. ಅದರಿಂದ ಕರ್ನಲ್ ಡಬ್ಲಿನ್ನನಿಗೆ ಹಾಗೆ ಆಶ್ಚರ್ಯವೆನಿಸುತ್ತಿತ್ತು; ಆದರೆ ಮಾತಾ-ಪಿತೃಭಕ್ತಿಯಿಂದ ಪರಿಪ್ಲುತವಾದ ಈ ಹಿಂದು ಸಮಾಜಕ್ಕೆ ಹೆನರಿಯ ಆಚರಣೆಯಲ್ಲಿ ಆಶ್ಚರ್ಯಪಡತಕ್ಕಂಥ ಸಂಗತಿಗಳೇನೂ ಕಾಣಿಸುವದಿಲ್ಲ. ಹೆನರಿಯಾದರೂ ಹಿಂದುರಕ್ತದಿಂದಲೇ

ಜನಿಸಿದವನು. ಆದರೂ ಅವನು ತನ್ನನ್ನು ಇಂಗ್ಲಿಷನೆಂದು ತಿಳಕೊಂಡದ್ದರಿಂದ ತಾನು ತನ್ನ ಇತರ ದೇಶಬಾಂಧವರಿಗಿಂತ ಇಷ್ಟೇಕೆ ಮಾತಾ-ಪಿತೃಭಕ್ತನಾಗಿರುವೆನೆಂಬದು ಸ್ವತಃ ಹೆನರಿಗೂ ತಿಳಿಯದ ಮಾತಾಗಿತ್ತು.

ಹೆನರಿ ಡಬ್ಲಿನ್ನನು ಈಗ ೨೦ ೨೨ ವರ್ಷದವನಾಗಿದ್ದರೂ, ನೆನಪು ಇರಹತ್ತಿದಂದಿನಿಂದ ಅವನಿಗೆ ಒಂದೇ ಒಂದು ಬಗೆಯ ಸ್ವಪ್ನವು ಆಗಾಗ್ಗೆ ಬೀಳುತ್ತಿತ್ತು. ಅದರಿಂದ ಅವನಿಗೆ ಒಳ್ಳೇ ಆಶ್ಚರ್ಯವೆನಿಸುತ್ತಿದ್ದರೂ, ಆ ಸಂಗತಿಯನ್ನು ಅವನು ಮತ್ತಾರಿಗೂ, ಅದೇಕೆ ತನ್ನ ಪ್ರೀತಿಯ ತಂದೆ-ತಾಯಿಗಳಿಗೂ ಒಮ್ಮೆ ಕೂಡ ತಿಳಿಸಿರಲಿಲ್ಲ. ಸ್ವಪ್ನ ಬಿದ್ದ ಮರುದಿನವನ್ನೆಲ್ಲ ಅವನು ಆ ಸ್ವಪ್ನದ ವಿಚಾರದಲ್ಲಿಯೇ ಕಳೆಯುತ್ತಿದ್ದನು. ಆ ಸ್ವಪ್ನದಿಂದ ಅವನಲ್ಲಿ ಒಂದಿಷ್ಟು ಉದ್ವಿಗ್ನತೆಯಾಗಲಿ, ವಿಷಾದವಾಗಲಿ, ಸ್ಫೂರ್ತಿಯಾಗಲಿ ಉಂಟಾಗುತ್ತಿರಲಿಲ್ಲ. ಅವನು ಒಂದೇಸವನೆ ವಿಚಾರಮಗ್ನನು ಮಾತ್ರ ಆಗುತ್ತಿದ್ದನು. ಅಂಥ ವಿಚಾರಕ್ಕೆ ಆಸ್ಪದವಾದ ಆ ಸ್ವಪ್ನವು ಯಾವುದೆಂದರೆ:—

"ತಾನು ತೀರ ಚಿಕ್ಕ ಹಸುಗೂಸಾಗಿದ್ದು, ಒಂದು ಪ್ರಶಸ್ತವಾದ ಎತ್ತಿನ ಬಂಡಿಯಲ್ಲಿ ಒಬ್ಬ ಸುಂದರ ಸ್ತ್ರೀಯ ಒಳಿಯಲ್ಲಿ ಮಲಗಿರುವೆನು. ಇಷ್ಟರಲ್ಲಿ ಆ ಬಂಡಿಯಲ್ಲಿ ಹಿಲಾಲಿನ ಬೆಳಕು ಬೀಳುವದು. ಕೂಡಲೆ ಯಾರೋ ತನ್ನನ್ನು ಆ ಸ್ತ್ರೀಯ ಒಳಿಯಿಂದ ಎತ್ತಿಕೊಂಡು ದೂರ-ಬಹು ದೂರ-ಒಯ್ಯುತ್ತಿರುವರು."

ಹೆನರಿ ಡಬ್ಲಿನ್ನನು ಹಿಂದುಸ್ತಾನಕ್ಕೆ ಬಂದಂದಿನಿಂದ ಅವನ ಅಭ್ಯುದಯವು ಒಂದೇಸವನೆ ನಡೆದಿತ್ತು. ತುಸ ದಿನಗಳಲ್ಲೇ ಅವನು ಒಳ್ಳೇ ಪ್ರಸಿದ್ಧಿ ಪಡೆದನಲ್ಲದೆ ತನ್ನ ದಂಡಿನ ಮುಖ್ಯಸ್ಥರಿಗೂ, ಕೈಕೆಳಗಿನವರಿಗೂ ಪ್ರೀತಿಪಾತ್ರನಾದನು. ವೃದ್ಧ ಡಬ್ಲಿನ್ನನಿಗೆ ತನ್ನ ಮಗನ ಈ ಸುಕೀರ್ತಿಯನ್ನು ಕೇಳಿ ಒಳ್ಳೇ ಸಮಾಧಾನವಾಗುತ್ತಿತ್ತಲ್ಲದೆ, ತನ್ನ ಹೊಟ್ಟೆಯ ಮಗನ ಅಭ್ಯುದಯದ ಆನಂದಕ್ಕಿಂತಲೂ ಹೆಚ್ಚು ಆನಂದವಾಗುತ್ತಿತ್ತು. ತಮ್ಮ ಮಗನು ಮುಂದೆ ಸುಯಶವಂತನಾಗುವನೋ, ಅಪಯಶಿಯಾಗುವನೋ ಎಂಬ ಬಗ್ಗೆ ಎಷ್ಟೋ ಜನ ತಂದೆತಾಯಿಗಳು ಪೇಚಾಡುತ್ತಿರುತ್ತಾರೆ. ಅದರಲ್ಲಿಯೂ ತಮ್ಮ ದತ್ತಪುತ್ರನ ವಿಷಯವಾಗಿಯಂತೂ ಅವರು ಹೆಚ್ಚು ಆಲೋಚಿಸುತ್ತಿರುತ್ತಾರೆ. ಯಾಕಂದರೆ ದತ್ತಪುತ್ರರು ತಮ್ಮ ದತ್ತಕ ತಂದೆಯ ಅನುಯಾಯಿಗಳಾಗಿ ಅವನ ಪೂರ್ವಪರಂಪರೆಯನ್ನು ಕಾಯ್ದುಕೊಳ್ಳುವದು ವಿರಳವೆಂದೇ ಹೇಳಬಹುದು. ಇಂಥ ಸ್ಥಿತಿಯಲ್ಲಿ ತಮ್ಮ ಸಾಕುಮಗನಾದ ಹೆನರಿಡಬ್ಲಿನ್ನನು ತಮ್ಮ ವಿಷಯವಾಗಿ ಇಷ್ಟು ಕೃತಜ್ಞ

ನಾಗಿ ನಡೆಯುವದನ್ನು ನೋಡಿ ಆ ವೃದ್ಧ ಡಬ್ಲಿನ್ನ ದಂಪತಿಗಳಿಗೆ ಆಶ್ಚರ್ಯ ವಾದದ್ದು ಯಥಾರ್ಥವೇ ಸರಿ!

ತನ್ನ ಮಗನ ಅಭ್ಯುದಯವನ್ನು ಕಂಡು ತಾನು ಇನ್ನು ಪೆನ್ಶನ್ ಪಡೆದು ಸ್ವದೇಶಕ್ಕೆ ಹೋಗಿ ಹರಿ ಹರಿ ಎನ್ನುತ್ತ ಸ್ವಸ್ಥವಾಗಿ ಕಾಲಕಳೆಯ ಬೇಕೆಂದು ವೃದ್ಧ ಡಬ್ಲಿನ್ನನಿಗೆ ಅನಿಸಿತು. ಅವನ ಹೆಂಡತಿಯಾದರೂ ಆ ವಿಚಾರಕ್ಕೆ ಪೂರ್ಣ ಬೆಂಬಲವಿತ್ತಳು. ಕೂಡಲೆ ಅವನು ತನಗೆ ಪೆನ್ಶನ್ ಕೊಡ ಬೇಕೆಂದು ಅರ್ಜಿಮಾಡಿಕೊಂಡನು; ಆದರೆ ಸರಕಾರವು ಒಮ್ಮೆಲೆ ಅವನ ಅರ್ಜಿಯನ್ನು ಮಂಜೂರ ಮಾಡಲಿಲ್ಲ. “ನೀವು ವೃದ್ಧಾಪ್ಯದ ಮೂಲಕ ಇನ್ನು ದಂಡಿನಲ್ಲಿ ಪ್ರತ್ಯಕ್ಷ ಕೆಲಸ ಮಾಡದಂತಾಗಿರುವಿರೆಂಬದಕ್ಕೆ ನಮ್ಮ ಒಪ್ಪಿಗೆಯಿದೆ; ಆದರೆ ನೀವು ಇಲ್ಲಿಯೇ ಯಾವುದೊಂದು ದಂಡಿನ ಠಾಣ್ಯದ ಮುಖ್ಯಸ್ಥರಾಗಿ ಉಳಿದು, ನಿಮ್ಮ ಇಷ್ಟು ದಿನಗಳ ಅನುಭವವನ್ನು ನಿಮ್ಮ ಜಾತಿಬಾಂಧವರಿಗೆ ದೊರಕಿಸಿಕೊಟ್ಟು ಬ್ರಿಟಿಶ ಸಾಮ್ರಾಜ್ಯಾಭ್ಯುದಯಕ್ಕೆ ಸಹಾಯ ಮಾಡಬೇಕೆಂದು ಕೋರುವೆವು.” ಎಂಬ ಧೋರಣದ ಉತ್ತರವು ಬಂದಿತು. ಮನಸ್ಸಿಲ್ಲದಿದ್ದರೂ ಕರ್ನಲ್ ಡಬ್ಲಿನ್ನನು ಮತ್ತೆ ಕೆಲ ದಿನಗಳವರೆಗೆ ಇದ್ದು ಪೆನ್ಶನ್ ಪಡೆದು ಸ್ವದೇಶಕ್ಕೆ ತೆರಳಿದನು.

ಆಗಿನ ಯುರೋಪದ ಪ್ರವಾಸವು ಈಗಿನಷ್ಟು ಸುಲಭವೂ, ಸುಖಕರವೂ, ನಿರ್ದಿಷ್ಟವಾದ ಅವಧಿಯುದೂ ಆಗಿರಲಿಲ್ಲ ಹಿಂದುಸ್ತಾನದಿಂದ ಹೊರಟ ಹಡಗುಗಳು ಆಫ್ರಿಕೆಯನ್ನು ಸುತ್ತಿಕೊಂಡು ೪-೬ ತಿಂಗಳಿಗೆ ವಿಲಾಯತಿಗೆ ಹೋಗುತ್ತಿದ್ದವು. ವೃದ್ಧ ಡಬ್ಲಿನ್ನನು ಹೆಂಡತಿಯೊಡನೆ ಹಡಗವನ್ನೇರಿ ಹಿಂದುಸ್ತಾನದಿಂದ ಹೊರಟನೇನೋ ನಿಜ; ಆದರೆ ಮುಂದೆ ನಾಲ್ಕಾರು ದಿನಗಳಲ್ಲೇ ಅವನ ಹೆಂಡತಿಗೆ ಹಡಗದೊಳಗೇ ಕಠಿಣವಾದ ರೋಗವುಂಟಾಗಿ, ತುಸ ತಾಸುಗಳಲ್ಲೇ ಅವಳು ತನ್ನ ವೃದ್ಧ ಪತಿಯನ್ನು ತೊರೆದು ಕ್ರಿಸ್ತಲೋಕವನ್ನು ಕುರಿತು ತೆರಳಿದಳು! ಇದರಿಂದ ಪಾಪ! ಆ ವೃದ್ಧ ಕರ್ನಲ್ ಡಬ್ಲಿನ್ನನು ಒಮ್ಮೆಲೆ ವಿಪತ್ನೀಕನಾದನು. ವೃದ್ಧಾವಸ್ಥೆಯಲ್ಲಿ ಹೆಂಡತಿಯನ್ನು ಕಳಕೊಳ್ಳುವದು ಬಹು ಶೋಚನೀಯ ಸ್ಥಿತಿಯೆಂದು ಪಾಶ್ಚಿಮಾತ್ಯರ ತಿಳುವಳಿಕೆಯಾಗಿರುತ್ತದೆ; ಯಾಕಂದರೆ ಅವರಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆಯು ಇಲ್ಲವೇ ಇಲ್ಲ ಮಕ್ಕಳು ಪ್ರೌಢರಾಗಿ ಸ್ವಂತದ ಉಪಜೀವಿಕೆಯನ್ನು ದೊರಕಿಸಹತ್ತುತ್ತಲೆ ಅವರು ತಮ್ಮ ತಾಯಿತಂದೆಗಳಿಂದ ವಿಭಕ್ತರಾಗಿ ಇರಹತ್ತುತ್ತಾರೆ. ಹೀಗೆ ದೊಡ್ಡವರಾದ ಮಕ್ಕಳೆಲ್ಲ

ಬೇರೆ ಬೇರೆಯಾಗಿ ಇರಹತ್ತಿದ ಬಳಿಕ ವೃದ್ಧ ದಂಪತಿಗಳೇ ಒಬ್ಬರಿಗೊಬ್ಬರು ನೆರವಾಗಿರಬೇಕಾಗುವದು. ಲೇಡೀ ಡಬ್ಲಿನ್ನಳು ಗತಿಸಿದ್ದರಿಂದ ಕರ್ನಲ್ ಡಬ್ಲಿನ್ನನಿಗೆ ಅತ್ಯಂತ ಶೋಕವಾಯಿತು. ಎಲ್ಲ ಹಾನಿಗಳಿಗಿಂತ ಸತ್ತವರ ಹಾನಿಯು ತುಂಬಿ ಬರಲಾರದ ಹಾನಿಯಾಗಿದೆ. ಆದ್ದರಿಂದ ಎಷ್ಟು ಶೋಕಿಸಿದರೂ, ಹಳಹಳಿಸಿದರೂ ಅದು ಎಂದೂ ತುಂಬಿ ಬರಲಾರದು. ಕರ್ನಲ್ ಡಬ್ಲಿನ್ನನು ಅಷ್ಟೊಂದು ಅಳ್ಳೆದೆಯವನಾಗಿರಲಿಲ್ಲ. ಆದರಿಂದ ಅವನು ಆ ತುಂಬಿ ಬರಲಾರದ ಹಾನಿಗಾಗಿ ಹೆಚ್ಚಾಗಿ ಶೋಕಿಸುತ್ತ ಕೂಡ್ರದೆ, ಇದ್ದ ಸ್ಥಿತಿಯಲ್ಲೇ ಸಮಾಧಾನವನ್ನು ತಾಳಿ ಕಾಲಕ್ರಮಣ ಮಾಡಹತ್ತಿದನು.

ಕರ್ನಲ್ ಡಬ್ಲಿನ್ನನ ಹಡಗವು ಇಂಗ್ಲಂಡಕ್ಕೆ ತಲುಪಿದ ಬಳಿಕ ಅವನು ಆ ದುಃಖದಾಯಕವಾದ ವಾರ್ತೆಯನ್ನು ಪತ್ರಮುಖಾಂತರ ಹೆನರಿಗೆ ತಿಳಿಸಿದನು. ಅದನ್ನು ಕೇಳಿ ಅವನಿಗೆ ಅತ್ಯಂತ ದುಃಖವಾಯಿತು. ಇವಳು ಹಡೆದ ತಾಯಿ, ಇವಳು ಸಾಕು ತಾಯಿ ಎಂಬ ತಾರತಮ್ಯದ ಗುಟ್ಟೇ ಗೊತ್ತಿಲ್ಲದ ಹೆನರಿಯು ಲೇಡೀ ಡಬ್ಲಿನ್ನಳನ್ನು ತನ್ನ ಹಡೆದ ತಾಯಿಯೆಂದೇ ತಿಳಕೊಂಡಿದ್ದನು. ಅಂತೇ ಅವನು ಅವಳ ನಿಧನದ ವಿಷಯವಾಗಿ ಅಷ್ಟೊಂದು ದುಃಖಿಸಿದನು. ಕೆಲ ದಿನಗಳು ಕ್ರಮಿಸಿದ ಬಳಿಕ ಹೆನರಿಯು ಲೋಕ ರೂಢಿಯಂತೆ ದೇವರು ಇಟ್ಟ ಸ್ಥಿತಿಯಲ್ಲೇ ಸಮಾಧಾನವನ್ನು ತಾಳಿ, ತನ್ನ ವೃದ್ಧ ತಂದೆಗೆ ಒಂದು ವಿಸ್ತೃತವಾದ ಪತ್ರ ಬರೆದು, ಅದರಲ್ಲಿ ತಾಯಿಯ ಹಾಗು ಆತನ ವಿಷಯವಾಗಿ ಹೆಚ್ಚು ಕೃತಜ್ಞತೆಯನ್ನು ವ್ಯಕ್ತಪಡಿಸಿದನು. ಆ ಪತ್ರವಾಚನದಿಂದ ವೃದ್ಧ ಕರ್ನಲ್ಲನಿಗೆ ಅತಿಶಯವಾದ ಸಮಾಧಾನವೆನಿಸಿತು.

ಹೆನರಿಯ ಕಲ್ಯಾಣವು ಏತರಿಂದ ಆದೀತು, ಅವನ ಲೌಕಿಕವು ಹೇಗೆ ಬೆಳೆದೀತು, ಅವನು ಯಾತರಿಂದ ಸಂತುಷ್ಟನಾದಾನು-ಸದ್ಯಕ್ಕಿಂತಲೂ ಹೆಚ್ಚು ಕೃತಜ್ಞನಾದಾನು? ಎಂಬ ಬಗ್ಗೆ ಇತ್ತೀಚೆಗೆ ಕರ್ನಲ್ ಡಬ್ಲಿನ್ನನು ಒಂದೇಸವನೆ ವಿಚಾರಿಸಹತ್ತಿದ್ದನು. ಈ ವಿಚಾರವನ್ನು ಮಾಡಹತ್ತಹತ್ತಿದಂತೆ ಬೇಗನೆ ಹೆನರಿಯು ಲಗ್ನಮಾಡಿದರೆ ಇವೆಲ್ಲ ಪ್ರಶ್ನೆಗಳಿಗೆ ಒಂದೇ ಒಂದಾದ ಸಮರ್ಪಕ ಉತ್ತರವು ಲಭಿಸುವದೆಂದು ಅವನ ಖಾತ್ರಿಯಾಯಿತು. ಇಂಗ್ಲಂಡದ ಯಾವ ಊರಲ್ಲಿ ಕರ್ನಲ್ ಡಬ್ಲಿನ್ನನು ವಾಸಿಸುತ್ತಿದ್ದನೋ, ಅದೇ ಊರಲ್ಲಿ ಆತನ ಅಣ್ಣನ ಮಗಳ ಮನೆಯಿದ್ದಿತು. ಇವರ ಅಣ್ಣನಿಗೆ ಆ ಮಗಳ ಹೊರತು ಅನ್ಯ ಸಂತಾನವಿರಲಿಲ್ಲ. ಆ ಅಣ್ಣನ ಮಗಳು ತನ್ನ ಗಂಡನೊಡನೆ ಅಲ್ಲಿಯೇ ಇದ್ದು, ಡಬ್ಲಿನ್ನ

ಮನೆತನದ ಪೂರ್ವಪರಂಪರೆಗೆ ತಕ್ಕಂತೆ ಮರ್ಯಾದೆಯಿಂದ ಬಾಳುವೆ ಮಾಡುತ್ತಿದ್ದಳು. ಅವಳಿಗೆ ಒಬ್ಬಳೇ ಒಬ್ಬಳಾದ ಹೆಣ್ಣುಮಗಳಿದ್ದಳು. ಆ ಹುಡುಗಿಯು ಈಗ ೧೮ ವರ್ಷದ ವಯಸ್ಸಿನವಳಿದ್ದು, ಸುರೂಪಿಯೂ, ಸುಶಿಕ್ಷಿತಳೂ ಆಗಿದ್ದಳು. ಆ ಕನ್ಯೆಯನ್ನೇ ತನ್ನ ಮಗನಾದ ಹೆನರಿಗೆ ವಧುವನ್ನಾಗಿ ಸ್ವೀಕರಿಸಬೇಕೆಂದು ಕರ್ನಲ್ಲ ಡಬ್ಲಿನ್ನನು ನಿಶ್ಚಯಿಸಿದನು; ಮತ್ತು ಅವನು ಅದೇ ವಿಷಯವನ್ನು ಕುರಿತು ಸಾದ್ಯಂತವಾದ ಒಂದು ಪತ್ರವನ್ನು ಈಗ ಕೆಲವು ದಿನಗಳ ಹಿಂದೆ ಹೆನರಿಗೆ ಬರೆದಿದ್ದು, ಅವನ ಉತ್ತರದ ನಿರೀಕ್ಷಣೆ ಮಾಡುತಲಿದ್ದನು.

---

## ೪ನೆಯ ಪ್ರಕರಣ—ವಿಚಿತ್ರ ನ್ಯಾಯದಾನ!

ಪಾಶ್ಚಾತ್ಯ ದೇಶಗಳಲ್ಲಿ ವಿವಾಹ ಸಂಬಂಧವನ್ನುಂಟುಮಾಡುವ ಅಧಿಕಾರವೆಲ್ಲ ವಧೂ-ವರರದೇ ಆಗಿರುತ್ತದೆ. ಈ ದೇಶದಂತೆ ಅದು ಅವರ ತಂದೆ-ತಾಯಿಗಳ ಇಲ್ಲವೆ ಆಪ್ತೇಷ್ಟರ ಕೈಯೊಳಗಿರುವದಿಲ್ಲ. ಅವಿವಾಹಿತರಾದ ತರುಣ ತರುಣಿಯರು ಒತ್ತಟ್ಟಿಗೆ ಕಲೆತು, ಪರಸ್ಪರರ ಆಚರಣವನ್ನು ಸೂಕ್ಷ್ಮವಾಗಿ ನಿರೀಕ್ಷಿಸುವರು; ಹಾಗು ಅದಕ್ಕಾಗಿ ಕಂಡಕಂಡಲ್ಲಿ ಸ್ವೇಚ್ಛೆಯಿಂದ ಅಂಡಲೆಯುವರು. ಹೀಗೆ ಅವರು ಸ್ವೇಚ್ಛೆಯಿಂದ ವಿಹರಿಸುವಾಗ ಪರಸ್ಪರರಲ್ಲಿ ಪರಸ್ಪರರ ವಿಷಯವಾಗಿ ಪ್ರೇಮವು ಹುಟ್ಟಿದರೆ ವಿವಾಹಕ್ಕೆ ಒಪ್ಪುವರು; ಇಲ್ಲವಿದ್ದರೆ ಇಲ್ಲ. ಅವಿವಾಹಿತ ಸ್ಥಿತಿಯಲ್ಲಿಯ ತರುಣ ತರುಣಿಯರ ಸಹವಾಸಕ್ಕೆ "ಕೋರ್ಟಶಿಪ್" ಎಂದು ಅಲ್ಲಿ ಅನ್ನುತ್ತಾರೆ. ಆ ಕೋರ್ಟಶಿಪ್ಪಿನ ಅಡಚಣಿಯು ಕ. ಡಬ್ಲಿನ್ನನ ಮಗನ ಲಗ್ನಕ್ಕೆ ಹೆಚ್ಚಾಗಿ ಭಾಸವಾಗಹತ್ತಿತು ಯಾಕಂದರೆ ಅವನ ಮಗನು ಹಿಂದುಸ್ತಾನದಲ್ಲಿರುತ್ತಿದ್ದನು; ಆತನ ಭಾವೀಹೆಂಡತಿಯು ಇಂಗ್ಲಂಡದಲ್ಲಿರುತ್ತಿದ್ದಳು. ಅವರೀರ್ವರ ನಡುವೆ ಕೋರ್ಟಶಿಪ್ ಉಂಟಾಗುವ ಬಗೆಯೇ ಇರಲಿಲ್ಲ.

ಆದರೆ ಹೆನರಿ ಡಬ್ಲಿನ್ನನು ತನ್ನ ಶಿಕ್ಷಣಾವಸ್ಥೆಯಲ್ಲಿ ಇಂಗ್ಲಂಡದಲ್ಲೇ ವಾಸಿಸುತ್ತಿದ್ದನು. ಆಗ ಆ ಹುಡುಗಿಯು ಅವನ ಮನೆಯ ಸಮೀಪದಲ್ಲಿಯೇ ಇರುತ್ತಿದ್ದಳು. ಅದರಿಂದ ಅವರೀರ್ವರೂ ಕೂಡಿ ಆಡಿದವರೂ ಒಬ್ಬರ ಸ್ವಭಾವವನ್ನೊಬ್ಬರು ಅರಿತಂಥವರೂ ಆಗಿದ್ದರು. ಇದರಿಂದ ವೃದ್ಧ ಡಬ್ಲಿನ್ನನು ಆ ಕೋರ್ಟಶಿಪ್ಪಿನ ಪೊಳ್ಳುಬೆದರಿಕೆಗೆ ಬೆದರದೆ ತನ್ನ ಮಗನ ಲಗ್ನದ ಸಿದ್ಧತೆಯನ್ನು ನಡಿಸಿದನು.

ಕೆಲ ಕಾಲದ ನಂತರ ಹೆನರಿಯ ಉತ್ತರವು ಡಬ್ಲಿನ್ನನಿಗೆ ಬಂದಿತು. ಅದರಲ್ಲಿ ಹಲವು ಸಂಗತಿಗಳು ವಿಶದವಾಗಿ ಬರೆಯಲ್ಪಟ್ಟಿದ್ದರೂ, ನಾವು ಅವೆಲ್ಲವುಗಳ ಗೋಜಿಗೆ ಹೋಗದೆ, ಲಗ್ನದ ವಿಷಯವಾಗಿ ಏನು ಬರೆದಿರುವನೆಂಬದಷ್ಟನ್ನೇ ನೋಡೋಣ. "ತಮ್ಮ ಪ್ರತಿಯೊಂದು ಪ್ರಯತ್ನವು ನನ್ನ ಹಿತಕ್ಕಾಗಿಯೇ ಇರುತ್ತದೆಂಬದಕ್ಕೆ ಸಂಶಯವಿಲ್ಲ; ಮತ್ತು ಸದ್ಯಕ್ಕೆ ತಾವು ಯಾವಳೊಡನೆ ನನ್ನ ಲಗ್ನಮಾಡಬೇಕೆಂದು ಇಚ್ಛಿಸಿರುವಿರೋ ಅವಳೊಡನೆ ಲಗ್ನವಾಗುವದು ನನಗೆ ಮನಃಪೂರ್ವಕವಾಗಿ ಬೇಡವಾಗಿದ್ದರೂ, ನಾನು ತಮ್ಮ ಪ್ರಯತ್ನಕ್ಕೂ ಇಚ್ಛೆಗೂ ವಿರುದ್ಧವಾಗಿ ನಡೆಯುವದಿಲ್ಲ ನನ್ನ ಕರ್ತವ್ಯವೆಂದು ನಾನು ತಮ್ಮ ಪ್ರತಿಯೊಂದು ಬಗೆಯ ಆಜ್ಞೆಯನ್ನು ಪಾಲಿಸಲಿಕ್ಕೆ ಬದ್ಧನಾಗಿರುತ್ತೇನೆ" ಈ ಸಂಗತಿಯನ್ನು ಓದಿ ವೃದ್ಧ ಡಬ್ಲಿನ್ನನಿಗೆ ಆಶ್ಚರ್ಯವೂ, ಉದ್ವಿಗ್ನತೆಯೂ ಎನಿಸಿತು. ಆದರೂ ಅವನು ಹೆನರಿಯಲ್ಲಿ ಕೋಪ ತಾಳದೆ, "ಲಗ್ನವು ನಿಶ್ಚಿತವಾಯಿತು. ರಜೆ ಪಡೆಕೊಂಡು ಬೇಗನೆ ಹೊರಟು ಬಾ" ಎಂಬ ಸಂಗತಿಯ ಪತ್ರವನ್ನು ಮತ್ತೆ ಬರೆದನು.

ಮರುದಿನ ವೃದ್ಧ ಡಬ್ಲಿನ್ನನು ಆ ಹುಡುಗಿಯನ್ನು ಕುರಿತು, "ತಂಗೀ, ನೀನು ನಮ್ಮ ಹೆನರಿಯನ್ನು ಲಗ್ನವಾಗುವಿಯಾ?" ಎಂದು ಆ ದೇಶದ ರೀತಿ ರಿವಾಜಿಗೆ ವಿರುದ್ಧವಾಗಿ ಪ್ರಶ್ನಮಾಡಿದನು. ಆ ಪ್ರಶ್ನೆಯಿಂದ ಆ ಹುಡುಗಿಯು ಆಶ್ಚರ್ಯಭರಿತಳಾದರೂ ಸಿಟ್ಟಿಗೇಳದೆ:—ಅಜ್ಜಾ, ಹೆನರಿಯು ಇಲ್ಲಿರುವಾಗ ಎಂದೂ ನನ್ನನ್ನು ಪ್ರೀತಿಸಿದಂತೆ ತೋರುವದಿಲ್ಲ. ಹೀಗಿರುವಾಗ ಅವನು ನನ್ನನ್ನು ಲಗ್ನವಾಗುವದೆಂತು? ಎಂದು ಕೇಳಲು,

"ತಂಗೀ, ಆ ಬಗ್ಗೆ ನೀನು ಸಂಶಯಪಡಬೇಡ; ಅವನು ಇಲ್ಲಿರುವಾಗ ನಿನ್ನನ್ನು ಪ್ರೀತಿಸದಂತೆ ನಿನಗೆ ತೋರುತ್ತಿದ್ದರೂ, ಅವನು ನಿನ್ನೊಡನೆ ಲಗ್ನವಾಗಲು ಒಪ್ಪಿರುತ್ತಾನೆ. ನನಗೆ ಆ ನನ್ನ ಹೆನರಿಯ ಹೊರತು ಅನ್ಯ ಮಕ್ಕಳಿಲ್ಲೆಂಬದು ನಿನಗೆ ಗೊತ್ತೇ ಇದೆ. ದೇವರ ದಯೆಯಿಂದ ನಮ್ಮ ಮನೆತನದ ಆಸ್ತಿ-ಪಾಸ್ತಿಗೂ, ಮಾನ-ಮರ್ಯಾದೆಗೂ ಕೊರತೆಯಿಲ್ಲ. ಅದರಿಂದ ನೀನು ಅವನೊಡನೆ ವಿವಾಹವಾಗಲು ಸಮ್ಮತಿಸಿದರೆ, ನಿಮ್ಮಿಬ್ಬರ ಸೌಖ್ಯಕ್ಕೆ ಕೊನೆಯೇ ಇರಲಾರದು.

ಹೀಗೆಂದ ಆ ವೃದ್ಧನ ಮಾತಿಗೆ ಆ ನವತರುಣಿಯು ಸಸ್ಮಿತಳಾಗಿ ಸಮ್ಮತಿ ಸೂಚಿಸಿದಳು. ಅದರಿಂದ ಆ ಮುದುಕನಿಗೆ ತುಂಬಾ ಸಂತೋಷವಾಯಿತು.

ಅವನ ಮನಃಚಕ್ಷುವಿನ ಮುಂದೆ ತನ್ನ ಮಗನ ಭಾವೀಸುಖ-ಸಂತೋಷದ ಚಿತ್ರ ಪಟಗಳು ಒಂದರ ಹಿಂದೊಂದರಂತೆ ಎಡೆಬಿಡದೆ ಕಾಣಿಸಿಕೊಳ್ಳಲಾರಂಭಿಸಿದವು. ಮನುಷ್ಯನಿಗೆ ಅತಿ ದುಃಖವಾದರೂ ಕಷ್ಟ; ಅತಿ ಸುಖವಾದರೂ ಕಷ್ಟ. ಅದರಲ್ಲಿ ಶಾರೀರಿಕ ಸುಖ-ದುಃಖಗಳಿಗಿಂತ ಮಾನಸಿಕ ಸುಖ-ದುಃಖಗಳ ಬಲದಿಂದ ಮನುಷ್ಯನ ದೇಹಸ್ವಾಸ್ಥ್ಯವು ಒಮ್ಮೆಲೆ ಹೆಚ್ಚು ಕಡಿಮೆಯಾಗುವದು. ತನ್ನ ಮಗನಾದ ಹೆನರಿಯು ಲಗ್ನವು ಇನ್ನು ತಿಂಗಳೊಪ್ಪತ್ತಿನಲ್ಲಿ ಆಗಿ, ಅವನಿಗೆ ಬೇಗನೆ ಒಂದು ಸುಂದರ ಶಿಶುವು ಜನಿಸುವದೆಂದೂ, ಆ ಶಿಶುವಿನೊಡನೆ ಸುಖದಿಂದ ಕಾಲಹರಣ ಮಾಡುತ್ತ ತನ್ನ ಶೇಷಾಯುಷ್ಯವನ್ನು ಕಳೆಯಬೇಕೆಂದೂ ಆ ವೃದ್ಧ ಡಬ್ಲಿನ್ನನು ನಿಶ್ಚಯಿಸಿದನು; ಆದರೆ ಅಘಟಿತಘಟನಾಸ್ವರೂಪಿಯಾದ ಕಾಲ ಮೃತ್ಯುವಿನ ಮುಂದೆ ಅದಾರ ಆಟವು ನಡೆಯಬೇಕಾಗಿದೆ? ಮುಂದೆ ಒಂದೆರಡು ದಿನಗಳಲ್ಲೇ ಆ ವೃದ್ಧ ಡಬ್ಲಿನ್ನನು ಆಕಸ್ಮಿಕ ರೋಗದಿಂದ ಮೃತ್ಯುಶಯ್ಯಾಪನ್ನನಾದನು. ತಾನು ಇನ್ನು ಬದುಕುವದಿಲ್ಲೆಂಬದೂ, ಸಾಯುವಷ್ಟರಲ್ಲಿ ತನಗೆ ತನ್ನ ಮಗನ ಭೆಟ್ಟಿಯಾಗುವದಿಲ್ಲೆಂಬದೂ ಖಾತ್ರಿಯಾದೊಡನೆ ಅವನು ಒಂದು ಮೃತ್ಯುಪತ್ರವನ್ನು ಬರೆಯಿಸಿದನು. ಆ ಮೃತ್ಯುಪತ್ರದಲ್ಲಿ ತನ್ನ ಪಶ್ಚಾತ್ ತನ್ನ ಎಲ್ಲ ಸ್ಥಾವರ ಜಂಗಮ ಆಸ್ತಿಗಳಿಗೆ ತನ್ನ ಮಗನೂ, ಭಾವೀ ಸೊಸೆಯೂ ಮಾಲಿಕರೇ ಹೊರತು ಅನ್ಯರಾರಿಗೂ ಅದರ ಅಂಶವು ಕೂಡ ದೊರೆಯಬಾರದೆಂದು ಸ್ಪಷ್ಟವಾಗಿ ಕಾಣಿಸಿದ್ದನು. ಮೃತ್ಯುಪತ್ರವು ಬರೆದು ನೋಂದಣಿಯಾದ ಬಳಿಕ ಆ ಮುದುಕನು ಆ ಕಾಗದಕ್ಕೆ ತನ್ನಲ್ಲಿಯ ಬೇರೊಂದು ಬಹು ಗುಪ್ತವಾದ ಕಾಗದವನ್ನು ಸೇರಿಸಿ ಆವೆರಡನ್ನೂ ಒಂದು ಲಕ್ಕೋಟಿಯಲ್ಲಿ ಹಾಕಿ ಮೊಹರು ಮಾಡಿದನು; ಹಾಗೂ ಅದನ್ನು ತನ್ನ ಆಗಾಮಿ ಸೊಸೆಯಾದ ಆ ತನ್ನ ಅಣ್ಣನ ಮೊಮ್ಮಗಳ ಕೈಗೆ ಕೊಟ್ಟು, "ತಂಗೀ, ಇದನ್ನು ನಿನ್ನ ಬಳಿಯಲ್ಲಿ ಜೋಕೆಯಿಂದಿಟ್ಟುಕೋ. ನಮ್ಮ ಹೆನರಿಯು ಇನ್ನೊಂದು ವಾರದೊಳಗೆ ಇಲ್ಲಿಗೆ ಬರುವನು. ಬಂದ ಕೂಡಲೆ ಅವನಿಗೆ ಈ ಮೊಹರಬಂದ ಲಕ್ಕೋಟಿಯನ್ನು ಕೊಡು. ಬಳಿಕ ನೀನು ಅವನೊಡನೆ ಲಗ್ನವಾಗಿ ಸುಖದಿಂದ ಇರು. ಅವನು ಬರುವಷ್ಟರಲ್ಲಿ ಸ್ತ್ರೀಸ್ವಭಾವಕ್ಕನುಗುಣವಾಗಿ ಚಾಂಚಲ್ಯದಿಂದ ನೀನು ಈ ಲಕ್ಕೋಟಿಯನ್ನು ಒಡೆದು ನೋಡಿದ್ದಾದರೆ, ನಿನಗೆ ಎಂದೂ ಕಲ್ಯಾಣವಾಗಲಿಕ್ಕಿಲ್ಲ. ಇದೇ ಈ ಮುದುಕನ ಕಡೆಯ ಮಾತು!" ಎಂದು ಹೇಳಿ ಕುಸ ಹೊತ್ತಿನಲ್ಲಿಯೇ ದೈವಾಧೀನನಾದನು!

ವೃದ್ಧ ಡಬ್ಲಿನ್ನನು ಎಷ್ಟು ವಿಶ್ವಾಸದಿಂದ ಆ ಲಕ್ಕೋಟಿಯನ್ನು ಆ ನವ

ತರುಣಿಯು ಕಡೆಗೆ ಕೊಟ್ಟಿದ್ದನೋ, ಅಷ್ಟೊಂದು ವಿಶ್ವಾಸಕ್ಕೆ ಅವಳು ಸರ್ವಥಾ ಪಾತ್ರಳಿದ್ದಿಲ್ಲ. ಯಾಕಂದರೆ ಅವಳು ಹೆನರಿಯನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದಿಲ್ಲ. ಅದರಿಂದ ಅವಳು ಅವನನ್ನು ಲಗ್ನವಾಗುವಂತಿರಲಿಲ್ಲ. ಇಷ್ಟೇ ಅಲ್ಲ; ಆ ಹೊಯ್ಕಾಳೆಯು ಈ ಮೊದಲೇ ಯಾವನೊಬ್ಬ ಮಿಂಡ ನನ್ನು ಸೇರಿಕೊಂಡಿದ್ದಳು. ಅದರಿಂದ ಆ ಚಂಚಲೆಯು ಆ ತನ್ನ ಪ್ರಿಯ ಕರನಿಗೆ ಆ ವೃದ್ಧನು ಕೊಟ್ಟ ಆ ಇಡುಗಂಟಾದ ಲಕ್ಕೋಟಿಯನ್ನು ತೋರಿಸಿ ದಳು. ಆ ತರುಣನು ಮೊದಲೇ ಅಸದ್ವ್ಯವಹಾರಿಯು. ಅದರಲ್ಲಿ ಆ ವೃದ್ಧನ ಆಸ್ತಿಯನ್ನು ನೆಗವಿಹಾಕಬೇಕೆಂಬ ಲಾಲಸೆಯು ಹುಟ್ಟಿದ ಬಳಿಕ ಕೇಳುವದೇನು? ಕೂಡಲೆ ಆ ಲಕ್ಕೋಟಿಯನ್ನು ಒಡೆದು ಓದಹತ್ತಿದನು. ಆ ಮೃತ್ಯುಪತ್ರ ವನ್ನು ಓದಿದನಂತರ ಅವನು ಅದಕ್ಕೆ ಅಂಟಿಸಿದ್ದ ಬೇರೊಂದು ಕಾಗದವನ್ನೂ ಓದಿದನು. ಆ ಬೇರೆ ಕಾಗದದ ವಾಚನದಿಂದ ಅವನು ಹರ್ಷಾತಿರೇಕನಾದನು. ಆ ಕಾಗದದ ಸಂಗತಿಯನ್ನು ಅವನು ತನ್ನ ಮಿಂಡೆಗೂ ತಿಳಿಸಿದನು. ಬಳಿಕ ಅವರೀರ್ವರೂ ಹೊಸದೊಂದು ವಂಚಿಕೆಯನ್ನು ಹಾಕಿ, ಕಾರ್ಯಪ್ರವೃತ್ತ ರಾದರು.

ವೃದ್ಧ ಕರ್ನಲ್ಲ ಡಬ್ಲಿನ್ನನು ಸತ್ತ ಒಂದು ವಾರದೊಳಗೆ ಹೆನರಿ ಡಬ್ಲಿನ್ನನು ಇಂಗ್ಲಂಡಕ್ಕೆ ಬಂದು ತಲುಪಿದನು. ತಂದೆಯ ನಿಧನದ ಸಂಗತಿಯನ್ನು ಕೇಳಿ ಅವನಿಗೆ ಹೆಚ್ಚಾಗಿ ಶೋಕವಾಯಿತು. ಕೆಲ ದಿನಗಳ ವರೆಗೆ ಅವನು ಅನ್ನ ನೀರು ಗಳನ್ನು ಕೂಡ ಬಿಟ್ಟು ಒಂದೇಸವನೆ ಶೋಕಿಸುತ್ತಿದ್ದನು; ಆದರೆ ಕಾಲನ ವಿಚಿತ್ರ ಲೀಲೆಯಿಂದ ಕುಸ ದಿನಗಳಲ್ಲೇ ಅವನು ವಿವೇಕವನ್ನು ತಾಳಿ ಶಾಂತನಾ ದನು. ಹೆನರಿಗೆ ಹೆಚ್ಚಾಗಿ ರಜೆ ಇರಲಿಲ್ಲ ಅದರಿಂದ ಅವನು ಸಿಕ್ಕಷ್ಟು ಅವಧಿ ಯಲ್ಲಿ ತನ್ನ ಆಸ್ತಿಯ ವ್ಯವಸ್ಥೆಯನ್ನು ಮಾಡಿ, ಮರಳಿ ತನ್ನ ನೌಕರಿಗೆ ಹೊರ ಡುವ ಉದ್ಯೋಗಕ್ಕೆ ಆರಂಭಿಸಿದನು.

ಇಷ್ಟರಲ್ಲಿ ಆ ಉಪದ್ವ್ಯಾಪಿ ತರುಣಿಯು-ಹೆನರಿಯ ಭಾವೀಪತ್ನಿಯು- ತನ್ನ ಜೊತೆಗಾರನೊಡನೆ ಕರ್ನಲ್ಲ ಡಬ್ಲಿನ್ನನ ಆಸ್ತಿ ಇದ್ದ ಕಡೆಗೆಲ್ಲ ನೋಟೀಸ ಗಳನ್ನು ಮಾಡಿ, ಸದರಿ ಆಸ್ತಿಗೆಲ್ಲ ತಾನೇ ನಿಜವಾದ ಹಕ್ಕುದಾರಳೆಂದೂ, ಹೆನ ರಿಗೆ ಆ ಬಗ್ಗೆ ಕೊಂಚವೂ ಬಾಧ್ಯಸ್ಥತೆಯುಂಟಾಗುವದಿಲ್ಲೆಂದೂ, ತನ್ನ ಹುಕು ಮಿನ ಹೊರತು ಯಾವ ವ್ಯವಹಾರವೂ ನಡೆಯಲಾಗದೆಂದೂ ಸಾರಿದಳು. ಲಂಡನ್ನಪಟ್ಟಣದಿಂದ ಬಹು ದೂರದಲ್ಲಿದ್ದ ಆ ಆಸ್ತಿಯ ಒಬ್ಬ ಗುಮಾಸ್ತನು ಆ

ನೋಟೀಸನ್ನು ನೋಡಿ ನಿಜಸಂಗತಿಯನ್ನು ತಿಳಿಯದೆ ದಿಙ್ಮೂಢನಾದನು; ಯಾಕಂದರೆ ಕರ್ನಲ್ಲ ಡಬ್ಲಿನ್ನನ ನಿಜವಾದ ವಾರಸದಾರನು ಹೆನರಿ ಡಬ್ಲಿನ್ನನೇ ಎಂಬದೂ ಮತ್ತು ಕರ್ನಲ್ಲ ಡಬ್ಲಿನ್ನನು ಸಾಯುವಾಗ ಮಾಡಿದ ಮೃತ್ಯು ಪತ್ರದ ಪ್ರಕಾರ ಹೆನರಿಯೇ ವಾರಸದಾರನೆಂಬದೂ ಅವನಿಗೆ ಚೆನ್ನಾಗಿ ಗೊತ್ತಿತ್ತು. ಆದರೂ ಅವನು ಆ ನೋಟೀಸಿನ ಸಂಗತಿಯನ್ನು ಹೆನರಿಗೆ ಪತ್ರ ಮುಖಾಂತರ ತಿಳಿಸಿ ಒಮ್ಮೆ ತನ್ನಲ್ಲಿಗೆ ಬಂದು ಇಲ್ಲಿಯ ಆಸ್ತಿಯನ್ನು ಕಣ್ಣಾರೆ ಕಂಡು ಹೋಗಬೇಕೆಂದು ವಿನಂತಿ ಮಾಡಿಕೊಂಡನು. ಹೆನರಿಯಾದರೂ ಮರುದಿನ ಅಲ್ಲಿಗೆ ಹೊರಟು ಹೋದನು.

ಆ ಹಳ್ಳಿಯಲ್ಲಿ ೧-೨ ದಿನಗಳ ವರೆಗೆ ಸುಖವಾಗಿದ್ದು, ಹೆನರಿಯು ಮರಳಿ ಲಂಡನ್ನ ಪಟ್ಟಣಕ್ಕೆ ಬಂದು ತನ್ನ ಮನೆಯನ್ನು ಪ್ರವೇಶಿಸ ಹೋಗುತ್ತಾನೆ; ಅಲ್ಲಿದ್ದ ಇಬ್ಬರು ಶಿಪಾಯರು ಅವನನ್ನು ಒಳಗೆ ಪ್ರವೇಶಿಸಗೊಡದೆ, ಅವನಿಗೆ ಅಲ್ಲಿಯ ಕೋರ್ಟಿನ ಒಂದು ಶಮನ್ಸನ್ನು ತೋರಿಸಿ, ಅದಕ್ಕೆ ಅವನಿಂದ ಸಹಿ ಮಾಡಿಸಿಕೊಂಡರು. ಮುದ್ದತು ಅಂದೇ ಮಧ್ಯಾಹ್ನವಿದ್ದಿತು. ಅದರಿಂದ ಹೆನರಿಗೆ ಆಗ ಬೇರೆ ಉಪಾಯವನ್ನು ಆಲೋಚಿಸಲಿಕ್ಕೆ ಕೂಡ ಅವಕಾಶವುಳಿಯಲಿಲ್ಲ. ಕೂಡಲೆ ಅವನು ತನ್ನ ಮಿತ್ರರಲ್ಲಿಯ ಕೆಲವು ಜನ ಪ್ರಸಿದ್ಧ ಬ್ಯಾರಿಷ್ಟರರೊಡನೆ ಕೋರ್ಟಿಗೆ ಹಾಜರಾದನು; ಹಾಗು ಕೋರ್ಟಿನಲ್ಲಿಯ ಪ್ರಕಾರವನ್ನು ಕಂಡು ವಾಟರ್ಲೂಕಾಳಗದಂಥ ಜಗದ್ವಿಖ್ಯಾತ ಕಾಳಗದಲ್ಲಿ ಎದೆಗಾರನಾಗಿ ಕಾದಿದ್ದ ಆ ಹೆನರಿ ಡಬ್ಲಿನ್ನನು ಪರಮಾಶ್ಚರ್ಯಪಟ್ಟು, ತಲೆ ಕೆಳಗೆ ಹಾಕಿಕೊಂಡು ನಿಂತನು.

ಆಗ ಕೋರ್ಟಿನಲ್ಲಿ ಹೆನರಿಯ ಭಾವೀಪತ್ನಿಯಾದ ಆ ತರುಣಿಯು ತನ್ನ ಗೆಳೆಯನೊಡನೆ ವಾದಿಯಾಗಿದ್ದು, ಅವಳು ತನ್ನ ಕಡೆಯ ಪುರಾವೆಯನ್ನು ಬ್ಯಾರಿಸ್ಟರರ ಮುಖಾಂತರ ನ್ಯಾಯಾಧೀಶರಿಗೆ ತಿಳಿಸುತ್ತಿದ್ದಳು. ವಾದಿಯ ಬ್ಯಾರಿಸ್ಟರರು ನ್ಯಾಯಾಧೀಶರಿಗೆ ಕರ್ನಲ್ ಡಬ್ಲಿನ್ನನ ಮೃತ್ಯುಪತ್ರವನ್ನು ಸಂಕ್ಷೇಪ ರೀತಿಯಿಂದ ಓದಿ ತೋರಿಸಿ, ನಂತರ ಅದಕ್ಕೆ ಅಂಟಿಸಿದ್ದ ಕ್ರಿಸ್ತವಾಸಿ ಕರ್ನಲ್ ಡಬ್ಲಿನ್ನನ ಸ್ವದಸ್ತೂರ ಪತ್ರವನ್ನು ಸಾದ್ಯಂತವಾಗಿ ಓದಲಾರಂಭಿಸಿದರು. ಆ ಪತ್ರದಿಂದಲೇ ಹೆನರಿಯ ಮೇಲೆ ಕಡು ಗಂಡಾಂತರವುಂಟಾಗುವದಿದ್ದಿತು. ಅದರಿಂದಲೇ ವಾದಿಯ ಕಡೆಯ ಬ್ಯಾರಿಸ್ಟರರು ಆ ಪತ್ರವನ್ನು ಒಳ್ಳೇ ಹಾವಭಾವದಿಂದ ಕೋರ್ಟಿನೆದುರಿಗೆ ಓದಿ ತೋರಿಸುತ್ತಿದ್ದರು. ಆ ಪತ್ರ ಓದುವದು

ಮುಗಿದ ಕೂಡಲೆ ನ್ಯಾಯಾಧೀಶನು ಪ್ರತಿವಾದಿಯು ಅಂದರೆ ಹೆನರಿ ಡಬ್ಲಿನ್ನನ ಕಡೆಯು ಯಾವ ವಿಚಾರಣೆಯುನ್ನೂ ಮಾಡದೆ, "ಕರ್ನಲ್ ಡಬ್ಲಿನ್ನನ ಎಲ್ಲ ಆಸ್ತಿಗೆ ಈ ತರುಣಿಯೋ ಹಕ್ಕುದಾರಳು. ಈ ಹೆನರಿಯು ಇಂಗ್ಲಿಷ ಜನಾಂಗದವನಲ್ಲ; ಹಿಂದುವು-ಕರೀ ಮನುಷ್ಯನು. ಅದರಿಂದ ಕರ್ನಲ್ ಡಬ್ಲಿನ್ನನು ತನ್ನ ಆಸ್ತಿಯ ನ್ನೆಲ್ಲ ಇವನಿಗೆ ಮೃತ್ಯುಪತ್ರದಿಂದ ಬರೆದು ಕೊಟ್ಟಿದ್ದರೂ ಇಂಗ್ಲಿಷ ಕಾಯಿದೆಯ ಪ್ರಕಾರ ಇವನಿಗೆ ಆ ಆಸ್ತಿಯ ಒಂದು ಕವಡಿಯು ಕೂಡ ಸಿಗಲಾರದು." ಎಂದು ತೀರ್ಪು ಹೇಳಿದನು!

ಕರ್ನಲ್ಲ ಡಬ್ಲಿನ್ನನು ಬರೆದಿಟ್ಟ ಆ ಪತ್ರದ ಸಂಗತಿಯನ್ನು ಕೇಳಿ, ಈವರೆಗೆ ಯಾವನನ್ನು ತಮ್ಮ ಸ್ವಜಾತಿಯವನೂ, ಪರಮ ಮಿತ್ರನೂ, ಋಣಾನುಬಂಧಿ ಕನೂ, ದಂಡಿನ ದೊಡ್ಡ ಅಧಿಕಾರಿಯೂ ಎಂದು ತಿಳಿಯುತ್ತಿದ್ದರೋ ಹೆನರಿಯ ಆ ಮಿತ್ರರು ಪರಕ್ಷಣದಲ್ಲಿ ಅವನಿಗೆ ಹುಶ್-ಹುಶ್ ಎಂದಂದು ಅವನಿಂದ ಶಕ್ಯ ವಿದ್ದಷ್ಟು ದೂರ ಸರಿಯಹತ್ತಿದರು. ಹೀಗೆ ಒಮ್ಮೆಲೆ ಹೆನರಿಯ ಭವಿತವ್ಯತೆ ಯನ್ನು ವಿಪರೀತವಾಗಮಾಡಿದ ಆ ಪತ್ರದ ಸಂಗತಿಯಾದರೂ ಏನಿರಬಹುದೆಂದು ನಮ್ಮ ವಾಚಕರು ತರ್ಕಿಸುತ್ತಿರಬಹುದು. ಅದಕ್ಕಾಗಿ ಕರ್ನಲ್ ಡಬ್ಲಿನ್ನನು ಬರೆದಿಟ್ಟ ಆ ಪತ್ರದ ಸಾರಾಂಶವನ್ನು ಇಲ್ಲಿ ಕೊಡುವೆವು:—

"ತಮ್ಮಾ ಹೆನರಿ, ನೀನು ನನ್ನ ಔರಸ ಪುತ್ರನಲ್ಲ; ಹಿಂದುಸ್ತಾನದ ಬಂಡಾಯದ ಕಾಲದಲ್ಲಿ ಉತ್ತರ ಹಿಂದುಸ್ತಾನದಲ್ಲಿ ದೊರೆತ ಒಬ್ಬ ಅನಾಥ ಶಿಶುವು. ಶಿಶುವಿದ್ದಾಗಿನ ನಿನ್ನ ರೀವು, ನಿನ್ನೊಡನೆ ಇದ್ದ ಲವಾಜಮು ಇವುಗಳ ಮೇಲಿಂದ ನೀನು ಅಲ್ಲಿಯ ಯಾವನೊಬ್ಬ ಸಂಸ್ಥಾನಿಕನ ಮಗನಾಗಿರಬೇಕು. ನೀನು ಹಿಂದೂ ಸಂಸ್ಥಾನಿಕನ ಮಗನೇ ಎಂಬುದಕ್ಕೆ ನನ್ನಲ್ಲಿ ಇನ್ನೊಂದು ಮಹ ತ್ವದ ಆಧಾರವುಂಟು. ಅದೇನಂದರೆ, ತಿಪುರೂಪದಲ್ಲಿ ನೀನು ನನಗೆ ದೊರೆತಾಗ ನಿನ್ನ ಸಂಗಡ ಇದ್ದ ಎತ್ತಿನ ಬಂಡಿಗಳಲ್ಲಿ ದೊರೆತ ಅಮೂಲ್ಯವಾದ ಹಿಂದೂ ಪದ್ಧತಿಯ ಮುತ್ತು-ರತ್ನಗಳೂ, ಆಭರಣಗಳೂ ಸಾಕ್ಷಿಭೂತವಾಗಿರುತ್ತವೆ. ನಾನು ಅವುಗಳಲ್ಲಿಯ ಒಂದು ಕೂದಲೆಳೆಯನ್ನು ಕೂಡ ಇದುವರೆಗೂ ಸ್ಪರ್ಶಿ ಸಿರುವದಿಲ್ಲ. ಆ ಕೋಟ್ಯವಧಿ ಆಸ್ತಿಯನ್ನೆಲ್ಲ ನನ್ನ ಈ ಮನೆಯ ಅಗೋಚರ ಬದಿಯ ಇಕ್ಕಟ್ಟಾದ ಕೋಣೆಯಲ್ಲಿ ಪೆಟ್ಟಿಗೆಗಳಲ್ಲಿ ತುಂಬಿ, ಅವಕ್ಕೆ ಮೊಹರು ಮಾಡಿಟ್ಟಿರುತ್ತೇನೆ. ಅದೆಲ್ಲ ಆಸ್ತಿಯು ನಿನ್ನದೇ. ನಿನಗೆ ಬೇಕಾದಾಗ ನೀನು ಅದನ್ನು ನೋಡಿಕೊಳ್ಳಬಹುದು. ನಿನ್ನ ವಿಷಯದ ಈ ಇಂಗಿತವನ್ನು ಇದುವರೆಗೆ ನಾನು

ಯಾರಿಗೂ ತಿಳಿಸಿರುವದಿಲ್ಲ. ನಿನಗಾದರೂ ತಿಳಿಸುವ ಉದ್ದೇಶವಿರಲಿಲ್ಲ; ಆದರೆ ಆ ಅಮೂಲ್ಯವಾದ ಮುತ್ತು-ರತ್ನಗಳು ಎಲ್ಲಿಯವೆಂದು ನಾಳೆ ನಿನಗೆ ದಿಗಿಲು ಉಂಟಾಗಬಾರದೆಂದು ಈ ಗುಪ್ತ ಸಂಗತಿಯನ್ನು ಈ ಕಾಗದದಲ್ಲಿ ಬರೆದು ನಿನಗೆ ತಿಳಿಸಿರುತ್ತೇನೆ. ನಾನು ಜೀವಂತನಿರುವವರೆಗೆ ನೀನು ಬಂದಿದ್ದರೆ ನಿನಗೆ ಹೇಳ ತಕ್ಕದ್ದನ್ನು ಸಮಕ್ಷಮ ಹೇಳಿ, ಈ ಕಾಗದವನ್ನು ನಾಶಪಡಿಸುತ್ತಿದ್ದೆನು; ಆದರೆ ಹಾಗೆ ಆಗುವದು ಶಕ್ಯವಾಗಿ ತೋರದ್ದರಿಂದ ಈ ನಿನ್ನ ಜೀವನರಹಸ್ಯವನ್ನು ಈ ಪತ್ರಮುಖಾಂತರ ನಿನಗೆ ತಿಳಿಸಿರುತ್ತೇನೆ. ಓದಿ ತಿಳಕೊಂಡವನೇ ಈ ಕಾಗದವನ್ನು ಸುಟ್ಟು ಬಿಡು; ಮರವಿನಿಂದ ಎಲ್ಲಿಯಾದರೂ ಇಟ್ಟಿಯೆಂದರೆ, ಈ ಸೈತಾನೀ ಇಂಗ್ಲಿಷ ಸಮಾಜವು ಈ ಕಾಗದದ ಆಧಾರದಿಂದ ನಿನ್ನನ್ನು ನಿರಾಶ್ರಯಗೊಳಿಸಿ, ಓಣಿಯ ತಿರುಕನನ್ನಾಗಿ ಮಾಡದೆ ಬಿಡದು. ಎಚ್ಚರ-ಎಚ್ಚರ-ಬಲು ಎಚ್ಚರ!

ಕೋರ್ಟಿನೊಳಗೆ ವಾದಿಯ ಬ್ಯಾರಿಸ್ಟರನಿಂದ ಓದಲ್ಪಟ್ಟ ಆ ಕಾಗದವು ತನಗೇ ಸಂಬಂಧಿಸಿದ್ದೆಂಬದು ಮೊದಮೊದಲು ಹೆನರಿಗೆ ಗೊತ್ತೇ ಆಗಲಿಲ್ಲ. ಯಾಕಂದರೆ ಅವನು ಕಾಯಾವಾಚಾಮನಸ್ಸಿನಿಂದ ಈ ವರೆಗೆ ತನ್ನನ್ನು ಇಂಗ್ರಜ ನೆಂದೇ ತಿಳಿದಿದ್ದನು. ಆ ಪತ್ರಶ್ರವಣದಿಂದ ಹಾಗು ನ್ಯಾಯಾಧೀಶನ ಆ ತೀರ್ಪಿ ನಿಂದ ಹೆನರಿಯು ಒಮ್ಮೆಲೆ ನಿದ್ದೆಯೊಳಗಿಂದ ಬಡಿದು ಎಬ್ಬಿಸಿದಂತಾದನು. ಈ ವರೆಗಿನ ತನ್ನ ಮಿತ್ರರು, ಪರಿಚಿತರು, ಅದೇಕೆ ಆ ಕೋರ್ಟಿನ ಯಃಕಶ್ಚಿತ್ ಶಿಪಾಯಿಯು ಕೂಡ ತನ್ನನ್ನು ತಿರಸ್ಕಾರಪೂರ್ಣದೃಷ್ಟಿಯಿಂದ ನೋಡಹತ್ತಿದ್ದನ್ನು ಕಂಡು ಅವನಿಗೆ ಕಡು ವಿಸ್ಮಯವೆನಿಸಿತು. ಆದರೂ ಅವನು ಒಳ್ಳೇ ಧೈರ್ಯ ದಿಂದ ನ್ಯಾಯಾಧೀಶನನ್ನು ಕುರಿತು:—"ಯಾವನು ಈ ವರೆಗೆ ನನ್ನನ್ನು ತನ್ನ ಹೊಟ್ಟೆಯ ಮಗನಿಗಿಂತಲೂ ಹೆಚ್ಚು ಪ್ರೀತಿಯಿಂದ ಸಾಕಿ ಸಲುಹಿರುವನೋ ಅವನು ಬರೆದಿಟ್ಟ ಈ ಕಾಗದದ ಸಂಗತಿಯನ್ನು ನಾನು ಅಲ್ಲಗಳೆಯುವದಿಲ್ಲ. ಇದನ್ನು ವಿಶ್ವಾಸಪೂರ್ವಕವಾಗಿ ಒಪ್ಪುತ್ತೇನೆ; ಮತ್ತು ಯಾವನ ಪತ್ರದ ಸಂಗತಿ ಯಿಂದ ನಾನು ಇಂಗ್ಲಿಷನಲ್ಲವೆಂದೂ, ಹಿಂದುವೆಂದೂ ಈಗ ಸಿದ್ಧವಾಗಿರು ವದೋ ಆದೇ ಅವನು ತಾನಾಗಿ ನನಗೆ ಕೊಟ್ಟಿರುವ ತನ್ನ ಆಸ್ತಿಯೊಳಗಿನ ಒಂದು ಕಪರ್ದಿಕವನ್ನಾದರೂ ನಾನು ಸ್ವೀಕರಿಸುವದಿಲ್ಲ. ಯಾಕಂದರೆ ಹೆರ ವರ ಆಸ್ತಿಗೆ ಇಲ್ಲದ ಬಾಧ್ಯತೆಯನ್ನು ಹೇಳುವಂತಹ ಕ್ಷುಲ್ಲಕ ಜನಾಂಗದಲ್ಲಿ ನನ್ನ ಜನ್ಮವಾಗಿಲ್ಲವೆಂಬದು ಕೋರ್ಟಿಗೆ ಈಗ ತಾನೇ ಗೊತ್ತಾಗಿರುತ್ತದೆ. ಆದರೂ ನನ್ನ ಬೇಡಿಕೆಯಿಷ್ಟೇ, ಕರ್ನಲ್ಲ ಡಬ್ಲಿನ್ನನು ನನ್ನನ್ನು ಶಿಶುರೂಪದಿಂದ ತಂದಾಗ

ನನ್ನೊಡನೆಯಿದ್ದ ನನ್ನ ಸ್ವತ್ತಿನ ಆಸ್ತಿಯನ್ನೂ ತಂದು ತನ್ನ ಮನೆಯಲ್ಲಿ ನನಗಾಗಿ ಶೇಖರಿಸಿಟ್ಟಿರುತ್ತಾನೆ. ಅದೆಲ್ಲವನ್ನೂ ಕೋರ್ಟಿನವರು ನನಗೆ ಕೊಡಿಸುವದಾಗ ಬೇಕು'' ಎಂದು ಕೇಳಿಕೊಂಡನು.

ವಾದಿಯ ಕಡೆಯ ಬ್ಯಾರಿಸ್ಟರರು ಹೆನರಿಯ ಈ ಬೇಡಿಕೆಗೆ ಹಲವು ಬಗೆ ಯಿಂದ ಅಡ್ಡಿಯನ್ನುಂಟುಮಾಡಿದರು. ಕರ್ನಲ್ಲ ಡಬ್ಲಿನ್ನನು ಹಿಂದುಸ್ತಾನದ ಬಂಡಾಯದ ಕಾಲದಲ್ಲಿ ಬಂಡುಗಾರರನ್ನು ಮುರಿದು ಅಪಹರಿಸಿದ ಹಣವು ಅದಾ ದ್ದರಿಂದ ಅದರ ಮಾಲಕಿಯು ಕರ್ನಲ್ಲ ಡಬ್ಲಿನ್ನನ ನಿಜವಾದ ವಾರಸದಾರರಿಗೇ ಉಂಟಾಗುವದು. ಅದಕ್ಕೆ ಕೋರ್ಟಿನವರು ಒಪ್ಪದಿದ್ದರೆ, ಆ ಆಸ್ತಿಯು ಬ್ರಿಟಿಶ ಸರಕಾರದ್ದೆಂದು ತಿಳಿದು, ಅದನ್ನು ಸರಕಾರೀ ಟ್ರೇಝರಿಗೆ ಸಾಗಿಸಬೇಕು, ಮುಂತಾದ ಹಲವು ಬಗೆಯ ತಕರಾರು ಕೊಟ್ಟರು. ಅದಾವ ಕಾರಣದಿಂದ ಲೋ ತಿಳಿಯದು, ಜಜ್ಜನು ಅವರ ತಕರಾರುಗಳಿಗೆ ಸಮ್ಮತಿಸದೆ, ಆ ಮುತ್ತು ರತ್ನಗಳ ಅಪಾರ ಸಂಪತ್ತನ್ನು ಹೆನರಿಗೇ ಕೊಡಬೇಕೆಂದು ಹುಕುಂ ಮಾಡಿದನು; ಹಾಗು ಆ ಕೂಡಲೆ ಪೋಲೀಸರ ಸಹಾಯದಿಂದ ಕರ್ನಲ್ಲ ಡಬ್ಲಿನ್ನನ ಮನೆಯೊಳ ಗಿನ ಆ ಸಂಪತ್ತನ್ನು ತರಿಸಿ ಹೆನರಿಯು ಸ್ವಾಧೀನಪಡಿಸಿದನು. ಆ ನ್ಯಾಯಾಧೀ ಶನ ಆ ವಿಚಿತ್ರ ನ್ಯಾಯದಾನವನ್ನು ನೋಡಿ ವಾದಿಯ ಪಕ್ಷದವರೆಲ್ಲ ಅದೇಕೆ, ಇಂಗ್ಲಿಷ ಸಮಾಜವೆಲ್ಲ ಬೆರಗಾಯಿತು, ಅಸಮಾಧಾನ ಪಟ್ಟಿತು; ಆದರೆ ಆ ಮುಖ್ಯ ನ್ಯಾಯಾಧೀಶನ ತೀರ್ಪಿನ ವಿರುದ್ಧವಾಗಿ ಯಾರೂ ಪಿಟ್ಟೆಂದು ಮಾತಾ ಡುವಂತಿರಲಿಲ್ಲ. ಇರಲಿ.

ನ್ಯಾಯಾಧೀಶನ ಆ ವಿಚಿತ್ರ ನ್ಯಾಯದಾನದಿಂದ ಹೆನರಿಗೂ ಬಲುತೊಂದರೆ ಯಾಯಿತು. ಅವನು ಆ ಸಂಪತ್ತು ತನಗೆ ಸಿಗಲಾರದೆಂದು ಮನಸ್ಸಿನಲ್ಲಿ ನಿಶ್ಚ ಯಿಸಿಕೊಂಡೇ ಕೋರ್ಟಿಗೆ ಆ ಬಗೆಯ ಪ್ರಶ್ನೆಯನ್ನು ಬೇಕಂತ ಮಾಡಿದ್ದನು; ಆದರೆ ವಿಪರೀತ ನ್ಯಾಯದಾನದಿಂದ ತನ್ನ ಪಕ್ಷಕ್ಕೆ ಆ ಒಂದು ಮಾತಿನ ಬಗ್ಗೆಯಾ ದರೂ ಗೆಲವು ಉಂಟಾಗಿದ್ದರೂ ಅದರಿಂದ ಹೆನರಿಗೆ ಎಳ್ಳಷ್ಟೂ ಸಮಾಧಾನವೆನಿ ಸಲಿಲ್ಲ. ಯಾಕಂದರೆ ಅಲ್ಲಿ ನೆರೆದವರೆಲ್ಲರೂ ಹಿಂದುಜಾತಿಯವನೆಂದು ಹೆನರಿ ಯನ್ನು ಅತ್ಯಂತ ತಿರಸ್ಕರಿಸುತ್ತಿದ್ದರು. ಕೆಲಕ್ಷಣಗಳ ಹಿಂದೆ ಯಾವ ಹೆನರಿ ಯು ಆ ಇಂಗ್ಲಂಡ ದೇಶದಲ್ಲಿ ಒಬ್ಬ ಸನ್ಮಾನ್ಯ ಹಾಗು ಶ್ರೇಷ್ಠ ಅಧಿಕಾರಿ ಯೆಂದು ಗಣ್ಯನಾಗಿದ್ದನೋ, ಅದೇ ಅವನು ಈಗ ಒತ್ತಟ್ಟಿಗೆ ಕಾಲೂರಿ ನಿಲ್ಲ ಲಿಕ್ಕೆ ಕೂಡ ಅಯೋಗ್ಯನಾದ ಮನುಷ್ಯನಾಗಿದ್ದನು!

## ೫ನೆಯ ಪ್ರಕರಣ—ಪ್ರಣಯಿನಿಯ ನಿಸ್ಸೀಮ ಪ್ರೇಮ.

ಈ ವಿಚಿತ್ರ ನ್ಯಾಯದಾನದಿಂದ ಹೆನರಿಡಬ್ಲಿನ್ನನಿಗೆ ಪರಮ ವಿಸ್ಮಯವೆನಿಸಿದರೂ, ಅವನು ಆ ಬಗ್ಗೆ ಹಳಹಳಿಸಲಿಲ್ಲ; ಆದರೆ ಅಲ್ಲಿಯ ಇಂಗ್ಲಿಷ ಸಮಾಜವು ಮಾತ್ರ ಅದರಿಂದ ಹೆಚ್ಚಾಗಿ ರೇಗಿಗೆದ್ದಿತು. ಪಾಶ್ಚಾತ್ಯ ಜನರಲ್ಲಿ ಇಂಗ್ಲಿಷರು ಸಭ್ಯರೂ, ಉದಾರರೂ ಎಂದು ಪ್ರಸಿದ್ಧಿಯಿರುವದು; ಆದರೆ ವರ್ಣದ್ವೇಷವು ಮಾತ್ರ ಆ ಜನರಲ್ಲಿಯ ಸ್ವಭಾವಧರ್ಮವೇ ಆಗಿದೆ! ಇಷ್ಟುದಿನ ಹೆನರಿಗೆ ಅಲ್ಲಿ ಅಸಂಖ್ಯ ಜನ ಮಿತ್ರರಿದ್ದರು; ಪಾಶ್ಚಾತ್ಯ ಸಮಾಜವು ಅವನ ಸಚ್ಚಾರಿತ್ರ್ಯದ ವಿಷಯವಾಗಿ ಆದರವನ್ನು ವ್ಯಕ್ತಗೊಳಿಸುತ್ತಿದ್ದಿತು; ಆದರೆ ಇಂದು ಅವನು ಹಿಂದುವೆಂದು ಪ್ರಸಿದ್ಧವಾದೊಡನೆಯೇ ಅದೇ ಆ ಆಂಗ್ಲಸಮಾಜವು ಅವನನ್ನು ತಿರಸ್ಕರಿಸಲಾರಂಭಿಸಿತು. ಅವನಲ್ಲಿ ಇಲ್ಲದ ದೋಷಾರೋಪಣೆಯನ್ನು ಮಾಡಹತ್ತಿತು. ಇಷ್ಟೇ ಅಲ್ಲ, ಅವನ ದುಃಖದ ಮೇಲೆ ಬರೆಕೊಡುವ ಸಲುವಾಗಿಯೇ ಅನ್ನುವಂತೆ, ಒಬ್ಬ ಸೈನ್ಯದ ಅಧಿಕಾರಿಯು ಅವನೆಡೆಗೆ ಬಂದು:—"ನೀನು ಹಿಂದುವಾಗಿರುವೆಯಾದ್ದರಿಂದ ಬ್ರಿಟಿಶ ಸೈನ್ಯದೊಳಗಿನ ಮೇಜರ ಕೆಲಸದಿಂದ ನಿನ್ನನ್ನು ತೆಗೆದುಹಾಕಿದೆ" ಎಂಬರ್ಥದ ಲೇಖೀ ಹುಕುಮನ್ನು ತಂದು ಅವನಿಗೆ ತೋರಿಸಿದನು! ಅದರಿಂದ ಆತನ ಸ್ಥಿತಿಯು ಅಲ್ಲಿಯ ಸಾಮಾನ್ಯ ಭಿಕ್ಷುಕನಿಗಿಂತಲೂ ಶೋಚನೀಯವಾಯಿತು! ಕಾಲಾಯ ತಸ್ಮೈ ನಮಃ!

ಈ ಸಂಗತಿಯನ್ನೋದಿ, "ಹೆನರಿಯು ಇಷ್ಟು ವಿಪತ್ತಿಗೆ ಗುರಿಯಾಗುವ ಕಾರಣವೇನು? ಅವನಲ್ಲಿ ಬೇಕಾದಷ್ಟು ಬಹುಮೂಲ್ಯ ಸಂಪತ್ತಿತ್ತು. ಹೀಗಿದ್ದಾತನು ಭಿಕ್ಷುಕನಿಗಿಂತ ಕಡೆಯಾಗುವ ಕಾರಣವೇನು?" ಎಂದು ನಮ್ಮ ವಾಚಕರು ಕೇಳಬಹುದು. ಹೆನರಿಯು ಅಂಥ ಇಂಥ ಮನುಷ್ಯನಾಗಿದ್ದರೆ, ಆ ತನ್ನ ಪೂರ್ವಜರ ಆಸ್ತಿಯ ಕೆಲವಂಶವನ್ನು ಆ ಕೂಡಲೆ ಮಾರಿ, ಬೇಕಾದಂತೆ ವರ್ತಿಸಬಹುದಾಗಿದ್ದಿತು; ಆದರೆ ಅವನು ತನ್ನ ಪೂರ್ವಜರ ವಿಷಯವಾಗಿಯೂ, ಅವರ ಸಂಪತ್ತಿನ ವಿಷಯವಾಗಿಯೂ ಅತ್ಯಂತ ಪೂಜ್ಯಭಾವವುಳ್ಳವನಾದುದರಿಂದ, ಆ ಆಸ್ತಿಯ ಒಂದು ಕಣವನ್ನು ಕೂಡ ಕಳೆಯಲಿಕ್ಕೆ ಅವನು ಮನಸ್ಸು ಮಾಡಲಿಲ್ಲ. ತನ್ನ ತಂದೆ-ತಾಯಿಗಳ ದರ್ಶನವು ತನಗೆ ಆಗುವದು ದುರ್ಲಭವಾಗಿದ್ದರೂ, ಅವರು ತನಗೋಸುಗ ಸಂಪಾದಿಸಿಟ್ಟ ಆಸ್ತಿಯನ್ನಾದರೂ ಕಳೆಯದೆ, ಅದೇ ಅವರ ನಿಜವಾದ ಸ್ಮಾರಕವಾಗಿ ಭಾವಿಸಬೇಕೆಂದು ಅವನು ನಿಶ್ಚಯಿಸಿಕೊಂಡನು.

ಹೆನರಿ ಡಬ್ಲಿನ್ನನು ಹುಟ್ಟಾ ಉದಾರಾಂತಃಕರಣಿಯೂ, ಆಶಾವಾದಿಯೂ ಆಗಿದ್ದನು. ಆಯುತ ಪ್ರಸಂಗದಲ್ಲಿ ಧೈರ್ಯಗುಂದಿ, "ಏನು ಮಾಡಲಿ? ಹೇಗೆ ಮಾಡಲಿ?" ಎಂಬ ದಶಾಕ್ಷರೀ ಮಂತ್ರವನ್ನು ಪಠಿಸುತ್ತ ಚಿಂತೆಗೆ ಒಳಗಾಗುವ ಚೇತನೆಯು ಅವನದಾಗಿರಲಿಲ್ಲ. ಈಗ ಬಂದ ವಿಪತ್ತು ಪ್ರಾಣಾಂತ್ಯ ಸಂಕಟ ವೆಂದು ಅವನು ತಿಳಿಯಲಿಲ್ಲ. ದೇವರಲ್ಲಿ ಅವನ ಸಂಪೂರ್ಣ ನಿಷ್ಠೆಯಿದ್ದಿತು. ಆ ದಯಾಮಯ ಭಗವಂತನು ಈ ಕಠಿಣ ಪ್ರಸಂಗದಲ್ಲಿ ತನಗೆ ಯೋಗ್ಯವಾದ ಮಾರ್ಗವನ್ನು ತೋರಿಸುವನೆಂದು ಅವನಿಗೆ ಭರವಸೆಯಿದ್ದಿತು. ಅದರಿಂದ ಕೋರ್ಟಿನಿಂದ ಹೊರಗೆ ಬಂದು ದಾರಿಯಲ್ಲಿ ನಿಂತ ಕೂಡಲೆ, ಮುಂದೇನು ಮಾಡಬೇಕೆಂಬದನ್ನು ನಿಶ್ಚಯಿಸಲಿಕ್ಕೆ ಅವನಿಗೆ ವಿಶೇಷವಾದ ಅವಧಿಯು ಬೇಕಾ ಗಲಿಲ್ಲ. "ಸಾಕಷ್ಟು ಹಣಗಿ ತನ್ನ ಜನ್ಮಭೂಮಿಗೆ-ಭರತಖಂಡಕ್ಕೆ-ಹೋಗಿ, ಆಜನ್ಮ ಆ ತಾಯಿನಾಡಿನ ಸೇವೆಯನ್ನೇ ಕೈಕೊಳ್ಳತಕ್ಕದ್ದೆ"ಂದು ಅವನು ತತ್ಕ್ಷಣವೇ ನಿಶ್ಚಯಿಸಿದನು. ಮಾತೃಭೂಮಿಯು, ಸ್ವದೇಶ ಪ್ರೇಮದ ವಿಚಾರ ಗಳು ಯಾವಾಗ ಆ ಹೆನರಿ ಡಬ್ಲಿನ್ನನ ಮನಸ್ಸಿನಲ್ಲಿ ಮನೆಮಾಡಿಕೊಂಡವೋ, ಆವಾಗ ಆತನ ಅಂತಃಕರಣವೂ, ಹೃದಯವೂ ಸ್ಫುರಣಗೊಂಡವು! ಕಣ್ಣುಗಳಲ್ಲಿ ಆನಂದಾಶ್ರುಗಳು ಮಿನುಗಹತ್ತಿದವು!! ಕೂಡಲೆ ಅವನು ಆ ನಿಸ್ಸೀಮವಾದ ಪ್ರೇಮ ಭರದಲ್ಲಿ "ಬನ್ನೂ" ಎಂಬ ಹೆಸರಿನ ಹಿಂದೀ ನೌಕರನನ್ನು ತನ್ನ ದೇಶ ಬಂಧುವೆಂದು ಬಿಗಿಯಾಗಿ ಅಪ್ಪಿಕೊಂಡನು.

ಈ ಬನ್ನೂ ಎಂಬುವವನಾರೆಂದು ನಮ್ಮ ವಾಚಕರು ಜಿಜ್ಞಾಸೆಪಡು ತ್ತಿರಬಹುದು. ಬನ್ನೂನು ಹಿಂದುಸ್ತಾನದೊಳಗಿನ ಭಿಲ್ಲ ಎಂಬ ಹಿಂದುಳಿದ ಜಾತಿಯವನು. ಅವನು ಶೂರನೂ, ಸಚ್ಚಾರಿತ್ರನೂ, ಧೋರಣಿಯೂ, ವಿಶ್ವಾ ಸುಕನೂ ಆಗಿದ್ದದರಿಂದ ಅವನಿಗೆ ಇಂಗ್ಲಿಷ ದಂಡಿನಲ್ಲಿ ನೌಕರಿ ದೊರಕಿತ್ತು. ಒಮ್ಮೆ ಆತನ ಉತ್ತಮ ಗುಣಗಳು ಹೆನರಿ ಡಬ್ಲಿನ್ನನ ನಿದರ್ಶನಕ್ಕೆ ಬರಲು, ಇವನು ಅವನನ್ನು ತನ್ನ ಖಾಸ ಸೈನಾತಿಗೆ ನೇಮಿಸಿಕೊಂಡನು. ಬನ್ನೂನು ಬಹು ದಿನಗಳಿಂದ ಹೆನರಿಯ ಸಹವಾಸದಲ್ಲಿರಹತ್ತಿದ್ದರಿಂದ, ಅವನು ಹರಕು ಮುರುಕಾದ ಇಂಗ್ಲಿಷ ಭಾಷೆಯನ್ನೂ ಆಡಹತ್ತಿದ್ದನು. ಹೆನರಿಯ ಪ್ರೇಮವು ಅವನ ಮೇಲೆ ವಿಶೇಷವಾಗಿದ್ದದರಿಂದ, ತನ್ನ ಲಗ್ನದ ಕಾಲದಲ್ಲಿ ಆ ತನ್ನ ಪ್ರೀತಿಯ ಸೇವಕನನ್ನು ಹೆನರಿಯು ಬೇಕಂತ ಇಂಗ್ಲಂಡಕ್ಕೆ ಕರೆದೊಯ್ದಿದ್ದನು. ತನ್ನ ಒಡೆಯನ ಮೇಲೆ ಬಂದ ಆ ಆಕಸ್ಮಿಕ ಪ್ರಸಂಗದಿಂದ ಬನ್ನೂನು ಅಂಜಲಿಲ್ಲ.

ಅವನು ಹೆನರಿಗೆ ನಾನಾ ಬಗೆಯಿಂದ ಧೈರ್ಯವನ್ನು ಹೇಳಿದನು.

ಹೆನರಿಯು ಹಿಂದುಸ್ತಾನಕ್ಕೆ ಹೊರಡುವದನ್ನೇನೋ ನಿರ್ಧರಿಸಿದನು; ಆದರೆ ತಮ್ಮಿಬ್ಬರಿಗೂ ಸಾಲುವಷ್ಟು ಪ್ರವಾಸ ಖರ್ಚಿನ ಹಣವು ಅವನಲ್ಲಿರಲಿಲ್ಲ. ಇದ್ದ ಅಲ್ಪ-ಸ್ವಲ್ಪ ಹಣದಲ್ಲಿ ಅವರೀರ್ವರೂ ತಮ್ಮ ಆಸ್ತಿಯೊಡನೆ ಮೊದಲು ಫ್ರಾನ್ಸ ದೇಶಕ್ಕೆ ಬಂದರು. ಆಗ ಫ್ರಾನ್ಸದಲ್ಲಿ ನೆಪೋಲಿಯನ್ನನ ಅರಸೊತ್ತಿಗೆ ಯು ಇರಲಿಲ್ಲ. ಲುಈ ವಂಶದೊಳಗಿನ ಒಬ್ಬನು ರಾಜನಾಗಿದ್ದನು. ಇಂಗ್ಲಂಡದ ಕೃಪೆಯಿಂದಲೇ ಆ ಅರಸೊತ್ತಿಗೆಯು ಅವನಿಗೆ ಲಭಿಸಿದ್ದದರಿಂದ ಅವನು ಪ್ರತಿಯೊಬ್ಬ ಇಂಗ್ರಜನನ್ನು ಹೆಚ್ಚಾಗಿ ಆದರಿಸುತ್ತಿದ್ದನು. ನಮ್ಮ ಹೆನರಿ ಡಬ್ಲಿನ್ನನು ಆ ಫ್ರಾನ್ಸದ ಅರಸನಿಗೆ ಭೆಟ್ಟಿಯಾಗಲು, ಅವನು ಇವನನ್ನು ಒಮ್ಮೆಲೆ ತನ್ನ ದಂಡಿನ ಮೇಜರನನ್ನಾಗಮಾಡಿದನು! ತುಸ ದಿನಗಳಲ್ಲಿಯೇ ಹೆನರಿ ಡಬ್ಲಿನ್ನನು ತನ್ನ ಸುಸ್ವಭಾವದಿಂದಲೂ, ಅಸಾಮಾನ್ಯ ರಣಕೌಶಲ್ಯದಿಂದಲೂ ಆ ಫ್ರಾನ್ಸ ದೇಶದಲ್ಲಿಯೂ ಎಲ್ಲರ ಪ್ರೀತಿಗೆ ಪಾತ್ರನಾದನು. ನೋಡಿದಡಲ್ಲಿ ಅವನ ಹೆಚ್ಚು ಳವೇ ಆಗಹತ್ತಿ, ಎಲ್ಲರೂ ಅವನಲ್ಲಿ ಆದರವನ್ನು ತಾಳಹತ್ತಿದರು. ತುಸ ದಿನಗಳಲ್ಲಿಯೇ ಅಲ್ಲಿಯೂ ಅವನಿಗೆ ಎಷ್ಟೋ ಜನ ಮಿತ್ರರಾದರು. ಅವರೊಡನೆ ಆತನು ಸುಖದಿಂದ ಕಾಲಕ್ರಮಿಸಹತ್ತಿದನು.

ಹೆನರಿಯು ಮಿತ್ರರಲ್ಲಿ ಓರ್ವ ತರುಣ ಶ್ರೀಮಂತ ಕುಲೀನ ಮಿತ್ರನು ಇವನನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದನು. ಅವನ ಸಹವಾಸದಿಂದ ಅವನ ತಂಗಿಯೂ, ತಂದೆ-ತಾಯಿ ಮೊದಲಾದ ಅವರ ಕುಟುಂಬದ ಎಲ್ಲ ಜನರೂ ಹೆನರಿಯನ್ನು ಪ್ರೀತಿಸಹತ್ತಿದರು. ಆದರಿಂದ ಅವರು ಆಗಾಗ್ಗೆ ಹೆನರಿಯನ್ನು ತಮ್ಮ ಮನೆಗೆ ಊಟ-ಉಪಚಾರಕ್ಕಾಗಿ ಕರೆಯುತ್ತಿದ್ದರು. ಕೆಲ ದಿನಗಳು ಈ ಪ್ರಕಾರವಾಗಿ ಸ್ನೇಹಸಂವರ್ಧನದಲ್ಲಿ ಕಳೆಯಲು, ಆ ಕುಟುಂಬದವರಿಗೆ ಹೆನರಿಯ ಹೊರತು ಕರಮಿಸದಾಯಿತು. ಹೆನರಿಯ ಮಿತ್ರನ ಆ ತಂಗಿಯಂತೂ ಇವನ ಸೌಂದರ್ಯ-ಸದ್ಗುಣಗಳಿಗಾಗಿ ಮನಸೋತು ಹೋದಳು. ಆಕೆಯು ಸ್ವತಃ ಒಳ್ಳೇ ಸೌಂದರ್ಯ ಶಾಲಿನಿಯಿದ್ದು, ತನ್ನ ಸುರೂಪದ ಬಗ್ಗೆ ಅವಳಲ್ಲಿ ಒಂದು ಬಗೆಯ ಸೌಮ್ಯವಾದ ಅಭಿಮಾನವೂ ಇದ್ದಿತು; ಆದರೆ ನಮ್ಮ ಹೆನರಿ ಡಬ್ಲಿನ್ನನ ಅಚ್ಚುಳಿಯದ ಸೌಂದರ್ಯ, ನಿಷ್ಕಲಂಕವಾದ ಸದ್ಗುಣಗಳನ್ನು ನೋಡಿ, ಅವಳ ಅಭಿಮಾನವು ತನ್ನಷ್ಟಕ್ಕೆ ತಾನೇ ಕರಗಿ, ಇವನ ವಿಷಯದ ಪ್ರೇಮದಲ್ಲಿ ಲೀನವಾಗಿ ಹೋಯಿತು!

ಆ ಯುವತಿಯು ಸೌಂದರ್ಯ, ಕುಲೀನತೆ ಮುಂತಾದವುಗಳಿಗೆ ಲುಬ

ರಾದ ಎಷ್ಟೋ ಶ್ರೀಮಂತ ತರುಣರು ಅವಳನ್ನು ಲಗ್ನವಾಗುವದಕ್ಕಾಗಿ ಹಾತೊರೆಯುತ್ತಿದ್ದರು; ಆದರೆ ಅವಳು ಹೆನರಿ ಡಬ್ಲಿನ್ನನ ಹೊರತು ತನಗೆ ಬೇರೆ ಯಾರೂ ಗಂಡನಾಗಲು ಯೋಗ್ಯರಿಲ್ಲೆಂದು ತನ್ನ ಮನದ ನಿಶ್ಚಯವನ್ನು ಮಾಡಿಕೊಂಡದ್ದರಿಂದ ಉಳಿದವರನ್ನೆಲ್ಲ ಹೊರಗ್ಗೈಯಿಂದ ದೂರ ಸರಿಸುತ್ತಿದ್ದಳು. ಹೆನರಿಯೂ ಅವಳನ್ನು ಮನವುಟ್ಟಿ ಪ್ರೀತಿಸುತ್ತಿದ್ದನು; ಆದರೆ ಅವನ ಪ್ರೇಮದಲ್ಲಿ ಅವಳನ್ನು ವಿವಾಹವಾಗುವ ಆಶೆಯಿರಲಿಲ್ಲ. ಆಕೆಯು ಸುಶೀಲಳೂ, ಸಚ್ಚರಿತ್ರಳೂ ಎಂಬದರಿಂದಲೇ ಅವನು ಅವಳನ್ನು ಪ್ರೀತಿಸುತ್ತಿದ್ದನು. ಹೆನರಿಯ ಸದಾಚರಣೆಗೆ ಲುಬ್ಧಳಾದ ಆ ತರುಣಿಯು ಒಂದು ದಿನ ತನ್ನ ಅಂತಃಕರಣದ ಗುಟ್ಟನ್ನು ಅವನಿಗೆ ತಿಳಿಸಿದಳು. ಹೆನರಿಯಾದರೂ ಅರಸಿಕನಿರಲಿಲ್ಲ. ಅದರಿಂದ ಅವನೂ ಆ ಮಾತಿಗೆ ಮನಃಪೂರ್ವಕವಾಗಿ ಒಪ್ಪಿದನು. ಹೀಗೆ ಅವರೀರ್ವರಲ್ಲಿ ಕೋರ್ಟಶಿಪ್ ನಡೆಯಲು, ಈ ಸಂಗತಿಯು ಅವಳ ಅಣ್ಣ-ತಂದೆ ಮೊದಲಾದ ಕುಟುಂಬಿಕರಿಗೆ ತಿಳಿಯಿತು. ಆದರಿಂದ ಅವರೆಲ್ಲರಿಗೆ ವಿಷಾದವುಂಟಾಗಲಿಲ್ಲ; ಹೆಚ್ಚಾದ ಸಂತೋಷವೇ ಎನಿಸಿತು. ತನ್ನ ತಂಗಿಯು ತನಗಾಗಿ ಹೆನರಿಯಂಥ ಸತ್ಪಾತ್ರನನ್ನು ಹುಡುಕಿಕೊಂಡದ್ದಕ್ಕಾಗಿ ಆ ಹೆನರಿಯ ಮಿತ್ರನಿಗೆ ಪರಮ ಸೌಭಾಗ್ಯವೇ ಅನಿಸಿತು.

ಅವರೀರ್ವರಲ್ಲಿ ಕೋರ್ಟಶಿಪ್ ಉಂಟಾಗಲು, ವರನ ಕುಲಶೀಲತೆಗಳನ್ನು ನೋಡುವ ಲೋಕಾರೂಢಿಯಂತೆ ಆ ಕುಟುಂಬದವರು ಹೆನರಿಯ ಕುಲಶೀಲಗಳನ್ನು ವಿಚಾರಿಸಿದರು. ತಾನು ಹಿಂದೂ ರಾಜಪುತ್ರನೆಂದೂ, ಈ ದೇಶದಲ್ಲಾಗಲಿ, ಇನ್ನಾವ ಪಾಶ್ಚಾತ್ಯ ದೇಶಗಳಲ್ಲಾಗಲಿ ತನ್ನ ಸ್ವತ್ತಿನ ಆಸ್ತಿಯೇನೂ ಇಲ್ಲೆಂದೂ ಹೆನರಿಯು ಅವರಿಗೆ ತನ್ನ ನಿಜ ಸಂಗತಿಯನ್ನು ತಿಳಿಸಿದನು. ಅದನ್ನು ಕೇಳಿ ಹೆನರಿಯ ಆ ಫ್ರೆಂಚ ಮಿತ್ರನಿಗಾಗಲಿ, ಅವನ ತಂಗಿಗಾಗಲಿ ಹೆನರಿಯ ವಿಷಯವಾಗಿ ಕೊಂಚವೂ ಅನಾದರವಾಗಲಿ, ತಿರಸ್ಕಾರವಾಗಲಿ ಉಂಟಾಗಲಿಲ್ಲ. ಆ ಹುಡುಗಿಯು ಅವನ ಸರಳವರ್ತನದ ಬಗ್ಗೆ ಅವನನ್ನು ಈ ಮೊದಲಿಗಿಂತಲೂ ಹೆಚ್ಚಾಗಿ ಪ್ರೀತಿಸಹತ್ತಿದಳು; ಆದರೆ ಅವನ ಕುಲಚರಿತ್ರವನ್ನು ಕೇಳಿ ಆ ವಧುವಿನ ತಂದೆಯು ಸಿಟ್ಟುಬೆಂಕಿಯಾದನು. ಅವನು ಹೆನರಿಗೆ ಬಾಯಿಗೆ ಬಂದಹಾಗೆ ಬೈಯುತ್ತ ಕ್ರೋಧಕಂಪಿತ ದನಿಯಿಂದ:—"ಮೂರ್ಖಾ, ನೀನು ಜಾತಿಯಿಂದ ಹಿಂದುವಾಗಿದ್ದು, ಫ್ರೆಂಚ ತರುಣಿಯನ್ನು ಲಗ್ನವಾಗ ಬಯಸುವಿಯಾ? ಚಿಗರೆಯು ಸಿಂಹಿಣಿಯನ್ನು ಲಗ್ನವಾಗ ಬಯಸಿದಂತೆಯೇ ಸರಿ!

ಈ ನಿನ್ನ ಇಚ್ಛೆಯು ಈ ಪಾಶ್ಚಾತ್ಯ ರಾಷ್ಟ್ರಗಳಲ್ಲಿ-ಈ ಗೌರ ಜನಾಂಗದಲ್ಲಿ-ಎಂದೂ ಸಫಲವಾಗದು. “ಪ್ರಾಸಾದ ಶಿಖರಸ್ಥೋಽಪಿ ಕಾಕೋ ನ ಗರುಡಾಯತೇ|” ಎಂಬಂತೆ ನೀನು ಎಷ್ಟು ದೊಡ್ಡ ಅವುಲದಾರನಾದರೇನು?-ಎಂಥ ಶ್ರೀಮಂತನಾದರೇನು?-ಎಷ್ಟು ಸುಂದರ-ಸೌಜನ್ಯಯುತನಾದರೇನು? ಪಾಶ್ಚಾತ್ಯ ರಮಣಿಯನ್ನು ವರಿಸುವ ಅಧಿಕಾರವು ನಿನಗೆ ಜನ್ಮ ಜನ್ಮಾಂತರದಲ್ಲೂ ಉಂಟಾಗದು” ಎಂದು ಹೀಯಾಳಿಸಿದನು.

ಆ ವೃದ್ಧ ಫ್ರೆಂಚನು ಹೆನರಿಯನ್ನು ಹೀಗೆ ತಿರಸ್ಕರಿಸಿದನೇನೋ ನಿಜ; ಆದರೆ ಆತನ ಮಗಳು-ಹೆನರಿಯ ವಧುವು-ಇವನನ್ನು ಒಂದಿಷ್ಟು ತಿರಸ್ಕರಿಸಲಿಲ್ಲ. ಅವಳು ತನಗೆ ಇಂಥ ಜಾತಿಯವನೇ, ಇಂಥ ದೇಶದವನೇ ಗಂಡನಾಗಬೇಕೆಂದು ಎಂದೂ ಬಯಸಿರಲಿಲ್ಲ. ತನಗೆ ಹೆನರಿ ಡಬ್ಲಿನ್ನನೇ ಗಂಡನಾಗಬೇಕೆಂದು ಅವಳ ಸಂಪೂರ್ಣವಾದ ಇಚ್ಛೆಯಿದ್ದಿತು. ಆದರಿಂದ ಅವನು ಹಿಂದುವೇ ಆಗಿರಲಿ, ಇಂಗ್ಲಿಷನೇ ಆಗಿರಲಿ ಇಲ್ಲವೆ ಫ್ರೆಂಚನೇ ಆಗಿರಲಿ; ಔದಾರ್ಯ, ಶೌರ್ಯ, ಸದ್ಗುಣ, ಸುರೂಪ, ಸದಾಚಾರಸಂಪನ್ನತೆ ಇವೇ ಅವನ ಜಾತಿಯ ಲಕ್ಷಣಗಳೆಂದು ಅವಳು ತಿಳಕೊಂಡಿದ್ದಳು. ಆದರಿಂದ ಜಾತಿಯಿಂದ ಫ್ರೆಂಚನಾದ ಯಾವನೊಬ್ಬ ಸೆರೆಗುಡುಕ ಇಲ್ಲವೆ ದುಶ್ಶೀಲನನ್ನು ಲಗ್ನವಾಗುವದಕ್ಕಿಂತ, ಪರಜಾತಿಯವನೂ, ಪರದೇಶದವನೂ ಆದರೂ ಚಿಂತೆಯಿಲ್ಲ; ಸಚ್ಛೀಲ-ಸದಾಚಾರ ಸಂಪನ್ನನಾದ ಗಂಡನು ತನಗೆ ದೊರೆತರೆ ಸಾಕೆಂದು ತಿಳಿದೇ ಅವಳು ಹೆನರಿಯನ್ನು ಲಗ್ನವಾಗ ಬಯಸಿದ್ದಳು. ತಂಗಿಯ ಮತದಂತೆಯೇ ಮತವಿದ್ದ ಆಕೆಯ ಅಣ್ಣನು ತನ್ನ ತಂದೆಯ ದುರಾಗ್ರಹವನ್ನು ಕಡಿಮೆ ಮಾಡಲಿಕ್ಕೆ ಪ್ರಯತ್ನಿಸಿದನು; ಆದರೆ ಆ ಕಟ್ಟಾ ಪುರಾಣಮತವಾದಿಯು-ಕೇವಲ ವರ್ಣದ್ವೇಷಿಯು-ಅದಕ್ಕೆ ಸಮ್ಮತಿಸಲಿಲ್ಲ. ಇಷ್ಟೇ ಅಲ್ಲ, ಅಂದಿನಿಂದ ಹೆನರಿಯು ತನ್ನ ಮನೆಗೆ ಬರದಂತೆಯೂ, ತನ್ನ ಮಗಳು ಅವನ ಕೂಡ ಹೋಗದಂತೆಯೂ ಕಟ್ಟುಮಾಡಿದನು!

ಆ ವೃದ್ಧನ ಆ ಆಚರಣೆಯಿಂದ ಅವರೀರ್ವರಲ್ಲಿಯೂ ಉದ್ವಿಗ್ನತೆಯುಂಟಾಯಿತು. ಅವರು ಪರಸ್ಪರರನ್ನು ಮೊದಲಿನಂತೆಯೇ ಪ್ರೀತಿಸುತ್ತಿದ್ದರೂ, ದರ್ಶನ, ಸಹವಾಸಗಳ ಅಭಾವದ ಮೂಲಕ ಅವರಿಗೆ ತಮ್ಮ ಜೀವನವು ಹೇಯವೆನಿಸಿತು. ಕಡೆಗೆ ಒಂದು ದಿನ ಆ ತರುಣಿಯು ತನ್ನ ಅಣ್ಣನ ಮುಖಾಂತರ ಹೆನರಿಗೆ ಒಂದು ಪ್ರಣಯಪತ್ರಿಕೆಯನ್ನು ಕಳಿಸಿ, ನಾನು ನಿನ್ನೊಡನೆ ಗುಪ್ತವಿವಾಹವಾಗಲಿಕ್ಕೆ ಸಿದ್ಧಳಿದ್ದೇನೆಂದು ಸಹ ತಿಳಿಸಿದಳು. “ಇಂಥ ಕಳವಿನ ಉದ್ಯೋ

ಗವು ಪ್ರಾಣ ಹೋದರೂ ಈ ಹೆನರಿಯಿಂದ ಆಗದು'' ಎಂದು ಅವನೂ ಸ್ಪಷ್ಟ ವಾಗಿ ತಿಳಿಸಿದನು. ಅದರಿಂದ ಆ ತರುಣಿಯ ಪ್ರಕೃತಿಯ ಮೇಲೆ ದುಷ್ಪರಿಣಾಮವಾಗಿ ಅವಳು ಸೊರಗಿ ಸೊರಗಿ ಸಾಯಲಾದಳು! ಆದರೂ ಆ ಕಠೋರ ಮುದುಕನ ಮನಸ್ಸು ತಿರುಗಲಿಲ್ಲ. ಇನ್ನು ಹೀಗೆಯೇ ಬಿಟ್ಟರೆ ಇವರೀರ್ವರೂ ಎಲ್ಲಿಯಾದರೂ ಓಡಿಹೋದಾರೆಂಬ ಸಂಶಯದಿಂದ ಆ ಮುದುಕನು ತನ್ನ ಮಗಳನ್ನು ಇಂಗ್ಲಂಡಕ್ಕೆ ಕರೆದೊಯ್ದು ಅಲ್ಲಿಯೇ ವಾಸಿಸಹತ್ತಿದನು.

ಆ ತರುಣಿಯ ಅನುಪಮೇಯ ಸೌಂದರ್ಯಕ್ಕೆ ಲುಬ್ಧರಾದ ಇಂಗ್ಲಿಷ ತರುಣರನೇಕರು ಅವಳೊಡನೆ ಕೋರ್ಟಶಿಪ್ ಮಾಡಲೆತ್ನಿಸಿದರು; ಆದರೆ ಆ ಸದ್ಗುಣಶಾಲಿನಿಯು ಈ ಮೊದಲೇ ತನ್ನ ಅಂತಃಕರಣವನ್ನು ನಮ್ಮ ಹೆನರಿ ಡಬ್ಲಿನ್ನನಿಗೆ ಒಪ್ಪಿಸಿದ್ದರಿಂದ, ಅವಳು ಬೇರೆ ಯಾವನೊಡನೆಯೂ ಪಿಟ್ಟೆಂದು ಮಾತಾಡುತ್ತಿರಲಿಲ್ಲ; ಇಷ್ಟೇ ಅಲ್ಲ, ಅವಳು ಇಂಗ್ಲಂಡದೊಳಗಿನ ತಮ್ಮ ಮನೆಯೊಳಗಿನ ತನ್ನ ಕೋಣೆ ಬಿಟ್ಟು ಹೊರಗೆ ಹೊರಡುತ್ತಲೇ ಇರಲಿಲ್ಲ. ಮಗಳ ಈ ವರ್ತನವು ಅವಳ ತಂದೆಗೆ ಸೇರದ್ದರಿಂದ ಅವನು ಅಲ್ಲಿಯ ಒಬ್ಬ ಶ್ರೀಮಂತ ತರುಣನೊಡನೆ ಅವಳ ವಿವಾಹ ಕಾರ್ಯವನ್ನು ನಿಶ್ಚಯಿಸಿದನು. ವಿವಾಹದ ನಿಶ್ಚಿತ ವೇಳೆಯು ಪ್ರಾಪ್ತವಾಗುತ್ತಲೆ, ವಧುವಿಗೆ ವಿವಾಹದ ಉಡುಪು ತೊಡಪುಗಳನ್ನು ಧರಿಸಲಿಕ್ಕೆ ಪ್ರಾರಂಭಿಸಿದರು. ಅಮೂಲ್ಯವಾದ ರತ್ನಾಲಂಕಾರಗಳೂ, ರೇಶಿಮೆಯ ಬಹು ಬೆಲೆಯುಳ್ಳ ಲುಂಗಾ-ಪೋಲಕಾಗಳೂ ಆ ತರುಣಿಯ ಕೋಣೆಯನ್ನು ಪ್ರವೇಶಿಸಿದವು. ಆ ಹುಡುಗಿಯ ತಾಯಿಯು ಬಂದು ಇನ್ನು ಅವಳಿಗೆ ಅವನ್ನೆಲ್ಲ ಧರಿಸತಕ್ಕವಳು; ಅಷ್ಟರಲ್ಲಿ ಅಲ್ಲಿಯೊಂದು ಹೃದಯವಿದಾರಕ ಪ್ರಸಂಗವು ಘಟಿಸಿತು! ಆ ತರುಣಿಯು ಕೋಣೆಯೊಳಗಿನ ರತ್ನಗಂಬಳಿಯ ಮೇಲೆ ಬಿದ್ದುಕೊಂಡಿದ್ದು, ಇವಳು ಫ್ರಾನ್ಸದಲ್ಲಿದ್ದಾಗ ಹೆನರಿ ಡಬ್ಲಿನ್ನನು ಇವಳಿಗೆ ಬರೆದಿದ್ದ ಪ್ರಣಯ ಪತ್ರಿಕೆಯು ಅವಳ ಹೃದಯದ ಮೇಲೆ ಇತ್ತು. ಆ ರಮಣಿಯ ಪ್ರಾಣೋತ್ಕ್ರಮಣವಾಗಿ ಎಷ್ಟು ಹೊತ್ತಾಗಿತ್ತೋ ಯಾರು ಬಲ್ಲರು?

ಆ ದೃಶ್ಯವನ್ನು ಕಂಡ ಆ ಮನೆಯವರೆಲ್ಲರೂ ಆ ಕಠೋರ ವೃದ್ಧನನ್ನು ಬಾಯಿಗೆ ಬಂದಂತೆ ಅಂದರು; ಹಾಡಿ-ಹಾಡಿ ಅತ್ತರು; ಆದರೆ ಅದರಿಂದಾಗುವ ಪ್ರಯೋಜನವೇನು? ಈ ಪ್ರಸಂಗದಿಂದ ನಮ್ಮ ಹೆನರಿ ಡಬ್ಲಿನ್ನನ ಆಶಾಂಕುರವು ಮಾತ್ರ ಒಮ್ಮೆಲೆ ಸುಟ್ಟು ಸೂರೆಯಾಯಿತು!

## ೭ನೆಯ ಪ್ರಕರಣ—ತಾಯಿನಾಡಿನ ದರ್ಶನ.

ತನ್ನನ್ನುಳಿದು ಅನ್ಯರ ಕೂಡ ವಿವಾಹವಾಗಲೊಪ್ಪದ ಆ ಫ್ರೆಂಚ ತರುಣಿಯ ನಿಸ್ಸೀಮ ಪ್ರೇಮದಿಂದ ಲುಬ್ಧನಾದ ಹೆನರಿ ಡಬ್ಲಿನ್ನನು ಅವಳ ನಿಧನ ವಾರ್ತೆಯನ್ನು ಕೇಳಿ ಬಹಳವಾಗಿ ದುಃಖಿಸಿದನು. ತನ್ನ ಚಿಂತನದಲ್ಲಿಯೇ ಅವಳಿಗೆ ಮರಣ ವುಂಟಾದುದನ್ನು ಕೇಳಿ, ಅವನ ತಲೆಗೆ ಸಿಡಿಲು ಬಡಿದಂತಾಯ್ತು. ಹೆನರಿಯು ಶೂರನೂ, ವೀರನೂ, ಧೈರ್ಯಶಾಲಿಯೂ, ಪ್ರಸಂಗಕ್ಕೆ ಎದೆಕೊಡುವವನೂ ಆಗಿದ್ದರೂ, ಈ ಪ್ರಸಂಗದಲ್ಲಿ ಅವನು ಕೇವಲ ಹತವೀರ್ಯನಾಗಿ, ಸಣ್ಣ ಮಕ್ಕಳಂತೆ ಕಣ್ಣೀರು ಹಾಕಹತ್ತಿದನು. ಅವನು ತೀರ ನಿರುತ್ಸಾಹಿಯಾದನು. ಎಲ್ಲೆಲ್ಲಿಯೂ ಅವನಿಗೆ ಉದಾಸೀನತೆಯೇ ವ್ಯಕ್ತವಾಗತೊಡಗಿತು. ಈ ಸ್ಥಿತ್ಯಂತರದಿಂದ ಹೆನರಿಯು ಬೇಗನೆ ಬೇನೆಬಿದ್ದು ಹಾಸಿಗೆ ಹಿಡಿದನು. ಈ ಬೇನೆಯಿಂದ ತನ್ನ ಒಡೆಯನು ಏಳುವದಿಲ್ಲೆಂದು ಬನ್ಸನ ಖಾತ್ರಿಯಾಯಿತು; ಆದರೆ ಎರಡು ಮೂರು ತಿಂಗಳ ನಂತರ ಬನ್ಸನ ಶುಶ್ರೂಷೆಯಿಂದಲೂ, ದಯಾಘನ ಪರಮೇಶ್ವರನ ಕೃಪೆಯಿಂದಲೂ ಹೆನರಿಯ ವ್ಯಾಧಿಯು ಹಿಮ್ಮೆಟ್ಟಿತು. ಆಗ ಅವನಿಗೆ ತನ್ನ ಈ ವರೆಗಿನ ಆಯುಷ್ಯದೊಳಗಿನ ಒಂದೊಂದೇ ವಿಷದ್ರೂಪ ಸಂಗತಿಗಳ ನೆನವಾಗಹತ್ತಿತು. ತಾನು ಕೇವಲ ಬಾಲ್ಯಾವಸ್ಥೆಯಲ್ಲಿದ್ದಾಗಿನ ಆ ಬಂಡಿಗಳ ಮೇಲಿನ ಹೃದಯದ್ರಾವಕ ಸ್ಥಿತಿ, ತನ್ನನ್ನು ಹೊಟ್ಟೆಯ ಮಕ್ಕಳಿಗಿಂತ ಹೆಚ್ಚು ಪ್ರೀತಿಯಿಂದ ಸಾಕಿ ಸಲುಹಿದ ಆ ಮಹಾತ್ಮರಾದ ಕರ್ನಲ್ ಡಬ್ಲಿನ್-ಲೇಡೀ ಡಬ್ಲಿನ್ನರ ಕಾಲದ ಸ್ಥಿತಿ, ಅವರ ತರುವಾಯ ತನ್ನೊಡನೆ ಲಗ್ನವಾಗಬೇಕೆಂದಿದ್ದ ಆ ಡಬ್ಲಿನ್ನ ಮನೆತನದ ಆ ಅಸಭ್ಯ ಹಾಗು ದುಶ್ಶೀಲ ತರುಣಿಯ ಸ್ಥಿತಿ, ಇಂಗ್ಲಿಷ ಕೋರ್ಟಿನ ವಿಚಿತ್ರ ನ್ಯಾಯದಾನದ ಸ್ಥಿತಿ, ಇಂಗ್ಲಿಷ ಜನಾಂಗದ ನಭೂತಪೂರ್ವ ವರ್ಣದ್ವೇಷದ ಆಚರಣೆ, ಫ್ರೆಂಚ ತರುಣಿಯ ಸಚ್ಛೀಲ-ಸದ್ವರ್ತನ, ಅವಳ ತಂದೆಯ ಕಠೋರ ವರ್ತನ-ವರ್ಣದ್ವೇಷ ಮುಂತಾದವುಗಳೆಲ್ಲವೂ ನೆನಪಿಗೆ ಬಂದು ತನ್ನ ಜೀವನವು ಸರ್ವಸಾಮಾನ್ಯವಾಗಿರದೆ, ಒಂದು ವಿಶೇಷ ತರದ ತೊಡಕುಗಳಿಂದ ತುಂಬಿದೆಯೆಂಬದು ಆ ಹೆನರಿಗೆ ಅನಿಸಿತು.

ದೈವವಶಾತ್ ಹೆನರಿಯ ಲಗ್ನವು ಆ ಫ್ರೆಂಚ ತರುಣಿಯೊಡನೆ ಆಗಿದ್ದರೆ, ಅವನು ಈ ಮೊದಲು ಇಂಗ್ಲಂಡದ ಕೋರ್ಟಿನೆದುರಿಗೆ ಮಾಡಿದ ತನ್ನ ನಿಶ್ಚಯವನ್ನು ಸಡಲಿಸಿ, ತನ್ನ ಮಾತೃಭೂಮಿಗೆ ಬರುವದನ್ನು ಬಿಟ್ಟು, ಅಲ್ಲಿಯೇ ಸುಖ

ದಿಂದ ಕಾಲಹರಣ ಮಾಡುತ್ತಿದ್ದನು; ಆದರೆ ಅವನ ಭವಿತವ್ಯದಲ್ಲಿ ಹಾಗಿರದ್ದರಿಂದಲೇ, ಭರತಖಂಡಕ್ಕೆ-ನಮ್ಮ ತಾಯಿನಾಡಿಗೆ ಹೆನರಿಯಂಥ ತನ್ನ ಸುಪುತ್ರನು ಪರದಾಸ್ಯದಲ್ಲಿ ತೊಳಲುವದು ಅಸಮ್ಮತವಾದ್ದರಿಂದಲೇ ಹೆನರಿಯೊಡನೆ ಆ ಫ್ರೆಂಚ ರಮಣಿಯು ವಿವಾಹವಾಗಲಿಲ್ಲ. ಇರಲಿ.

ಹೆನರಿಯು ಬೇನೆಯಿಂದೆದ್ದು ತುಸ ನೆಟ್ಟಗಾದ ಬಳಿಕ ಮುಂದೇನು ಮಾಡಬೇಕೆಂದು ಅವನು ತನ್ನ ದೇಶಬಂಧುವಾದ ಬನ್ಸೂನಿಗೇ ಕೇಳಿದನು. ತನ್ನ ಫ್ರೆಂಚ ಗೆಳೆಯರೆದುರಿಗೆ ಈ ಪ್ರಶ್ನೆ ತೆಗೆಯಬೇಕೆಂದು ಮೊದ ಮೊದಲು ಹೆನರಿಯ ವಿಚಾರವಿದ್ದಿತು; ಆದರೆ ಯಾವ ಸಮಾಜವು ಹಿಂದುವೆಂದು ತನ್ನನ್ನು ತುಚ್ಛೀಕರಿಸುವದೋ, ಆ ಸಮಾಜದೆದುರಿಗೆ ತನ್ನ ಹಿತಾಹಿತಗಳ ಪ್ರಶ್ನೆ ಇಡುವದೆಂದರೆ ನಗುವವನೆದುರಿಗೆ ಎಡವಿದಂತೆಯೇ ಸರಿಯೆಂದು ತಿಳಿದು, ಹೆನರಿಯು ಆ ಪ್ರಶ್ನೆಯನ್ನು ಬನ್ಸೂನಿಗೇ ಮಾಡಿದನು. ಬನ್ಸೂನು ಯಾವನೊಬ್ಬ ದೊಡ್ಡ ಪಂಡಿತನಾಗಿದ್ದಿಲ್ಲ. ಅವನು ಅಶಿಕ್ಷಿತ ಹಿಂದುವು. ಅದರಿಂದ ಅವನು ತನ್ನ ಅಸ್ಖಲಿತ ವಾಕ್ಪಟುತ್ವದಿಂದ ಹೆನರಿಯನ್ನು ಸಮಾಧಾನಪಡಿಸುವ ಸಂಭವವಿರಲಿಲ್ಲ. ಆದರೂ ಅವನು ತನ್ನ ಅಸಂಬದ್ಧ ವಾಕ್‌ಸರಣಿಯಿಂದಲೇ:—"ಒಡೆಯರೇ, ನಡಿಯಿರಿ ನಮ್ಮ ತಾಯಿನಾಡಿಗೆ. .ಆಕೆಯು ತನ್ನ ಕಂದಮ್ಮಗಳಿಗೆ ಹೊಟ್ಟೆ ತುಂಬ ಅನ್ನ, ವ್ಯೆಯು ತುಂಬ ಅರಿವೆ ಕೊಡಲಾರದಷ್ಟು ಅಸಮರ್ಥಳಾಗಿರುವಳೇನು?" ಎಂದು ಹೇಳಿ ಹೆನರಿಯನ್ನು ಸಮಾಧಾನಪಡಿಸಿದನು.

ಈ ವರೆಗೆ ಹೆನರಿಯು ಫ್ರೆಂಚ ದಂಡಿನಲ್ಲಿ ಮೇಜರನಾಗಿದ್ದದರಿಂದ, ಅವನಲ್ಲಿ ಸಾಕಷ್ಟು ದುಡ್ಡಿನ ಸಂಗ್ರಹವಾಗಿತ್ತು. ಕೂಡಲೆ ಅವನು ತನ್ನ ಎಲ್ಲ ಸಾಮಾನುಗಳನ್ನು ಸಜ್ಜುಪಡಿಸಿಕೊಂಡು, ಕೆಲಸಕ್ಕೆ ರಾಜೀನಾಮೆ ಬರೆದು, ಬನ್ಸೂನೊಡನೆ ಹಿಂದುಸ್ತಾನಕ್ಕೆ ಹೊರಡುವ ಹಡಗವನ್ನೇರಿದನು. ಹಡಗವು ಹೊರಟ ಕೂಡಲೆ ಹೆನರಿಯು ಆ ಪಾಶ್ಚಾತ್ಯ ದೇಶಗಳಿಗೆ ಒಮ್ಮೆ ಕಡೆಯ ನಮಸ್ಕಾರವನ್ನು ಮಾಡಿ ಹೊರಟನು. ಮುಂದೆ ಕೆಲ ದಿನಗಳ ತರುವಾಯ ಅವರ ಹಡಗವು ಇರಾಣದ ಆಖಾತಕ್ಕೆ ಬರಲು, ತಾನು ಕೆಲ ದಿನಗಳ ವರೆಗೆ ಇರಾಣದ ಅರಸನಲ್ಲಿದ್ದು, ಬಳಿಕ ಸ್ವದೇಶಕ್ಕೆ ಹೋಗಬೇಕೆಂದು ಹೆನರಿಗೆ ಅನಿಸಿತು; ಆದರೆ ಸುಖ-ಸಂಪತ್ತಿಗಿಂತಲೂ ತಾಯಿನಾಡಿನ ಹಂಬಲವೇ ಅವನಿಗೆ ಹೆಚ್ಚಾದ್ದರಿಂದ, ಅವನು ಆ ತನ್ನ ವಿಚಾರವನ್ನು ಬಿಟ್ಟು, ಸ್ವದೇಶದ ಕಡೆಗೇ ನಡೆದನು. ಮತ್ತೆ ಕೆಲ ದಿನಗಳ ತರುವಾಯ ಅವರ ಹಡಗವು ಆಗಿನ ಕಾಲದ ಹಿಂದುಸ್ತಾನದ

ಪ್ರಸಿದ್ಧ ಬಂದರವಾದ ಸುರತಪಟ್ಟಣಕ್ಕೆ ಬಂದು ತಲುಪಿತು. ಹೆನರಿ ಡಬ್ಲಿನ್ನನು ಹಡಗದಿಂದಿಳಿದವನೇ ತನ್ನ ತಾಯಿನಾಡಿನ ಮೃತ್ತಿಕೆಯನ್ನು ಹಣೆಗೆ ಹಚ್ಚಿಕೊಂಡು, ತಾಯಿನಾಡಿಗೊಂದು ಸಾಷ್ಟಾಂಗ ನಮಸ್ಕಾರವನ್ನು ಹಾಕಿ, ಕೆಲ ಆನಂದಾಶ್ರುಗಳನ್ನು ಆಕೆಯ ಮೇಲೆ ಸುರಿಸಿದನು. ಎಲೈ ಸ್ವರ್ಗಾದಪಿಗರೀಯಸಿಯಾದ ತಾಯಿನಾಡೇ, ಯಾವನೊಬ್ಬ ಕೃತಘ್ನ ಶಿಖಾಮಣಿಯು ನಿನಗರ್ಪಿಸಿದ ಮುತ್ತಿಗಿಂತಲೂ, ನಿನ್ನ ಬಗ್ಗೆ ಅತ್ಯಂತ ಕೃತಜ್ಞನಾದ ಹೆನರಿಯು ಅರ್ಪಿಸಿದ ಆ ಅಶ್ರುಬಿಂದುಗಳು ನಿನಗೆ ಹೆಚ್ಚು ರುಚಿಸಿರಬಹುದಲ್ಲವೆ?

---

## ೭ನೆಯ ಪ್ರಕರಣ:—ಲಾಹೋರದ ಮಾರ್ಗದಲ್ಲಿ.

ಮಾತೃಪ್ರೇಮದಿಂದ ಹೊರಚೆಲ್ಲಿದ ಹೆನರಿ ಡಬ್ಲಿನ್ನನ ಹೃದಯವು ಆ ಅಶ್ರುವರ್ಷಣದಿಂದ ತುಸ ಹಗುರಾದ ನಂತರ, ಇಲ್ಲಿ ಮುಂದೆ ಏನು ಮಾಡಬೇಕು? ಯಾವ ವೃತ್ತಿಯಿಂದ ಉಪಜೀವಿಸಬೇಕು? ಮುಂತಾದ ವಿಚಾರಗಳು ಅವನ ಮುಂದೆ ದೊತ್ತೆಂದು ಬಂದು ನಿಲ್ಲಲು, ಅವನು ತುಸ ಚಿಂತಾಕ್ರಾಂತನಾದನು. ಹೆನರಿಯು ಫ್ರಾನ್ಸದೇಶದಲ್ಲಿ ವಿಪುಲವಾಗಿ ಧನವನ್ನು ಸಂಪಾದಿಸಿದ್ದನು. ಆ ದುಡ್ಡಿನಿಂದ ಅವನು ಹಿಂದುಸ್ತಾನದಲ್ಲಿ ಕೆಲ ವರ್ಷಗಳನ್ನು ಸುಖವಾಗಿ ಕಳೆಯಬಹುದಾಗಿದ್ದಿತು; ಆದರೆ ನಿರುದ್ಯೋಗತನದಲ್ಲಿ ಕಾಲಕಳೆಯುವದು ಅವನಿಗೆ ರುಚಿಸುತ್ತಿರಲಿಲ್ಲ. ಆ ಕಂಪನಿ ಸರಕಾರದ ಕಾಲಕ್ಕೆ ಕೆಲ ಯುರೋಪಿಯನ್ನರು ಈ ದೇಶಕ್ಕೆ ಬಂದು ಹೇಗೆ ಕೆಲವು ವ್ಯಾಪಾರೀ ವಖಾರುಗಳನ್ನಿಟ್ಟಿದ್ದರೋ, ಹಾಗೆಯೇ ತಾನೂ ಒಂದು ವಖಾರನ್ನಿಡಬೇಕೆಂದು ಹೆನರಿಗೂ ಒಮ್ಮೆ ಅನಿಸಿತು; ಆದರೆ ಅದು ಅವನ ಮನಸ್ಸಿಗೆ ಒಪ್ಪದ ಮಾತಾಗಿತ್ತು. ಯಾಕಂದರೆ ಹುಟ್ಟಾ ಅವನು ಕ್ಷತ್ರಿಯ ವೃತ್ತಿಯವನು. ವಾಣಿಜ್ಯ ವೃತ್ತಿಯು ಅವನಿಗೆ ಗೊತ್ತೇ ಇರಲಿಲ್ಲ. ಮೇಲಾಗಿ ವ್ಯಾಪಾರ-ಉದ್ದಿಮೆಗಳಲ್ಲಿ ಸತ್ಯಕ್ಕಿಂತ ಅಸತ್ಯವೇ ಹೆಚ್ಚು ಚಲನೆಯಲ್ಲಿರುತ್ತದಾದ್ದರಿಂದ ಆ ವೃತ್ತಿಯು ತನಗೆ ಯೋಗ್ಯವಲ್ಲೆಂದು ಹೆನರಿಯು ನಿರ್ಧರಿಸಿದನು. ತಾನು ಯಾವನೊಬ್ಬ ಜಮೀನದಾರ ಇಲ್ಲವೆ ಸಾಮಾನ್ಯ ಸಂಸ್ಥಾನಿಕನ ನೌಕರಿ ಮಾಡುವದಕ್ಕಿಂತ ಈ ಹಿಂದುಸ್ತಾನದೊಳಗಿನ ಬಲಿಷ್ಠ ಮಹಾರಾಜನ ದಂಡಿನಲ್ಲಿ ಸೇರಬೇಕೆಂದು ಅಂದುಕೊಂಡನು.

ಇನ್ನು ಅವನು ಈ ದೇಶದೊಳಗಿನ ಇಂಗ್ಲಿಷ ಕಂಪನಿ ಸರಕಾರದ ಕಡೆಗೆ ಇಲ್ಲವೆ ಫ್ರೆಂಚ ಸರಕಾರದ ಕಡೆಗೆ ಹೋಗಿದ್ದರೆ ಅವನಿಗೆ ಉಚ್ಚದರ್ಜೆಯ ನೌಕರಿಯು ಹಾ ಹಾ ಅನ್ನುವಷ್ಟರಲ್ಲಿ ಸಿಗಬಹುದಾಗಿತ್ತು; ಆದರೆ ಆ ಅಸಚ್ಚರಿತ್ರ ಹಾಗು ಬಿಳಿ-ಕರೀಜನರಲ್ಲಿ ಭೇದವನ್ನೆಣಿಸುವ ವರ್ಣದ್ವೇಷಿಗಳಲ್ಲಿ ಪ್ರಾಣಹೋದರೂ ನೌಕರಿ ಮಾಡಲಿಕ್ಕಿಲ್ಲೆಂದು ಅವನು ಈ ಮೊದಲೇ ಪಣತೊಟ್ಟಿದ್ದರಿಂದ ಆ ಗೋಜಿಗೆ ಹೋಗಲಿಲ್ಲ. ಆದರಿಂದ ಅವನು ಈ ದೇಶದೊಳಗಿನ ಎಲ್ಲ ದೇಶೀ ರಾಜರ ಯೋಗ್ಯತೆಯನ್ನು ಕುರಿತು ತನ್ನ ಮನಸ್ಸಿನಲ್ಲಿಯೇ ಆಲೋಚಿಸತೊಡಗಿ ದನು. ಅವನು ಈ ಮೊದಲು ಎಷ್ಟೋ ದಿನಗಳ ವರೆಗೆ ಈ ಹಿಂದುಸ್ತಾನದಲ್ಲಿ ಬ್ರಿಟಿಶ ದಂಡಿನ ಮುಖ್ಯಸ್ಥನಾಗಿ ಕೆಲಸ ಮಾಡಿದ್ದರಿಂದ ಅವನಿಗೆ ಇಲ್ಲಿಯ ಎಲ್ಲ ರಾಜರ ಅಳವೂ ತಕ್ಕಮಟ್ಟಿಗೆ ಗೊತ್ತಾಗಿತ್ತು.

ದೀರ್ಘವಿಚಾರದ ನಂತರ ಬಹುತರ ಎಲ್ಲ ರಾಜರೂ ತನ್ನನ್ನು ನೌಕರಿ ಯಿಟ್ಟುಕೊಳ್ಳಲಿಕ್ಕೆ ಅಯೋಗ್ಯರೆಂದೇ ಅವನ ತಿಳುವಳಿಕೆಯಾಯಿತು. ಇನ್ನು ಇಲ್ಲಿ ನೌಕರಿ ಮಾಡಿದರೆ ರಣಜಿತ್‌ಸಿಂಹನಲ್ಲಿಯೇ ಮಾಡಬೇಕೆಂದು ಅವನು ನಿಶ್ಚ ಯಿಸಿದನು. ಆಗ ಪಂಜಾಬದಲ್ಲಿ ಸುಪ್ರಸಿದ್ಧ ರಣಜಿತಸಿಂಹನು ರಾಜ್ಯವಾಳು ತ್ತಿದ್ದು, ಅವನು ತನ್ನ ಮಿಗಿಲಾದ ಪರಾಕ್ರಮದಿಂದ ಪಂಜಾಬದ ಸಿಂಹನೆಂದೆನಿಸಿ ಕೊಂಡಿದ್ದನು. ಅವನಿಗೆ ಪಾಶ್ಚಾತ್ ಪದ್ಧತಿಯ ದಂಡಿನ ಶಿಸ್ತು ಸೇರುತ್ತಿತ್ತು. ಅಂತೇ ಅವನು ಈ ಮೊದಲೇ ತನ್ನ ದಂಡಿನಲ್ಲಿ ಕೆಲ ಜನ ಬ್ರಿಟಿಶ ಹಾಗು ಫ್ರೆಂಚ ಸೇನಾಪತಿಗಳನ್ನಿಟ್ಟುಕೊಂಡಿದ್ದನು. ರಣಜಿತಸಿಂಹನು ಅತ್ಯಂತ ಗುಣಗ್ರಾಹಕ ನಾಗಿದ್ದು, ರಣವೀರನೂ, ಸಾಹಸಿಯೂ, ಮುತ್ಸದ್ದಿಯೂ ಆಗಿದ್ದನು. ಅದ ರಿಂದ ಬೇಕಾದ ಜಾತಿಯ ಬೇಕಾದ ದೇಶದ ರಣಪಂಡಿತರು ತನ್ನಲ್ಲಿಗೆ ಬಂದರೂ, ಅವರಿಗೆ ಆಶ್ರಯವನ್ನಿತ್ತು ಒಂದಿಷ್ಟೂ ಭೇದಭಾವವಿಲ್ಲದಂತೆ ಅವ ರನ್ನು ನಡಿಸಿಕೊಳ್ಳುತ್ತಿದ್ದನು. ಆದರಿಂದ ಅವನಲ್ಲಿಯೇ ಹೋಗಬೇಕೆಂದು ಡಬ್ಲಿನ್ನನು ನಿಶ್ಚಯಿಸಿ, ಈ ತನ್ನ ವಿಚಾರವು ಬನ್ನೂನಿಗೆ ರುಚಿಸುವದೋ ಇಲ್ಲವೋ ಎಂಬದನ್ನು ತಿಳಿಯುವದಕ್ಕಾಗಿ ಅವನಿಗೆ ತಿಳಿಸಿದನು.

ಕೇವಲ ಸರಳ ಪ್ರಕೃತಿಯ ಹಾಗು ಸ್ವಾಮಿಭಕ್ತ ಬನ್ನೂನಿಗೆ ತನ್ನ ಯಜ ಮಾನನ ಆ ವಿಚಾರವನ್ನು ತಿಳಿದು ಸಂತೋಷವೆನಿಸಿತು. ಆಗ ಅವನು:— ಹುಜೂರ, ನನಗೆ ಪಂಜಾಬದ ಮಾಹಿತಿಯು ಚೆನ್ನಾಗಿರುತ್ತದೆ. ಕೆಂಪು ಮುಸು ಡೆಯ ಸೈನಿಕರನ್ನು ರಣಜಿತಸಿಂಹನು ಚೆನ್ನಾಗಿ ಸತ್ಕರಿಸುತ್ತಾನೆ. ಈ ಮೊದಲೇ

ಅವನು ಎಷ್ಟೋ ಜನ ಟೊಪ್ಪಿಗೆಯವರನ್ನು ತನ್ನ ದಂಡಿನಲ್ಲಿಟ್ಟುಕೊಂಡಿರುತ್ತಾನೆ. ನಮ್ಮ ಧಣಿಯರು ಅವರೆಲ್ಲರಿಗಿಂತಲೂ ಹೆಚ್ಚು ಯಶಸ್ಸಂಪಾದಿಸಬಹುದೆಂದು ನನ್ನ ಅಭಿಪ್ರಾಯವಿದೆ; ಆದರೆ ಧಣಿಯರೇ, ಪಂಜಾಬದಲ್ಲಿ ತಮ್ಮ ಬರೇ ಈ ಟೊಪ್ಪಿಗೆ-ಖಡ್ಗಗಳಿಂದ ನಡೆಯಲಿಕ್ಕಿಲ್ಲ. ಅಲ್ಲಿಗೆ ಹೋಗಬೇಕಾದರೆ ಅಲ್ಲಿಯ ಪದ್ಧತಿಯ ಪ್ರಕಾರ ಯೋಗ್ಯ ಸನ್ನಾಹದೊಡನೆ ಹೊರಡಬೇಕಾಗುತ್ತದೆ; ಆ ದೇಶದ ಜನರಿಗೆ ಸರದಾರೀ ಶಿಸ್ತಿನ ಜನರು ಬೇಕು, ಎಂದು ಹೇಳಿದನು.

ಬನ್ನೂನ ಆ ಮುಚ್ಚುಮರೆಯಿಲ್ಲದ ಸ್ಪಷ್ಟವಾದ ಅಭಿಪ್ರಾಯವನ್ನು ಕೇಳಿ ಡಬ್ಲಿನ್ನನಿಗೆ ನಗೆ ಬಂದಿತು. ಒಡನೆಯೇ ಅವನು:—ಬನ್ನೂ, ಸರದಾರೀ ಶಿಸ್ತು ಅಂದರೇನು?

"ಹುಜೂರ, ೩-೪ ಡೇರೆಗಳು, ಸಾಮಾನು ಹೇರುವ ೪-೫ ಒಂಟೆಗಳು, ೧೦-೨೦ ಜನ ಚಲೋ ಸ್ವಾರರು, ೨-೩ ಬಂಡಿಗಳು ಮುಂತಾದ ಸರಂಜಾಮಿದ್ದವನೇ ಸರದಾರೀ ಶಿಸ್ತಿನವನು. ಇದನ್ನು ಬಿಟ್ಟು ನನ್ನೊಬ್ಬನೊಡನೆ ನೀವು ಅಲ್ಲಿಗೆ ತೆರಳಿದರೆ ನಿಮ್ಮನ್ನಾರೂ ಮಾತಾಡಿಸಲಿಕ್ಕಿಲ್ಲ"

ಡಬ್ಲಿನ್ನನು ಸಾನಂದದಿಂದ ಬನ್ನೂನ ಬೆನ್ನ ಮೇಲೆ ಕೈಯೊಳಿಯುತ್ತ:— ಶಾಬಾಸ ಬನ್ನೂ, ನೀನು ನಿಜವಾಗಿಯೂ ಚತುರನಾಗಿರುತ್ತೀ. ನಿನ್ನ ಸಲಹೆಯಂತೆ ನಾನು ಅಂಥ ಸರಂಜಾಮುದೊಡನೆಯೇ ಪಂಜಾಬಕ್ಕೆ ತೆರಳುವೆನು; ಆದರೆ ನನಗೆ ತಕ್ಕ ಸರಂಜಾಮುವನ್ನೆಲ್ಲ ಸಿದ್ಧಪಡಿಸತಕ್ಕವನು ನೀನೇ; ಹಾಗು ಆ ನನ್ನ ಸರಂಜಾಮುದವರಲ್ಲಿ ವಿಶ್ವಾಸಘಾತುಕ ಮತ್ತು ಸ್ವಾರ್ಥೀಜನರ ಸಮಾವೇಶವಾಗದಂತೆ ನೋಡಿಕೊಳ್ಳತಕ್ಕ ಭಾಗವಾದರೂ ನಿನ್ನದೇ.

ಬನ್ನೂನು ಸಂತೋಷದಿಂದ ಅದಕ್ಕೊಪ್ಪಿದನು. ಬಳಿಕ ಅವನು ತನ್ನ ದೇಶಕ್ಕೆ ತೆರಳಿದನು. ಡಬ್ಲಿನ್ನನು ಆ ಸುರತಪಟ್ಟಣದಲ್ಲಿಯೇ ತಳವೂರಿದನು. ಸ್ವಗ್ರಾಮಕ್ಕೆ ಹೋಗಿ ಬನ್ನೂನು ತನ್ನ ತಮ್ಮನಾದ ಧನ್ನೂನನ್ನೂ, ತನ್ನ ವಿಶ್ವಾಸಕ್ಕೆ ಅರ್ಹರಾದ ಹತ್ತಿಪ್ಪತ್ತು ತರುಣ ಜನರನ್ನೂ ಕರೆತಂದನು. ಅಷ್ಟರಲ್ಲಿ ಡಬ್ಲಿನ್ನನು ತನಗೆ ಬೇಕಾದ ಕುದುರೆ, ಅವುಗಳ ಸಾಮಾನು, ಡೇರೆ, ಒಂಟೆ ಮುಂತಾದವುಗಳನ್ನು ಕೊಂಡುಕೊಂಡನು. ಡಬ್ಲಿನ್ನನು ತನಗಾಗಿ ಕೊಂಡಿದ್ದ ಕುದುರೆಯಂತೂ ಅತ್ಯಂತ ಶ್ರೇಷ್ಠತರಗತಿಯದಿದ್ದಿತು. ಅದರ ವೇಗವು ಗಾಳಿಯನ್ನು ಕೂಡ ಹಿಂದೂಡುವಂತಿತ್ತು. ಅಂತೇ ಅವನು ಅದಕ್ಕೆ ಒಲೂನ (ವಿಮಾನ)ಎಂದು ಹೆಸರಿಟ್ಟನು. ಕೆಲದಿನಗಳಲ್ಲಿಯೇ ಬನ್ನೂನು ತನ್ನ ಜನರೊ

ಡನೆ ಅವನಿಗೆ ಬಂದು ಕೂಡಿದನು. ಒಡನೆಯೇ ಡಬ್ಲಿನ್ನನು ಆ ತನ್ನ ಸ್ವಾರರಿಗೂ ಅವರವರ ಮನಸ್ಸಿನ ತಕ್ಕಂತಹ ಕುದುರೆ, ಶಸ್ತ್ರಾಸ್ತ್ರ ಮುಂತಾದವುಗಳನ್ನು ಕೊಂಡುಕೊಟ್ಟನು ; ಹಾಗು ಪ್ರತಿನಿತ್ಯ ಅವರ ಕವಾಯತು ಮಾಡಿಸಹತ್ತಿದನು. ೧೫-೨೦ ದಿನಗಳಲ್ಲೇ ಡಬ್ಲಿನ್ನನ ಆ ಚಿಕ್ಕ ದಂಡು ಶಿಕ್ಷಣ ಹೊಂದಿ ಸಿದ್ಧವಾಯಿತು. ಬಳಿಕ ಅವರು ಪಂಜಾಬದ ಕಡೆಗೆ ಹೊರಡುವದನ್ನು ನಿರ್ಧರಿಸಿದರು.

ಡಬ್ಲಿನ್ನನ ಆ ಚಿಕ್ಕ ದಂಡಿನವರ ಪೋಷಾಕು ಬಳ್ಳೇ ಭವ್ಯವಾಗಿದ್ದು, ನೋಡುವವರ ಕಣ್ಣುಗಳನ್ನು ಕುಕ್ಕಿಸುವಂತಹದಿದ್ದಿತು. ಅದರಿಂದ ಆ ಸೈನಿಕರನ್ನು ಕಂಡ ಪ್ರತಿಯೊಬ್ಬನಲ್ಲೂ ಇವರು ಯಾವನೊಬ್ಬ ಪ್ರಖ್ಯಾತ ಸರದಾರನ ಕಡೆಯುವರೆಂದು ಕಟ್ಟನೆ ಹೊಳೆಯುತ್ತಿತ್ತು. ತನ್ನ ಒಡೆಯನ ದಂಡಿನ ಆ ಶಿಸ್ತನ್ನು ಕಂಡು ಬನ್ನೂನಿಗೆ ಧನ್ಯವೆನಿಸಲು, ಅವನ ಕಣ್ಣೊಳಗಿಂದ ಆನಂದಾಶ್ರುಗಳು ಉದುರಿದವು. ಡಬ್ಲಿನ್ನನು ಬನ್ನೂನನ್ನೇ ಆ ತನ್ನ ಚಿಕ್ಕದಂಡಿನ ಮುಖ್ಯಸ್ಥನನ್ನಾಗಿ ನಿಯಮಿಸಿದ್ದನು ಆ ದಂಡಿನೊಡನೆ ಬಳ್ಳೇ ಉತ್ಸಾಹದಿಂದ ಡಬ್ಲಿನ್ನನು ಪಂಜಾಬದ ಮಾರ್ಗಹಿಡಿದು ಸಾಗಿರಲು, ಕೆಲದಿನಗಳಲ್ಲಿಯೇ ಅವರು ಲಾಹೋರದ ಹತ್ತರ ಹೋದರು. ಲಾಹೋರಪಟ್ಟಣವು ಹೇಗೆ ಸಮೀಪಿಸಹತ್ತಿತೋ ಹಾಗೆ ಡಬ್ಲಿನ್ನನ ಅಂತರಂಗದಲ್ಲಿ ಮುಂದೆ ಹೇಗೆ ಹೇಗೆ ವರ್ತಿಸಬೇಕೆಂಬದರ ಗಡಬಿಡಿಯು ಒತ್ತರಿಸಿತು. ಕಡೆಗೆ ಅವನು ಗೊತ್ತು ಮಾಡಿಕೊಂಡದ್ದೇನಂದರೆ, ತಾನು ತನ್ನ ದಂಡಿನೊಡನೆ ಒಮ್ಮೆಲೆ ಲಾಹೋರಪಟ್ಟಣವನ್ನು ಸೇರಬಾರದು; ೩-೪ ದಿನಗಳ ವರೆಗೆ ಲಾಹೋರದ ಹೊರಗೆ ತಳವೂರಿ, ತನ್ನ ದಂಡಿನವರ ದಣುವನ್ನಾರಿಸಿಕೊಳ್ಳಬೇಕು. ಬಳಿಕ ಸುಸಮಯದಲ್ಲಿ ಪಟ್ಟಣವನ್ನು ಪ್ರವೇಶಿಸಿ ಮುಂದಿನ ಕೆಲಸಕ್ಕೆ ಪ್ರಾರಂಭಿಸಬೇಕು.

ಸುರತದಿಂದ ಲಾಹೋರದ ವರೆಗಿನ ಬಹು ದೂರದ ಪ್ರವಾಸವನ್ನು ಒಂದೇಸವನೆ ಮಾಡಿದ್ದರಿಂದ ಅವನ ಸೈನ್ಯದ ಕುದುರೆಗಳೂ, ಸವಾರರೂ ಹೆಚ್ಚಾಗಿ ದಣಿವಿದ್ದರು. ಅವರ ಉಡಿಗೆ-ತೊಡಿಗೆಗಳೆಲ್ಲ ಧೂಳದಿಂದ ಮುಸುಕಿದ್ದವು; ಮತ್ತು ಎಲ್ಲರ ಮುಖಚರ್ಯೆಗಳೂ ಮಲಿನವಾಗಿದ್ದವು. ಇಂಥ ಸ್ಥಿತಿಯಲ್ಲಿ ತಾನು ಲಾಹೋರವನ್ನು ಪ್ರವೇಶಿಸುವದರಿಂದ ಅಲ್ಲಿಯ ಜನರ ಮೇಲೆ ತನ್ನ ದಂಡಿನ ವರ್ಚಸ್ಸು ಬೀಳಲಾರದೆಂದು ಭಾವಿಸಿ, ಡಬ್ಲಿನ್ನನು ೩-೪ ದಿನಗಳ ವರೆಗೆ ಲಾಹೋರದ ದಕ್ಷಿಣಕ್ಕೆ ೨-೩ ಮೈಲುಗಳ ಮೇಲಿರುವ ಒಂದು ಪ್ರಶಸ್ತಾದ ಮಾವಿನ ತೋಪಿನಲ್ಲಿ ಬೀಡುಬಿಟ್ಟನು.

ಆ ಅಲ್ಪಾವಧಿಯ ವಿಶ್ರಾಂತಿಯಿಂದಲೇ ಅವರೆಲ್ಲರೂ ಸುಪ್ರಸನ್ನರಾದರು; ಎಲ್ಲರ ಮುಖಭಾವವೂ ಉತ್ಸಾಹಪೂರ್ಣವಾಯಿತು. ನಾಲ್ಕನೇ ದಿನ ಸೂರ್ಯೋದಯಕ್ಕೆ ಮುಂಚೆಯೇ ಡಬ್ಲಿನ್ನನು ತನ್ನ ಬಲೂಚ ಕುದುರೆಯನ್ನೇರಿದನು; ಕೂಡಲೆ ಅವನ ಅನುಯಾಯಿಗಳೂ ಸಜ್ಜಾದರು. ಡಬ್ಲಿನ್ನನು ಆ ತನ್ನ ಚಿಕ್ಕ ದಂಡಿನೊಡನೆ ಲಾಹೋರಕ್ಕೆ ನಡೆದನು.

ದಿಲ್ಲಿಯಿಂದ ಲಾಹೋರಕ್ಕೆ ಹೋಗುವ ಮಾರ್ಗವು ಬಾದಶಾಹೀ ಕಾಲದಿಂದಲೂ ಪ್ರಸಿದ್ಧವಿರುತ್ತದೆ. ಆ ದಾರಿಯಲ್ಲಿ ಹರದಾರಿಗಳನ್ನು ತೋರಿಸಲು ನಿಲ್ಲಿಸಿರುವ ಪ್ರಚಂಡವಾದ ಕಲ್ಲುಗಳು ಈಗಲೂ ಅಚಲವಾಗಿ ನಿಂತುಕೊಂಡಿರುತ್ತವೆ. ಲುಧಿಯಾನಾ ಮತ್ತು ಕರ್ನಾಲ ಎಂಬ ಪಟ್ಟಣಗಳ ಮಧ್ಯದಲ್ಲಿ ಶರದ್ರೂ ನದಿಯ ಧಡದಲ್ಲಿ ನಿಲ್ಲಿಸಲ್ಪಟ್ಟಿರುವ ಬಹು ಎತ್ತರವಾದ ಸಾಲುಗಲ್ಲುಗಳು ಈಗಲೂ ಪಥಿಕರಲ್ಲಿ ಕುತೂಹಲವನ್ನುಂಟು ಮಾಡುತ್ತವೆ ಆ ದಾರಿಯೊಳಗಿನ ವಿಶಾಲವಾದ ವೃಕ್ಷಗಳು ತಮ್ಮ ಬಾಹುಪಾಶದಿಂದ ಪ್ರವಾಸಿಗರನ್ನು ಅಪ್ಪಿಕೊಳ್ಳಲು ನಿಂತಿರುವವೋ ಎಂಬಂತೆ ಈಗಲೂ ನಿಬಿಡವಾಗಿ ನಿಂತಿವೆ. ಅಲ್ಲಲ್ಲಿ ಧರ್ಮಶಾಲೆಗಳೂ, ಸಣ್ಣ ದೊಡ್ಡ ಕೆರೆಗಳೂ ಪಥಿಕರ ಸ್ವಾಗತಕ್ಕಾಗಿ ಸಿದ್ಧವಾಗಿವೆ. ಡಬ್ಲಿನ್ನನು ತನ್ನ ಜನರೊಡನೆ ಲಾಹೋರಪಟ್ಟಣವನ್ನು ಪ್ರವೇಶಿಸುತ್ತಲೆ, ಈ ಸರದಾರೀ ರೀತಿಯ ಜನರನ್ನು ಕಂಡು ಅಲ್ಲಿಯ ಜನರು ಬೊಟ್ಟು ಕಚ್ಚಿದರು. ನಗರದೊಳಗಿನ ಯಾವುದೊಂದು ಪ್ರಶಸ್ತವಾದ ವಾಡೆ ಇಲ್ಲವೆ ಬೈಲು ಜಾಗೆಯನ್ನು ಕಂಡೊಡನೆ ಇದನ್ನು ಕೆಲ ದಿವಸಗಳ ವರೆಗೆ ಬಾಡಿಗೇ ಕೊಡುವರೇನೆಂದು ಬನ್ನೂನು ನೆರೆಹೊರೆಯ ಜನರಿಗೆ ಕೇಳುತ್ತಿದ್ದನು. ಅಲ್ಲಿ ನಿರಾಶೆಯಾಗಲು, ಮತ್ತೆ ಬೇರೆ ಕಡೆಗೆ ಅವರು ಹೋಗುತ್ತಿದ್ದರು. ಹೀಗೆ ಅವರು ಇಡಿ ಪಟ್ಟಣವನ್ನು ಸುತ್ತಿದರೂ ಅವರ ಮನಸ್ಸಿನ ತಕ್ಕ ಸ್ಥಳವು ಅಲ್ಲಿ ಸಿಗಲಿಲ್ಲ; ಸರ್ವ ಸಾಧಾರಣವಾದ ಸ್ಥಳವೂ ಬಾಡಿಗೆಗೆ ದೊರೆಯಲಿಲ್ಲ! ಯಾವನೊಬ್ಬ ಘನ ಶ್ರೀಮಂತನು ತನ್ನ ಒಬ್ಬೊಂಟಿಗಳಾದ ಉಪವರ ಸುಂದರ ಕನ್ಯೆಗಾಗಿ ಚಲೋ ಸ್ಥಳವನ್ನು ಹುಡುಕುವದಕ್ಕೆ ಎಷ್ಟು ಚಿಕಿತ್ಸಕ ಬುದ್ಧಿಯಿಂದ ಶೋಧನಡಿಸುವನೋ; ಹಾಗು ಎಷ್ಟು ಹುಡುಕಿದರೂ ಯೋಗ್ಯ ವರನು ಸಿಗದ್ದರಿಂದ ಬೇಸತ್ತು ಕಡೆಗೆ ಅವನು ಅವಳನ್ನು ಯಾವನೊಬ್ಬ ಸಾಮಾನ್ಯ ಮನುಷ್ಯನಿಗೆ ಹೇಗೆ ಧಾರೆಯೆರೆದು ಕೊಡುವನೋ ಆ ಪ್ರಕಾರ ಹೆನರಿ ಡಬ್ಲಿನ್ನನಿಗೆ ಆ ವಿಸ್ತಾರವಾದ ಲಾಹೋರ ಶಹರದಲ್ಲಿ ಇಳಕೊಳ್ಳಲಿಕ್ಕೆ ತಕ್ಕ ಸ್ಥಳವು ದೊರೆಯದ್ದರಿಂದ ನಿರಾಶೆಗೊಂಡನು,

ಆಗ ಡಬ್ಲಿನ್ನನ ಮನಸ್ಸಿನ ಸ್ಥಿತಿಯು ಹೇಗಾಗಿತ್ತೆಂಬದನ್ನು ನಾವು ನಮ್ಮ ಶಬ್ದಗಳಿಂದ ವರ್ಣಿಸುತ್ತ ಕೂಡ್ರದೆ ಆತನ ಅಂದಿನ ರೋಜನಿಶಿಯ ಉತಾರವನ್ನೇ ಇಲ್ಲಿ ಕೊಡುತ್ತೇವೆ:—

"ಲಾಹೋರ ಪಟ್ಟಣವನ್ನು ಹೊಕ್ಕೊಡನೆ ಪರಮ ಆಹ್ಲಾದವೆನಿಸಿತು. ಗ್ರೀಷ್ಮಋತುವಿನ ಸಮಯವಾದ್ದರಿಂದ ರಾವೀನದಿಯು ತುಸ ಬತ್ತಿತ್ತು; ಆದರೂ ಅದರ ಎರಡೂ ದಂಡೆಯ ಮೇಲಿನ ಸಮೃದ್ಧವಾದ ಬೆಳೆಯನ್ನು ಕಂಡು ದೃಷ್ಟಿಗೆ ಸಮಾಧಾನವೆನಿಸಿತು. ನಗರದಲ್ಲಿ ನವೀನತೆಯೇನೂ ಕಾಣಲೇ ಇಲ್ಲ. ಹಿಂದುಸ್ತಾನದೊಳಗಿನ ಕೆಲವು ಪುರಾತನಪಟ್ಟಣಗಳನ್ನು ನೋಡಿದರೆ ಒಂದು ಬಗೆಯ ಆಶ್ಚರ್ಯವೆನಿಸುತ್ತದೆ; ಆದರೆ ಈ ಪಟ್ಟಣವನ್ನು ನೋಡುವದರಿಂದ ಹಾಗೆ ಸೋಜಿಗವೇನೂ ಅನಿಸಲಿಲ್ಲ. ಈ ಪಟ್ಟಣವು ಬಹಳ ದೊಡ್ಡದಿದ್ದು ಇಲ್ಲಿಯ ಜನರು ಐಶ್ವರ್ಯಸಂಪನ್ನರಾಗಿರುತ್ತಾರೆ; ಆದರೆ ಯುರೋಪದೊಳಗಿನ ದೊಡ್ಡ ದೊಡ್ಡ ಪಟ್ಟಣಗಳನ್ನು ನಿರೀಕ್ಷಿಸಿದವರಿಗೆ ಇದು ತೀರ ಸಾಮಾನ್ಯ ನಗರವೆಂದು ತೋರದಿರಲಾರದು. ಈ ಪಟ್ಟಣಕ್ಕೆ ರಾಜಧಾನಿಯೆನ್ನುವದಕ್ಕಿಂತ ಇದೊಂದು ಪ್ರಖ್ಯಾತವಾದ ದಂಡಿನ ಠಾಣ್ಯವೆಂದರೆ ಸಲ್ಲಬಹುದು; ಮತ್ತು ಇದರ ಇತಿಹಾಸವಾದರೂ ಅದನ್ನೇ ತಿಳಿಸುತ್ತದೆ. ಈ ಲಾಹೋರ ಪಟ್ಟಣವು ಮಾಡಿದಷ್ಟು ಕಾಳಗಗಳನ್ನು ಹಿಂದುಸ್ತಾನದೊಳಗಿನ ಬೇರೆ ಯಾವ ಪಟ್ಟಣಗಳೂ ಈ ವರೆಗೆ ಮಾಡಿರಲಿಕ್ಕಿಲ್ಲ. ಅದರಲ್ಲೂ ಪಂಜಾಬವು ಶೀಖರ ಅಧೀನವಾದಂದಿನಿಂದ ಮುಸಲ್ಮಾನರು ಈ ಪಟ್ಟಣದ ಮೇಲೆ ಎಷ್ಟೋ ಸಾರೆ ದಾಳಿಗಳನ್ನಿಟ್ಟರು; ಮತ್ತು ಅದರಿಂದ ಈ ಪಟ್ಟಣವು ಹಲವು ಬಗೆಯಿಂದ ಉಧ್ವಸ್ಥವಾಗಿದೆ. ಶೀಖರ ಸದಾ ಸಜ್ಜಾದ ಹಾಗು ವೈರಿಗಳ ಮಾರ್ಗಪ್ರತೀಕ್ಷೆಯ ಕಾರಣಗಳ ಮೂಲಕ ಈ ಪಟ್ಟಣಕ್ಕೆ ದಂಡಿನ ಛಾವಣಿಯ ಸ್ವರೂಪವು ಪ್ರಾಪ್ತವಾಗಿರುತ್ತದೆ. ಅಮೃತಸರ ಹಾಗು ಲಾಹೋರ ಈ ಪಟ್ಟಣಗಳು ಪಂಜಾಬದೊಳಗಿನ ಅತ್ಯಂತ ವೈಭವಸಂಪನ್ನ ಹಾಗು ಪ್ರಾಚೀನ ನಗರಗಳೇನೋ ನಿಜ; ಆದರೆ ಇವು ಪುರಾತನಕಾಲದಿಂದ ಅದೇಕೆ, ಯಾವ ಲವ-ಕುಶರಿಂದ ಈ ಪಟ್ಟಣಗಳು ಸ್ಥಾಪಿಸಲ್ಪಟ್ಟವೋ ಆಗಿನಿಂದ ಈ ಪಟ್ಟಣಗಳಲ್ಲಿ ಯುದ್ಧಗಳು ಆಗುತ್ತಲೇ ಇವೆ. ನಾದಿರಶಹಾ ಮತ್ತು ಅಬ್‌ದಾಲಿ ಅಹಮ್ಮದಶಹಾ ಇವರಂತೂ ಈ ಪಟ್ಟಣಗಳನ್ನು ಸುಟ್ಟು ಬಿಟ್ಟಿದ್ದರು. ಈ ಅವಶೇಷ ನಗರಗಳನ್ನು ಇಲ್ಲಿಯವರು ಮತ್ತೆ ಮತ್ತೆ ಕಟ್ಟಿರುವರು. ರಣಜಿತಸಿಂಹನು ಈ ಲಾಹೋರ ಪಟ್ಟಣವನ್ನು ಕಟ್ಟಿ ಚೆನ್ನಾಗಿ ಸುಧಾ

ರಿಸಿರುವನು; ಆದರೆ ಪ್ರಾಚೀನ ಕಾಲದಲ್ಲಿ ಯಾವ ಲಾಹೋರನಗರದ ೩೦೦ ಭಾಗಗಳಿದ್ದವೋ ಈಗ ಇಲ್ಲಿ ಬರೇ ಆರು ಭಾಗಗಳು ಮಾತ್ರ ಬಾಕಿ ಉಳಿದಿವೆ. ಈಗಿನ ಲಾಹೋರ ಪಟ್ಟಣದ ಕ್ಷೇತ್ರವು ೪-೫ ಹರಿದಾರಿಯಾಗಿದ್ದು, ರಣಜಿತ ಸಿಂಹನು ಈ ಪಟ್ಟಣದ ಸುತ್ತಲೂ ಬಹು ಎತ್ತರವಾದ ಹಾಗು ಭವ್ಯವಾದ ಕೋಟೆಯನ್ನು ಕಟ್ಟಿಸಿರುತ್ತಾನೆ. ನಗರವನ್ನು ಪ್ರವೇಶಿಸುವಾಗ ಒಟ್ಟಿಗೆ ೧೨ ಅಗಸೇ ಬಾಗಿಲುಗಳನ್ನು ದಾಟಿ ಹೋಗಬೇಕಾಗುತ್ತದೆ. ಪ್ರತಿಯೊಂದು ಅಗಸೇ ಬಾಗಿಲಮೇಲೆ ಪ್ರಚಂಡವಾದ ತೋಫುಗಳು ಯುಕ್ತಿಯಿಂದ ಹೂಡಲ್ಪಟ್ಟಿರುತ್ತವೆ. ಯುದ್ಧದ ಕಾಲಕ್ಕೆ ಶತ್ರುಗಳು ಈ ನಗರವನ್ನು ಪ್ರವೇಶಿಸುವದೆಂದರೆ, ಈ ತೋಫುಗಳ ಗುಂಡುಗಳನ್ನು ಮೈಮೇಲೆ ತಕ್ಕೊಳ್ಳುತ್ತ ಈ ಹನ್ನೆರಡೂ ಬಾಗಿಲುಗಳನ್ನು ಒಡೆದು ಬರಬೇಕಾಗುತ್ತದೆ. ಇಂಥ ಈ ವಿಸ್ತಾರವಾದ ಪಟ್ಟಣದಲ್ಲಿ ಯೋಗ್ಯಸ್ಥಳಕ್ಕಾಗಿ ಹುಡುಕಿ ಹುಡುಕಿ ಬೇಸತ್ತು, ಕಡೆಗೆ ನಮ್ಮ ಸೈನಿಕರೊಡನೆ ಮತ್ತೆ ಊರಹೊರಗೆ ಬಂದು, ಇಲ್ಲಿಯ ಯುರೋಪಿಯನ್ನರು ವಾಸಿಸುವ ಸ್ಥಳವಾವುದೆಂದು ಹುಡುಕುತ್ತ ನಡೆದನು. ಊರಹೊರಗೆ ಚಲೋ ಸ್ಥಳದೊರೆತರೆ, ಅಲ್ಲಿಯೇ ನಮ್ಮ ಡೇರೆಗಳನ್ನು ನಿಲ್ಲಿಸಿ ವಾಸಿಸಬೇಕೆಂದೂ ಗೊತ್ತುಮಾಡಿಕೊಂಡೆನು. ಊರಹೊರಗೆ ಕೆಲವು ಉತ್ತಮ ಮಾವಿನ ತೋಪುಗಳೂ, ಸುಂದರ ಬಂಗ್ಲೆಗಳೂ ಇರುತ್ತವೆ. ಅವೆಲ್ಲ ಇಲ್ಲಿಯ ಅಮೀರ-ಉಮರಾವರ ಬಂಗ್ಲೆಗಳಾದ್ದರಿಂದ ಅವು ಬಾಡಿಗೆಗೆ ಸಿಗಲಾರವೆಂದೂ ತಿಳಿಯಿತು ''

ಹೀಗೆ ಡಬ್ಲಿನ್ನನಿಗೆ ಉಳುಕೊಳ್ಳಲಿಕ್ಕೆ ಸ್ಥಳ ದೊರೆಯದೆ ಅವನು ತನ್ನ ಸೈನಿಕರೊಡನೆ ಇತಸ್ತತಃ ಅಡ್ಡಾಡುತ್ತಿರಲಿಕ್ಕೆ ಅವನ ಸುದೈವದಿಂದ ಅವನ ಇಚ್ಛೆಗಿಂತ ಉತ್ತಮವಾದ ಸ್ಥಳವು ಅವನಿಗೆ ದೊರಕಿತು. ಲಾಹೋರ ದರ್ಬಾರದೊಳಗಿನ ಒಬ್ಬ ಉಚ್ಚ ಪದಸ್ಥ ಗೃಹಸ್ಥನು ನಗರದ ಹೊರಗೆ ಅಡ್ಡಾಡಲಿಕ್ಕೆ ಬರಲಿಕ್ಕೂ, ಡಬ್ಲಿನ್ನನು ತನ್ನ ಚಿಕ್ಕ ದಂಡಿನೊಡನೆ ಅಲ್ಲಿಗೆ ಹೋಗಲಿಕ್ಕೂ ಗಂಟೇ ಬಿದ್ದಿತು. ಡಬ್ಲಿನ್ನನ ಆ ಶಿಸ್ತಿನ ಪರಿವಾರವನ್ನು ಕಂಡು ಆ ಗೃಹಸ್ಥನಿಗೆ ಬಹು ವಿಸ್ಮಯವೆನಿಸಿತು; ಒಡನೆಯೇ ಅವನು ಡಬ್ಲಿನ್ನನ ಸಮೀಪಕ್ಕೆ ಬಂದು ಅವನಾರೆಂಬ ಬಗ್ಗೆ ವಿಚಾರಿಸಿದನು. ಡಬ್ಲಿನ್ನನು ತಾನು ಲಾಹೋರಕ್ಕೆ ಬಂದ ಉದ್ದೇಶ ಹಾಗು ತನಗೆ ಇಳುಕೊಳ್ಳಲಿಕ್ಕೆ ಬೇಕಾಗಿರುವ ಸ್ಥಳದ ವಿಷಯವನ್ನು ಅವನಿಗೆ ತಿಳಿಸಿದನು. ಡಬ್ಲಿನ್ನನ ಆ ಠೀವು, ಮಿತಭಾಷಣಗಳನ್ನು ಕಂಡು ಆ ಗೃಹಸ್ಥನಲ್ಲಿ ಇವನ ಬಗ್ಗೆ ಆದರವುಂಟಾಯಿತು. ಕೂಡಲೆ ಅವನು ಸಮೀಪದಲ್ಲಿಯೇ ಇರುವ ತನ್ನ

ಉತ್ಕೃಷ್ಟವಾದ ಬಂಗ್ಲೆಯನ್ನು ಇವನಿಗೆ ಇರಲಿಕ್ಕೆ ಕೊಡಲು ಸಿದ್ಧನಾದನು. ಅವನ ಆ ಅಭಿವಚನವನ್ನು ಕೇಳಿ ಡಬ್ಲಿನ್ನನಿಗೆ ಪರಮ ಸಂತೋಷವಾಯಿತು. ಆ ಉಚ್ಚ ಪದಸ್ಥ ಗೃಹಸ್ಥನಾರೆಂಬದು ಮುಂದೆ ನಮ್ಮ ವಾಚಕರಿಗೆ ತಿಳಿಯತಕ್ಕದ್ದೇ ಆಗಿರುವದರಿಂದ ಅವನ ಗೊಡವೆಯನ್ನು ಈಗ ಬಿಟ್ಟು ಡಬ್ಲಿನ್ನನ ವ್ಯವಸ್ಥೆಯೇನಾಯಿತೆಂಬದನ್ನು ನೋಡುವಾ.

ಆ ಗೃಹಸ್ಥನು ತನ್ನ ಸೇವಕನಾದ ರತನಸಿಂಗನನ್ನು ಡಬ್ಲಿನ್ನನಿಗೆ ತನ್ನ ಬಂಗ್ಲೆಯನ್ನು ತೋರಿಸಿ ಬರಲಿಕ್ಕೆ ಕಳಿಸಿ, ತಾನು ಊರೊಳಗೆ ಹೊರಟು ಹೋದನು. ಯಾವ ಬಂಗಲೆಯಲ್ಲಿ ಡಬ್ಲಿನ್ನನು ಉಳುಕೊಳ್ಳಬೇಕಾಗಿತ್ತೋ ಅದು ನಗರದ ಮತ್ತೊಂದು ಪಕ್ಕಕ್ಕಿತ್ತು. ಅದರಿಂದ ಡಬ್ಲಿನ್ನನು ತನ್ನ ಸೈನಿಕರೊಡನೆ ಮತ್ತೆ ಲಾಹೋರಪಟ್ಟಣವನ್ನು ಪ್ರವೇಶಿಸಬೇಕಾಯಿತು. ರತನಸಿಂಹನು ಆ ಯುರೋಪಿಯನ್ನನೊಡನೆ ನಗರವನ್ನು ಪ್ರವೇಶಿಸಿದೊಡನೆ ಊರಜನರು ಮತ್ತೆ ಆಶ್ಚರ್ಯಭರಿತರಾದರು. ಹೀಗೆ ಆಶ್ಚರ್ಯಭರಿತರಾದ ಜನರಲ್ಲಿಯ ಒಬ್ಬ ಯುವನನು ತನ್ನ ಕುದುರೆಯನ್ನೇರಿ ಡಬ್ಲಿನ್ನನ್ನನು ಸರಿಸಿ ನಡೆದನು. ಈತನಾವನೋ ಅಸಭ್ಯ ಧೂರ್ತನೆಂಬದನ್ನು ಡಬ್ಲಿನ್ನನು ಆ ಕೂಡಲೆ ತಿಳಿದನು; ಆದರೂ ಈತನಗೊಡವೆ ತನಗೇಕೆಂದು ಅವನು ಸುಮ್ಮನೆ ನಡೆದಿದ್ದನು. ಡಬ್ಲಿನ್ನನಿಗೆ ಇಂಗ್ಲಿಷಿನಷ್ಟೇ ಹಿಂದೀ ಹಾಗು ಉರ್ದು ಭಾಷೆಗಳಲ್ಲಿ ಚೆನ್ನಾಗಿ ಓದು-ಬರೆಯಲಿಕ್ಕೂ ಮಾತಾಡಲಿಕ್ಕೂ ಬರುತ್ತಿತ್ತು. ಅದರಿಂದ ಅವನು ರತನಸಿಂಹನೊಡನೆ ಉರ್ದುಭಾಷೆಯಲ್ಲಿ ಮಾತಾಡುತ್ತ ಸಾಗಿದ್ದನು. ಮೋಚೀ ಎಂಬ ಹೆಸರಿನ ಅಗಸೇ ಬಾಗಿಲದಿಂದ ಹೊರಬಿದ್ದೊಡನೆ ಲಾಹೋರನಗರದ ಪ್ರಾಚೀನ ಹಾಳು ಇಮಾರತುಗಳ ಅವಶೇಷಗಳು ಅಲ್ಲಲ್ಲಿ ಕಾಣತೊಡಗಿದವು. ಆ ವಿಷಯವಾಗಿಯೇ ಅವನು ರತನಸಿಂಹನೊಡನೆ ಆಗ ಚರ್ಚಿಸುತ್ತ ಸಾಗಿದ್ದನು. ಆಗ ಡಬ್ಲಿನ್ನನು ಒಳ್ಳೇ ಖೇದದಿಂದ:—ಯಾವ ಪಟ್ಟಣವು ರಣಜಿತಸಿಂಹನಂತಹ ಮಹಾರಾಜನಿಂದ ಕೂಡ ಶೃಂಗರಿಸಲು ಅಶಕ್ಯವಾಗಿರುವದೋ, ಇಂಥ ಈ ಪಟ್ಟಣವು ಮತ್ತೆ ತನ್ನ ಪ್ರಾಚೀನ ವೈಭವವನ್ನು ಮುಟ್ಟುವದು ಅಸಂಭವವೇ ಆಗಿದೆ" ಎಂದೆನ್ನಲು,

ಆ ಮುಸಲ್ಮಾನನು ನಡುವೇ ಬಾಯಿ ಹಾಕಿ:—"ರಣಜಿತಸಿಂಹನು ಮನಸ್ಸು ಮಾಡಿದರೆ ಇಂಥ ೮-೧೦ ಲಾಹೋರ ಪಟ್ಟಣಗಳನ್ನು ಹೊಸದಾಗಿ ಕಟ್ಟಿಸಬಹುದು; ಆದರೆ ಅವನಲ್ಲಿ ಪೂರ್ವದ ಬಾದಶಾಹೀ ಮಹತ್ವಾಕಾಂಕ್ಷೆಯೇ

ಇರುವದಿಲ್ಲ. ನಾದಿರಶಹನು ಈ ಲಾಹೋರದಂತೆ ದಿಲ್ಲಿಯನ್ನೂ ಸುಟ್ಟು ಸೂರೆ ಗೊಂಡಿದ್ದನು; ಆದರೆ ಅದು ಮತ್ತೆ ಮೊದಲಿಗಿಂತಲೂ ಸುಂದರವಾಗಿ ಕಟ್ಟಲ್ಪಟ್ಟಿತು. ಲಾಹೋರದ ಸುತ್ತುಮುತ್ತಲಿನ ಈ ಭವ್ಯವಾದ ಕೋಟೆಯನ್ನು ನೋಡಿದವರಿಗೆ ರಣಜಿತಸಿಂಹನ ಕರ್ತವ್ಯತತ್ಪರತೆಯೇನೋ ಕಾಣುವದು; ಆದರೆ ನಿಜವಾದ ಸಂಗತಿಯು "ಅಂದರಕಿ ಬಾತ ರಹಿಮ ಜಾನೇ" ಎಂಬಂತೆ ಬೇರೆಯಾಗಿರುವದು. ಈ ಕೋಟೆ ಕಟ್ಟಲಿಕ್ಕೆ ಹತ್ತಿದ ಎಲ್ಲ ದುಡ್ಡನ್ನು ಅವನು ಅಮೃತಸರದ ಒಬ್ಬ ವ್ಯಾಪಾರಸ್ಥನಿಂದ ಬಲಾತ್ಕಾರಪೂರ್ವಕವಾಗಿ ತಕ್ಕೊಂಡಿರುತ್ತಾನೆ. ಹೀಗಿದ್ದರೂ ಆ ದುಡ್ಡಿನ ವಿನಿಯೋಗವಾದರೂ ಸರಿಯಾಯಿತೇ? ಅದೂ ಇಲ್ಲ. ಅದನ್ನೆಲ್ಲ ನಡು ವಿನವರೇ ಎತ್ತಿಹಾಕಿದ್ದರಿಂದ ಪಾಪ! ಆ ಬಡ ಕೂಲಿಕಾರರು ರಣಜಿತಸಿಂಹನ ಹೆಸರಿನಿಂದ ಕಲ್ಲು ಒಡೆಯುತ್ತಿರುತ್ತಾರೆ" ಎಂದು ನುಡಿದನು.

ಆ ಮುಸಲ್ಮಾನನ ಆ ಅವ್ಯಾಪಾರೇಷುವ್ಯಾಪಾರವನ್ನು ಕಂಡು ಡಬ್ಲಿನ್ನನಿಗೆ ಅವನ ಬಗ್ಗೆ ಅತಿ ತಿರಸ್ಕಾರವುಂಟಾಯಿತು; ಈ ಅಪರಿಚಿತ ಸ್ಥಳದಲ್ಲಿ ಇಂಥವರ ಮೇಲೆ ಹರಿಹಾಯುವದಕ್ಕಿಂತ ತಾನೇ ಎಚ್ಚರದಿಂದ ನಡೆಯಬೇಕೆಂದು ಅವನು ನಿಶ್ಚಯಿಸಿಕೊಂಡು, ಆಗ ಆ ವಿಷಯವನ್ನೇ ಒದಲಿಸಿದನು; ಹಾಗು "ಆದರೆ ಸಾಹೇಬರೇ, ಅದನ್ನೆಲ್ಲ ಕಟ್ಟಿಕೊಂಡು ನಾವು ಮಾಡುವದೇನು? ಯಾವ ದಯಾಘನನಾದ ದೇವರು ಅವರಿಗೀ ರಾಜ್ಯಪದವನ್ನು ದಯಪಾಲಿಸಿರುವನೋ ಅವನು ಅದರ ನಿರ್ಣಯಮಾಡಬಲ್ಲನು" ಎಂದಂದು, ಆ ಭಾವವನ್ನೊಳಗೊಂಡ ಶೇಖಸಾದಿಯಿಂದ ರಚಿಸಲ್ಪಟ್ಟ ಒಂದು ಕವಿತೆಯನ್ನು ಅಂದುತೋರಿಸಿದನು. ಡಬ್ಲಿನ್ನನು ಅಂಥ ಆ ಪಾರಸೀ ಭಾಷೆಯೊಳಗಿನ ಸುಂದರ ಕವಿತೆಯನ್ನು ಕೇಳಿ "ಈ ಸಾಹೇಬನು ಅಂಥಿಂಥವನಲ್ಲ; ಇವನು ಮಹಾ ರಣಪಂಡಿತನಾಗಿ ತೋರುವಂತೆ, ದೊಡ್ಡ ವಿದ್ಯಾಪಂಡಿತನೂ ಆಗಿರುತ್ತಾನಾದ್ದರಿಂದ ಇವನೆದುರಿಗೆ ಸುದ್ದೀಸೂರಪ್ಪನ ಹಾಗೆ ಏನಾದರೊಂದು ಹೇಳಬಾರದು"ಂದು ನಿರ್ಧರಿಸಿ, ಆ ಯುವನನು ಬಂದದಾರಿಯಿಂದ ಹಿಂತಿರುಗಿದನು. ನಂತರ ತುಸ ಹೊತ್ತಿನಲ್ಲಿಯೇ ರತನಸಿಂಹನಿಂದ ತೋರಿಸಲ್ಪಟ್ಟ ಪ್ರಶಸ್ತವಾದ ಮಾವಿನ ತೋಪಿನೊಳಗಿನ ಭವ್ಯವಾದ ಬಂಗ್ಲೆಯಲ್ಲಿ ಡಬ್ಲಿನ್ನನು ತನ್ನ ಸೈನಿಕರೊಡನೆ ಬೀಡುಬಿಟ್ಟನು.



## ೮ನೆಯ ಪ್ರಕರಣ—ರಾಜದರ್ಶನ.

ಡಬ್ಲಿನ್ನನು ರತನಸಿಂಗನಿಂದ ತೋರಿಸಲ್ಪಟ್ಟ ಆ ಬಂಗ್ಲೆಯಲ್ಲಿಳಿಕೊಂಡ ನಂತರ, ಅವನು ಆತನ ಆಭಾರ ಮನ್ನಿಸಿ ಕಳಿಸಿ, ಆತನ ಒಡೆಯನ ಹೆಸರನ್ನು ತನ್ನ ರೋಜನಿಸಿಯಲ್ಲಿ ಬರೆದುಕೊಂಡನು. ಬಳಿಕ ಅವನು ತನ್ನ ಸೈವಿಕರಿಂದ ಆ ಬಂಗಲೆಯನ್ನು ಉಡುಗಿಸಿ, ಸಾರಿಸಿ ಸ್ವಚ್ಛ ಮಾಡಿಸಿದನು. ಇಷ್ಟಾಗಲಿಕ್ಕೆ ಬೆಳಗಿನ ೧೦ ಗಂಟೆಯು ಸಮಯವಾಯಿತು. ಆಗ ಎಲ್ಲರೂ ತಮ್ಮ ತಮ್ಮ ಅಡಿಗೆ-ಊಟಗಳ ಉದ್ಯೋಗಕ್ಕೆ ತೊಡಗಿದರು. ಡಬ್ಲಿನ್ನನ ಊಟದ ವ್ಯವಸ್ಥೆಯನ್ನು ಅವರೊಳಗಿನವನೊಬ್ಬನೇ ಮಾಡುತ್ತಿದ್ದನು. ಅಡಿಗೆಯಾಗುವವರೆಗೆ ಡಬ್ಲಿನ್ನನು ಆ ಬಂಗ್ಲೆಯ ದಿವಾಣಖಾನೆಯೊಳಗಿನ ಒಂದು ಮಂಚದ ಮೇಲೆ ಕುಳಿತು ವಿಚಾರಮಗ್ನನಾದನು. ಕೂಡಲೆ ಅವನಿಗೊಂದು ಸಂಗತಿಯು ನೆನಪಾಗಲು, ಅವನು ಲಗುಬಗನೆ ಎದ್ದು ಒಂದು ಆಭಾರಪ್ರದರ್ಶನದ ಪತ್ರವನ್ನು ಬರೆದು, ಅದನ್ನು ಒಬ್ಬ ಸ್ವಾರನ ಮುಖಾಂತರವಾಗಿ ತನಗೆ ಆ ಬಂಗ್ಲೆಯನ್ನು ಇರಲಿಕ್ಕೆ ಕೊಟ್ಟಿದ್ದ ಫಕೀರ ಅಜೀಜುದ್ದೀನ ಎಂಬ ಹೆಸರಿನ ಆ ಸಭ್ಯಗೃಹಸ್ಥನಿಗೆ ಕಳಿಸಿದನು. ಈ ಗೃಹಸ್ಥನು ನನಗೆ ತನ್ನ ಬಂಗ್ಲೆಯನ್ನು ಇರಲಿಕ್ಕೆ ಕೊಟ್ಟು ಎಷ್ಟು ಉಪಕೃತನನ್ನಾಗಿ ಮಾಡಿರುವನೋ, ಅದರಂತೆಯೇ ರಾಜದರ್ಶನವಾದರೂ ಇವನಿಂದಲೇ ಆದೀತೇನೆಂದು ಡಬ್ಲಿನ್ನನು ತನ್ನಲ್ಲಿಯೇ ತಾನು ಆಲೋಚಿಸುತ್ತ ಕುಳಿತನು. ಇಷ್ಟರಲ್ಲಿ ಅಡುಗೆಯು ಸಿದ್ಧವಾಗಲು, ಅಡಿಗೆಯ ಸಿಪಾಯಿಯು ತಾಟು ಬಡಿಸಿ ತಂದು ಮೇಜಿನ ಮೇಲಿಟ್ಟನು. ಡಬ್ಲಿನ್ನನು ಊಟಮಾಡಹತ್ತಿದನು.

ಇದೇ ಸಮಯಕ್ಕೆ ದೂರದಿಂದ ಬರುವ ಕುದುರೆಯ ಖುರಪುಟಗಳ ಸಪ್ಪಳವು ಕೇಳಹತ್ತಿತು. ಇಷ್ಟರಲ್ಲಿ ಬನಸ್ಸನು ಧಾವಿಸುತ್ತ ಬಂದು:—ಧಣಿಯರೇ, ಆಗಲೆ ದಾರಿಯಲ್ಲಿ ಭೆಟ್ಟಿಯಾಗಿದ್ದ ಆ ಮುಸಲ್ಮಾನನು ಪುನಃ ಬರುತ್ತಿರುವನು, ಎಂದು ನುಡಿಯಲಿಕ್ಕೂ ಆ ಯವನನು ಡಬ್ಲಿನ್ನನೆದುರಿಗೆ ಬಂದು ನಿಲ್ಲಲಿಕ್ಕೂ ಸರಿಹೋಯಿತು.

ಡಬ್ಲಿನ್ನನು ಆಶ್ಚರ್ಯಭರದಿಂದ:—ತಾವು ಯಾರು? ಇಲ್ಲಿಗೇಕೆ ಬಂದಿರುವಿರಿ? ಎಂದು ಪ್ರಶ್ನೆಮಾಡಲು, "ಸಾಹೇಬ, ನನ್ನ ಹೆಸರು ಚಾಂದಖಾ. ವಿಶೇಷ ಕೆಲಸವೇನೂ ಇಲ್ಲ. ತಮ್ಮ ಭೆಟ್ಟಿಗಾಗಿ ಬಂದಿರುತ್ತೇನೆ" ಎಂದು ಅವನು ಉತ್ತರ ಕೊಟ್ಟನು.

ಡಬ್ಲಿನ್ನ:—ಹೀಗೆ ನಾನು ಊಟಕ್ಕೆ ಕುಳಿತ ವೇಳೆಯಲ್ಲಿ ನನ್ನ ಅಪ್ಪಣೆಯು ವಿನಃ ಇಂಗ್ಲಂಡದಲ್ಲಿ ಯಾರಾದರೂ ನನ್ನ ಭೇಟಿಗೆ ಬಂದಿದ್ದರೆ ನಾನು ಅವರನ್ನು ಆಗಿಂದಾಗಲೆ ಹೊರಗೆ ಹಾಕಿಸುತ್ತಿದ್ದೆನು, ಎಂದು ಕ್ರೋಧಭರದಿಂದ ನುಡಿಯಲು,

ಚಾಂದಖಾ:—ಹುಜೂರ, ಕ್ಷಮಿಸಿರಿ; ನಮ್ಮ ಕಾಬೂಲೀ ಪಠಾಣರಲ್ಲಿ ಬೇಕಾದಾಗ ಬೇಕಾದವರಲ್ಲಿಗೆ ಹೋಗಿ ಭೆಟ್ಟಿಯಾಗುವ ಪರಿಪಾಠವಿದೆ. ಅದ್ದರಿಂದ ನಾನು ತಮ್ಮ ಅಪ್ಪಣೆ-ಗಿಪ್ಪಣೆಯ ದಾರೀನೋಡುತ್ತ ಹೊರಗೆ ಕೂಡ್ರಲಿಲ್ಲ.

ಡಬ್ಲಿನ್ನ:—ಅದಿರಲಿ. ಈಗ ನೀನು ನನ್ನ ಭೆಟ್ಟಿಯಾಗುವ ಕಾರಣವಾದರೂ ಏನು?

ಚಾಂದಖಾ:—ಸಾಹೇಬರಿಗೆ ನನ್ನ ವಿಷಯದ ಮಾಹಿತಿಯು ಬೇಕಾಗಿದೆಯೆಂದು ನಾನು ತಿಳಿಯುತ್ತೇನೆ ನಿಜವಾಗಿ ಹೇಳುವದಾದರೆ, ಈ ದಾಸನಿಗೆ ಎಲ್ಲಿಯೂ ಆಶ್ರಯವಿಲ್ಲ; ಹಾಗು ನಿಶ್ಚಿತವಾದ ಯಾವುದೊಂದು ಉದ್ಯೋಗವೂ ಇರುವದಿಲ್ಲ. ನಾನು ಜಾತಿಯಿಂದ ಕಾಬೂಲೀ ಪಠಾಣನಾಗಿದ್ದರೂ ನನ್ನ ಜನ್ಮವು ಮುಲ್ತಾನದಲ್ಲಿ ಆಗಿದೆ. ನನ್ನ ಅಜ್ಜ-ಮುತ್ತಜ್ಜಂದಿರಿಂದ ನಾವು ಈ ದೇಶದಲ್ಲಿಯೇ ಹುಟ್ಟಿ ಬೆಳೆದವರು. ಈ ಏಕಾಕ್ಷ ರಾಜನಾದ ರಣಜಿತಸಿಂಹನು ಯಾವಾಗ ಮುಲ್ತಾನದ ಮೇಲೆ ದಾಳಿಯಿಟ್ಟನೋ, ಆ ಯುದ್ಧದಲ್ಲಿ ನನ್ನ ತಂದೆಯು ಮಡಿದನು. ಮುಲ್ತಾನದ ಅರಸನೂ ಸತ್ತನು. ತದನಂತರ ರಣಜಿತನು ಅಲ್ಲಿಯ ಬಾಲರಾಜನನ್ನು ಸೆರೆಹಿಡಿದು ಆ ಪ್ರಾಂತವನ್ನೆಲ್ಲ ಹಸ್ತಗತಮಾಡಿಕೊಂಡನು. ನಾವು ಮೊದಲಿನಿಂದಲೂ ಮುಲ್ತಾನದ ರಾಜರ ಆಶ್ರಯದಲ್ಲಿದ್ದವಾದ ಕಾರಣ ಆ ಬಾಲರಾಜನೊಡನೆ ಇವನು ನಮ್ಮನ್ನೂ ಸೆರೆಹಿಡಿದು, ಇಲ್ಲಿಗೆ ತಂದನು. ರಣಜಿತನು ಆ ಬಾಲರಾಜನಿಗೆ ಅತ್ಯಲ್ಪ ಉಂಬಳಿಯನ್ನು ಗೊತ್ತುಮಾಡಿರುವದರಿಂದ ಅದರಲ್ಲಿ ಅವನ ಉಪಜೀವಿಕೆ ಸಾಗುವದೇ ಕಠಿಣವಾಗಿರಲು, ನಮ್ಮಂತಹ ಆಶ್ರಯದ ಜನರನ್ನು ಕೇಳುವವರಾರು? ಕಡೆಗೆ ನಾನು ಇಲ್ಲಿ ಸಣ್ಣಪುಟ್ಟ ಕೊಲೆ-ಸುಲಿಗೆ, ದಾರಿ ಬಡಿಯುವದು ಮುಂತಾದ ಉದ್ಯೋಗ ಮಾಡಿ ಉಪಜೀವಿಸಹತ್ತಿರುವೆನು. ಸಾಹೇಬ, ಈ ಶೀಖರು ಮಹಾ ನೀಚರು; ಇವರನ್ನು ಕಂಡರೆ ನನ್ನ ಮೆಯ್ಯು ಉರಿಯುತ್ತಿದೆ. ಇವರನ್ನು ಠಕ್ಕಿಸುವದು, ಹಿಂಸಿಸುವದು, ಸುಲಿಯುವದು ಹಾಗು ಪ್ರಸಂಗ ಬಂದರೆ ಸಂಹರಿಸುವದು ಇವೆಲ್ಲ ನಮ್ಮ ಮುಸಲ್ಮಾನರ ಆದ್ಯಕರ್ತವ್ಯಗಳೇ ಆಗಿವೆಯೆಂದು ನನ್ನ ತಿಳುವಳಿಕೆಯು. ಯಾಕಂದರೆ ಈ ನೀಚರು ನಮ್ಮ ಮುಲ್ತಾನೀರಾಜ್ಯವನ್ನು ಅಪಹರಿಸಿರುತ್ತಾರೆ.

ಈ ಬಗೆಯ ಚಾಂದಖಾನನ ಸಂಗತಿಯನ್ನು ಕೇಳಿ ಡಬ್ಲಿನ್ನನಿಗೆ ಹೇಯವೆನಿಸಿತು. ಈ ಅಪರಿಚಿತ ಗೃಹಸ್ಥನು ನನ್ನೆದುರಿಗೆ ತನ್ನ ಗುಪ್ತಸಂಗತಿಗಳನ್ನು ತಿಳಿಸುವದನ್ನು ನೋಡಿದರೆ ಇವನು ಮಹಾ ಠಕ್ಕನಾದರೂ ಇರಬೇಕು; ಇಲ್ಲವೆ ತೀರ ಹುಚ್ಚನಾದರೂ ಇರಬೇಕು; ಆದುದರಿಂದ ಇಂಥ ಮನುಷ್ಯನನ್ನು ತನ್ನ ಬಳಿಗೆ ಬರಗೊಡುವದು ವಿಹಿತವಲ್ಲೆಂದು ನಿರ್ಧರಿಸಿ ಡಬ್ಲಿನ್ನನು:—ಚಾಂದಖಾ, ಇಂಥ ವ್ಯವಹಾರದಿಂದ ನಿನಗೆ ಲಭಿಸುವದಾದರೂ ಏನು? ಮಹಾರಾಜ ರಣಜಿತಸಿಂಹನು ನಿಮ್ಮಂತಹ ಠಕ್ಕರ ಪಾರುಪತ್ಯ ಮಾಡಲಿಕ್ಕೆ ಅಸಮರ್ಥನಾಗಿರುವನೇನು? ನಿಮ್ಮ ಈ ವಿಚಿತ್ರವೇಷದಿಂದ ನೀವು ಶೀಖರ ಹಾಗೆ ತೋರುತ್ತಿದ್ದರೂ ರಣಜಿತಸಿಂಹನಿಗೆ ನೀವಾರೆಂಬುದು ತಿಳಿಯಲಿಕ್ಕೆ ತಡವಾಗಬಹುದೆ? ನೀವು ಶೀಖರನ್ನು ಹೀಗೆ ಹಿಂಸಿಸುವದರಿಂದ ನಿಮಗೆ ಪ್ರಯೋಜನವೇನು? ಕಾಫರರನ್ನು ಹಿಂಸಿಸುವದೇ ನಿಮ್ಮ ಕರ್ತವ್ಯವೆಂದು ನೀವು ಅನ್ನಬಹುದು; ಆದರೆ ಪ್ರತಿಯೊಬ್ಬ ಪ್ರಾಣಿಯೂ, ಆ ದಯಾಘನ ಪರಮೇಶ್ವರನಿಂದಲೇ ಜನ್ಮತಾಳಿದವನಾದ್ದರಿಂದ, ಒಬ್ಬ ಪ್ರಾಣಿಯು ಮತ್ತೊಬ್ಬ ಪ್ರಾಣಿಯನ್ನು ಹಿಂಸಿಸಲೆತ್ನಿಸುವದೆಂದರೆ, ಅಪರೋಕ್ಷವಾಗಿ ಆ ತನ್ನ ಜೀವನದಾತೃ ಪರಮೇಶ್ವರನನ್ನೇ ಹಿಂಸಿಸಲೆತ್ನಿಸಿದ ಹಾಗಾಗುವದಿಲ್ಲವೆ? ಚಾಂದಖಾ, ಇನ್ನು ನೀವು ನಿಮ್ಮ ಈ ಹಿಂಸಾವ್ರತವನ್ನು ಬಿಟ್ಟು ಬಿಡಿರಿ ನನ್ನ-ನಿಮ್ಮಲ್ಲಿ ಪೂರ್ವಪರಿಚಯವೇನೂ ಇರದಿರಲು, ನೀವು ನಿಮ್ಮ ಕೇವಲ ಗುಹ್ಯಗಳನ್ನು ನನ್ನೆದುರಿಗೆ ತಿಳಿಸುವದರಿಂದ ನಿಮಗಾಗುವ ಪ್ರಯೋಜನವು? ಇದರಿಂದ ನಿಮಗೆ ಪ್ರಯೋಜನವಂತೂ ಆಗದೇ ಆಗದು; ಆದರೆ ನಿಮ್ಮ ಘಾತವೇ ಆಗುವ ಸಂಭವವು ಹೆಚ್ಚು. ಆದ್ದರಿಂದ ನೀವು ಹೀಗೆ ಬೇರೆ ಯಾರ ಮುಂದೂ ಹೇಳಹೋಗಬೇಡಿರಿ. ಈಗ ನೆಟ್ಟಗೆ ಮನೆಗೆ ಹೋಗಿರಿ; ಹಾಗು ಮತ್ತೆ ಯಾವಾಗಾದರೂ ನನ್ನ ಭೆಟ್ಟಿಗೆ ಬರುವದಾದರೆ, ಇಂಥ ಅಭದ್ರ ಭಾಷಣ ಮಾಡುವದಕ್ಕಾಗಿ ನನ್ನ ಹತ್ತರ ಬರದೆ, ಮತ್ತಾವ ನಿಮ್ಮ ಕೆಲಸಗಳಿದ್ದರೆ ಬರುತ್ತಬರ್ರಿ, ಎಂದು ಹೇಳಿದನು.

ಚಾಂದಖಾನನು ಪಶ್ಚಾತ್ತಾಪದ ದನಿಯಿಂದ:—ಹುಜೂರ, ತಾವು ಅಂದ ಮಾತುಗಳೆಲ್ಲವೂ ನನಗೆ ರುಚಿಸಿದವು. ನಾನು ಇನ್ನು ನನ್ನ ವೃತ್ತಿಯನ್ನು ಸುಧಾರಿಸಿಕೊಳ್ಳುವೆನು. ನಿಮ್ಮ ಫಿರಂಗಿಜಾತಿಯು ಈ ಶೀಖರಂತೆ ಹರಾಮಖೋರವಲ್ಲ. ಅಂತೇ ನಾನು ನನ್ನ ಇಂಗಿತವನ್ನು ನಿಮಗೆ ತಿಳಿಸಿದೆನು. ಹುಜೂರ, ತಮ್ಮ ಸುಪ್ರಸನ್ನ ಮುಖಚರ್ಯೆ, ತೇಜಸ್ವಿಯಾದ ನೇತ್ರ ಇವುಗಳನ್ನು

ನೋಡಲು ಹುಜೂರರು ಕೈಕೊಂಡ ಪ್ರತಿಯೊಂದು ಕೆಲಸದಲ್ಲಿ ಯಶಸ್ಸು ದೊರ ಕೇ ದೊರೆಯುವದೆಂದು ಖಾತ್ರಿಯಾಗುತ್ತದೆ. ತಾವು ಈ ದೇಶಕ್ಕೆ ತೀರ ಹೊಸ ಬರು. ತಮಗೆ ಇಲ್ಲಿಯ ಮಾಹಿತಿಯಿಲ್ಲ. ಆದುದರಿಂದ ತಾವು ಇಲ್ಲಿಯ ನೀಚ ಶೇಖರ ಬಲೆಯಲ್ಲಿ ಸಿಕ್ಕು ಹಾನಿಗೆ ಗುರಿಯಾಗಬಾರದೆಂಬದನ್ನು ತಿಳಿಸುವ ಉದ್ದೇಶದಿಂದಲೇ ನಾನು ಎಲ್ಲಕ್ಕೂ ಮೊದಲು ತಮ್ಮ ಭೆಟ್ಟಿಗೆ ಬಂದೆನು. ಸಾಹೇಬರು ನನಗೆ ಸಹಾಯ ಮಾಡಿದರೆ, ಈ ರಣಜಿತಸಿಂಹನನ್ನು ಹಾ ಹಾ ಅನ್ನುವಷ್ಟರಲ್ಲಿ ನಿರ್ನಾಮ ಮಾಡಿಬಿಡುವೆನು, ಎಂದೆನ್ನಲು,

ಡಬ್ಲಿನ್ನನು ಅವನನ್ನು ಹೆಚ್ಚು ಮಾತಾಡಗೊಡದೆ:—ಚಾಂದಖಾ, ನೀನು ಈ ತರದ ಅಪ್ರಯೋಜಕ ಸಲಹೆಯನ್ನು ಕೊಡುವದಕ್ಕಾಗಿಯೇ ನನ್ನ ಬಳಿಗೆ ಬಂದಿರುವೆಯೇನು? ಖಬರದಾರ್, ಈ ಬಗ್ಗೆ ಇನ್ನು ಮಾತಾ ಡಿದೆಯೆಂದರೆ.

ಚಾಂದಖಾ:—ಕ್ಷಮಿಸಿರಿ ಸಾಹೇಬ, ಹುಜೂರರಿಗೆ ನನ್ನ ಅಂಬೋ ಣವು ರುಚಿಸದಿದ್ದರೆ ರುಚಿಸದಿರಲಿ; ಆದರೆ ನನ್ನ ಗುಹ್ಯವನ್ನಂತೂ ಗುಪ್ತವಾಗಿಡ ಬಲ್ಲಿರಷ್ಟೇ? ಎಂದು ನುಡಿಯುತ್ತಿರಲಿಕ್ಕೆ, ಬಟ್ಲರನು ಧಾವಿಸುತ್ತ ಬಂದು ಡಬ್ಲಿನ್ನನನ್ನು ಕುರಿತು:—ಧಣಿಯರೇ, ಹೊರಗೆ ಯಾರೋ ಸರದಾರೀರೀತಿಯ ಗೃಹಸ್ಥರೊಬ್ಬರು ಬಂದಿರುತ್ತಾರೆ. ತಮ್ಮ ಭೆಟ್ಟಿಗೆ ಆತುರರಾಗಿರುತ್ತಾರೆ, ಎಂದು ತಿಳಿಸಿದನು.

ಕೂಡಲೆ ಡಬ್ಲಿನ್ನನು ತನ್ನ ಊಟವನ್ನು ಮುಗಿಸಿ, ಅವರನ್ನು ಕರೆಕಳು ಹಿದನು. ಆ ಆಗಂತುಕ ಗೃಹಸ್ಥನ ಬರುವಿಕೆಯನ್ನು ಕಂಡು ಚಾಂದಖಾನನು ಡಬ್ಲಿನ್ನನ ಕಣ್ಣುಸಂಜ್ಞೆಯ ಮೇರೆಗೆ ಅಲ್ಲಿಂದ ಹೊರಟು ಹೋದನು.

ಬಂದ ಆಗಂತುಕನು ಆ ಬಂಗ್ಲೆಯ ಮಾಲಿಕನಾದ ಫಕೀರ ಅಜೀಜುದ್ದೀ ನನ ತಮ್ಮನಾದ ಕಾಲೀಫಾ ನೂರುದ್ದೀನನು. ಅವನ ಮುಖಚರ್ಯೆಯಿಂದಲೇ ಅವನೊಳ್ಳೇ ಸುಶೀಲನಿರುವಂತೆ ತೋರುತ್ತಿತ್ತು. ನೂರುದ್ದೀನನು ಡಬ್ಲಿನ್ನನ ಬಳಿಯಲ್ಲಿ ಕುಳಿತು, ಅವನಿಗೆ ಆ ಲಾಹೋರದರ್ಬಾರದ ಸಂಗತಿಗಳನ್ನೆಲ್ಲ ಚೆನ್ನಾಗಿ ವಿವರಿಸಿ ತಿಳಿಸಿದನು. ಆತನ ಮಿಷ್ಟಭಾಷಣ, ಸರಳವರ್ತನ ಇವುಗಳ ಪರಿಣಾ ಮವು ಡಬ್ಲಿನ್ನನ ಮೇಲೆ ಚೆನ್ನಾಗಿ ಆಯಿತು. ಡಬ್ಲಿನ್ನನ ತಾರತಮ್ಯಭಾವ, ವಾಕ್‌ಪಾಂಡಿತ್ಯ, ಸಮಯಸೂಚಕತೆ, ಮಿತಭಾಷಣ, ಮರ್ಯಾದೆಯುಕ್ತ ಆಚರಣ ಇವುಗಳು ನೂರುದ್ದೀನನನ್ನು ಪ್ರಸನ್ನೀಕರಿಸಿದವು. ಅನೇಕ ವಿಷಯ

ಗಳ ಬಗ್ಗೆ ಅವರಿಬ್ಬರಲ್ಲಿ ಸಂಭಾಷಣವಾದನಂತರ ನೂರುದ್ದೀನನು ಡಬ್ಲಿನ್ನನನ್ನು ರಣಜಿತಸಿಂಗನಿಗೆ ಭೇಟಿಮಾಡಿಸುವದಾಗಿ ಅಭಿವಚನ ಕೊಟ್ಟು ಹೊರಟು ಹೋದನು.

ಮುಂದೆ ೨-೩ ದಿನಗಳು ಕಳೆದನಂತರ ಒಂದುದಿನ ಬೆಳಗಿನಲ್ಲಿ ಡಬ್ಲಿನ್ನನು ಕುದುರೆಯನ್ನೇರಿ ಸಜ್ಜಾದನು. ಆ ದಿನ ಅವನಿಗೆ ದರ್ಬಾರಕ್ಕೆ ಬರಲಿಕ್ಕೆ ಆಮಂತ್ರಣವಿದ್ದಿತು. ಬನ್ನೂ-ಧನ್ನೂರಿಗೆ ಆ ಸಂಗತಿಯನ್ನು ಇವನು ಪೂರ್ವ ದಿನರಾತ್ರಿಯಲ್ಲೇ ತಿಳಿಸಿದ್ದರಿಂದ ಅವರು ಇವನಿಗಿಂತ ಮೊದಲೇ ಎದ್ದು ತಮ್ಮ ಎಲ್ಲ ಜನರೊಡನೆ ಸಜ್ಜಾಗಿದ್ದರು. ಬನ್ನೂನು ಇಂಗ್ಲಿಷ ದಂಡಿನೊಳಗಿನ ಸುಭೇದಾರನ ಉಡುಪು-ತೊಡಪುಗಳನ್ನೂ, ಧನ್ನೂನು ಹವಾಲದಾರನ ತೊಡಪು ಗಳನ್ನೂ ಧರಿಸಿದ್ದರು. ಎಲ್ಲ ಸಿದ್ಧತೆಯಾದ ನಂತರ ಡಬ್ಲಿನ್ನನು ತನ್ನ ದಂಡಿನ ಕವಾಯತು ಮಾಡಿಸಿ, ಸಾವಧಾನದಿಂದ ವರ್ತಿಸುವ ಬಗ್ಗೆ ಅವರಿಗೆ ಸೂಚಿಸಿ ಅವರೆಲ್ಲರೊಡನೆ ಲಾಹೋರಕ್ಕೆ ನಡೆದನು. ಆವನು ದರ್ಬಾರದ ಕಡೆಗೆ ನಡೆದಿ ರಲು, ಬಲಗಡೆಯಿಂದ ಅವನ ಕಡೆಗೆ ಬರುತ್ತಿರುವ ಕೆಲವು ಸ್ವಾರರು ಅವನಿಗೆ ಕಂಡರು. ಆ ಸ್ವಾರರ ಹಿಂದೆ ಛತ್ರ-ಚಾಮರಗಳನ್ನು ಹಿಡಿದಂಥ ಕೆಲವು ಶ್ರೀಮಂತ ಸರದಾರರು ಬರುತ್ತಿರುವದನ್ನು ಕಂಡು ಡಬ್ಲಿನ್ನನು ವಿಸ್ಮಯಗೊಂ ಡನು. ಆ ಜನರು ಹತ್ತರ ಬಂದ ಕೂಡಲೆ ಇವನು ತನ್ನ ಜನರಿಗೆ ಸೂಚಿಸಲು ಅವರೆಲ್ಲರೂ ಸಾಲಾಗಿ ನಿಂತುಕೊಂಡರು. ಅಷ್ಟರಲ್ಲಿ ಪಕ್ಕದಿಂದ ಬರುವ ಆ ಕುದುರೆಯ ಸವಾರರು ಮುಂದಕ್ಕೆ ಹೊರಟು ಹೋದರು. ಅವರ ಹಿಂದಿನಿಂದ ಸರದಾರರ ಸಮೂಹವು ಬರತೊಡಗಿತು. ಸರದಾರರಲ್ಲಿಯ ಪ್ರತಿಯೊಬ್ಬನೂ ಬಹು ಮೂಲ್ಯವಾದ ಚಿತ್ರವಿಚಿತ್ರ ಬಣ್ಣದ ಪೋಷಾಕು ಧರಿಸಿದ್ದನು. ಅವರ ತಲೆಯ ಮೇಲೆ ಅವರವರ ಸೇವಕರು ರೇಶಿಮೆಯ ಛತ್ರಗಳನ್ನು ಧರಿಸಿದ್ದರು. ಅವರೆಲ್ಲರ ಮಧ್ಯದಲ್ಲಿ ಒಬ್ಬ ತೀರ ಸಾದಾ ಪೋಷಾಕಿನವನ ಬಹುಮೂಲ್ಯವಾದ ಕುದುರೆಯು ಬಂದಿತು. ಇವನೇ ರಣಜಿತಸಿಂಹನಿರಬಹುದೆಂದು ತರ್ಕಿಸಿ, ಡಬ್ಲಿನ್ನನು ಅವನನ್ನು ಅಭಿವಂದಿಸಿದನು; ಕೂಡಲೆ ಇವನ ಸೈನಿಕರೂ ಮುಜುರೆ ಮಾಡಿದರು. ಆ ಗೃಹಸ್ಥನು ತುಸ ಆಶ್ಚರ್ಯತೆಯಿಂದಲೇ ತಲೆಯಲ್ಲಾ ಡಿಸಿ ಇವನ ಕಡೆಗೆ ನೋಡಿದನು. ಇಷ್ಟರಲ್ಲಿ ಅವರೆಲ್ಲರ ಕುದುರೆಗಳೂ ಹೊರಟು ಹೋದವು.

ಬಳಿಕ ಡಬ್ಲಿನ್ನನು ತನ್ನ ಸೈನಿಕರಿಗೆ ಮತ್ತೆ ಮೊದಲಿನಂತೆ ಅಪ್ಪಣೆ

ಕೊಡಲು, ಅವರು ಅವನ ಹುಕುಮಿನಂತೆ ಸಾಗಿದರು. ಕೆಲಕ್ಷಣಗಳಲ್ಲಿಯೇ ಅವರೆಲ್ಲರೂ ಆ ಲಾಹೋರ ಪಟ್ಟಣದ ಮಧ್ಯಭಾಗದಲ್ಲಿದ್ದ ಸಾಲಿಮಾರ ಬಾಗ ಎಂಬ ವಿಸ್ತೃತವಾದ ಉದ್ಯಾನಕ್ಕೆ ತೆರಳಿದರು. ರಣಜಿತನು ತನ್ನ ದರ್ಬಾರದ ಎಲ್ಲ ಇಮಾರತುಗಳನ್ನು ಆ ಸಾಲಿಮಾರ ಬಾಗಿನಲ್ಲಿಯೇ ಕಟ್ಟಿಸಿದ್ದನು. ಆ ಇಮಾರತುಗಳು ಅಷ್ಟೊಂದು ರಮಣೀಯವಾಗಿರದಿದ್ದರೂ ಭವ್ಯವೂ, ವಿಶಾಲವೂ ಆಗಿದ್ದವು. ರಣಜಿತಸಿಂಹನ ಕಾಲದ ಆ ಪ್ರಖ್ಯಾತವಾದ ಸಾಲಿಮಾರ ಬಾಗ (ಉದ್ಯಾನ)ವೂ ಅದರೊಳಗಿನ ಹಲಕೆಲವು ಇಮಾರತುಗಳೂ ಆ ಲಾಹೋರದಲ್ಲಿ ಈಗಲೂ ಹರಕು-ಮುರಕ ಸ್ಥಿತಿಯಲ್ಲಿ ಪ್ರೇಕ್ಷಕರ ಕಣ್ಣಿಗೆ ಬೀಳುತ್ತವೆ.

ರಣಜಿತಸಿಂಹನು ಆ ಉದ್ಯಾನದ ಸಮೀಪಕ್ಕೆ ಬರಲು, ಅವನ ಮುಂದೆ ನಡೆದಿದ್ದ ಸ್ವಾರರು ಇಬ್ಭಾಗವಾಗಿ ಸರಿದು ನಿಂತು ಅವನಿಗೂ ಅವನ ಸರದಾರರಿಗೂ ಒಳಗೆ ಹೋಗಗೊಟ್ಟರು ಅವರೆಲ್ಲರೂ ಹೊರಟು ಹೋದನಂತರ ಆ ಸ್ವಾರರ ದಂಡು ಮತ್ತೆ ಮೊದಲಿನಂತೆ ಒಟ್ಟುಗೂಡಿ ಆ ಉದ್ಯಾನದ ಬಾಗಿಲದಲ್ಲಿ ಪಹರೆ ಮಾಡುತ್ತ ನಿಂತಿತು. ಅದರಿಂದ ಅವರ ಹಿಂದಿನಿಂದ ಬರುತ್ತಿದ್ದ ಡಬ್ಲಿನ್ನನ ಜನರು ಉದ್ಯಾನದ ಹೊರಗೆ ನಿಂತು ರಾಜನ ಆವ್ಹಾನವನ್ನು ನಿರೀಕ್ಷಿಸತೊಡಗಿದರು.

ಡಬ್ಲಿನ್ನನ ಜನರ ರೀವು, ಅವರ ಒಂದೇ ಬಣ್ಣದ ಪೋಷಾಕು, ಸುಸಜ್ಜಾದ ಶಸ್ತ್ರಾಸ್ತ್ರ ಇವುಗಳನ್ನು ಕಂಡ ಅಲ್ಲಿಯ ಬಹು ಜನರು ಆಶ್ಚರ್ಯಭರಿತರಾಗಿದ್ದರು; ಆದರೆ ಕೆಲ ಅಸೂಯದ ಅಧಿಕಾರಿಗಳು ತಮ್ಮ ಮೂಲ ಸ್ವಭಾವದಂತೆ ಅವನನ್ನು ದ್ವೇಷಿಸಿ, ಅವನ ಚೇಷ್ಟೆಮಾಡತೊಡಗಿದರು. ಹೀಗೆ ದ್ವೇಷಮಾಡುವವರಲ್ಲಿ ನಂದಸಿಂಹನೆಂಬ ಹೆಸರಿನ ರಣಜಿತಸಿಂಹನ ಸ್ವಾರರ ದಂಡಿನ ಮುಖ್ಯಸ್ತನು ಪ್ರಮುಖನಾದನು. ಅವನು ಡಬ್ಲಿನ್ನನಿಗೆ ಹಿಂದೀ ಭಾಷೆಯಲ್ಲಿ ಬೇಕು-ಬೇಕಾದ ಹಾಗೆ ಬೊಗಳುತ್ತ, ತನ್ನ ಕುದುರೆಯನ್ನು ಇವನಿಗೆ ಪ್ರದಕ್ಷಿಣಾಕಾರವಾಗಿ ತಿರುಗಿಸ ಹತ್ತಿದನು. ಅದನ್ನು ಕಂಡ ಅವನಂತಹ ಸ್ವಭಾವದ ಪ್ರೇಕ್ಷಕರಿಗೆ ಹುರುಪು ಬಂದು ಅವರೂ ಚಪ್ಪಾಳಿ ಬಾರಿಸಿ-ಬಾರಿಸಿ ಡಬ್ಲಿನ್ನನನ್ನೂ, ಅವನ ಜನರನ್ನೂ ಉಪಹಾಸ ಮಾಡಲಾರಂಭಿಸಿದರು. ಅವರ ಈ ನಿಂದ್ಯ ಪ್ರಕಾರವನ್ನು ಕಂಡು ಡಬ್ಲಿನ್ನನಿಗೆ ಬಲು ತ್ವೇಷವುಂಟಾಯಿತು. ಆದರೆ ಮಾಡುತ್ತಾನೇನು? ತಾನು ಇಲ್ಲಿಗೆ ಬಂದ ಕೆಲಸವೇನು, ಸಮಯವಾವುದು ಮುಂತಾದವುಗಳ ಕಡೆಗೆ ಲಕ್ಷ್ಯಗೊಟ್ಟು ಅವನು ಆ ಅವಮಾನವನ್ನು

ಕೆಲಕ್ಷಣಗಳ ವರೆಗೆ ಸಹಿಸಿಕೊಂಡನು; ಆದರೆ ಬರಬರುತ್ತ ನಂದಸಿಂಹನ ನೀಚತನವು ಹೆಚ್ಚಾಯಿತು. ಆಗ ಡಬ್ಲಿನ್ನನು ಮನಸ್ಸಿನಲ್ಲಿ ವಿಚಾರ ಮಾಡಿದು ದೇನಂದರೆ:—ಹೀಗೆ ಈ ಕ್ಷುಲ್ಲಕನಿಂದ ಅವಮಾನಗೊಂಡು ಸುಮ್ಮನಿರುವದು ಯೋಗ್ಯವಲ್ಲ. ಈಗ ಇವನಿಗೆ ಪ್ರತೀಕಾರ ಮಾಡಿದರೆ ಮುಂದಿನ ನನ್ನ ಕೆಲ ಸಕ್ಕೆ ವ್ಯತ್ಯಯುವುಂಟಾಗುವ ಸಂಭವವಿದ್ದರೂ, ಮನುಷ್ಯತ್ವವನ್ನು ಕಳಕೊಂಡು ರಣಜಿತಸಿಂಹನಿಂದ ಸತ್ಕಾರ ಹೊಂದುವದಕ್ಕಿಂತ, ಇವನಿಗೆ ಮೊದಲು ಚೆನ್ನಾಗಿ ಕೈ ತೋರಿಸಿ, ಆ ಮೇಲೆ ಸಾಧಿಸಿದರೆ ರಣಜಿತನಲ್ಲಿ ಇರಬೇಕು; ಇಲ್ಲದಿದ್ದರೆ ಈ ದೇಶಬಿಟ್ಟು ಹೋಗಬೇಕು. ಹೀಗೆ ಯೋಚಿಸಿ, ಅವನು ತನ್ನ ಸುತ್ತಲೂ ಕುದುರೆ ತಿರುಗಿಸುತ್ತಿದ್ದ ನಂದಸಿಂಹನನ್ನು ಕುರಿತು:—ನನ್ನ ಕುದುರೆಗೆ ಒಂದು ಕೆಟ್ಟ ಚಟವಿದೆ. ಇದರ ಹತ್ತರ ಮತ್ತೊಂದು ಕುದುರೆ ಬಂದರೆ ಇದು ತನ್ನ ಹಿಂಗಾಲುಗಳಿಂದ ಹಾರಿ ಒದೆಯುವದು. ಆದರಿಂದ ಜೋಕೆ, ಎಂದು ತಿಳಿಸಿದನು.

ಆದರೂ ನಂದಸಿಂಹನು ಅತ್ತ ಲಕ್ಷ್ಯಗೊಡದೆ ತನ್ನ ನಿಂದ್ಯಕೃತ್ಯವನ್ನು ನಡಿಸಿಯೇ ಇದ್ದನು. ನಂದಸಿಂಹನ ಕುದುರೆಯು ಡಬ್ಲಿನ್ನನ ಬಲೂನದ ಹಿಂದೆ ಬರಲಿಕ್ಕೂ, ಡಬ್ಲಿನ್ನನು ತನ್ನ ಕುದುರೆಗೆ ಯಾರಿಗೂ ತಿಳಿಯದ ಹಾಗೆ ಸಂಜ್ಞೆ ಮಾಡಲಿಕ್ಕೂ ಗಂಟೇ ಬಿದ್ದಿತು. ಕೂಡಲೆ ಅದು ತನ್ನ ಎರಡೂ ಹಿಂಗಾಲುಗಳ ನ್ನೆತ್ತಿ ನಂದಸಿಂಹನ ಕುದುರೆಗೆ ಕಸುವಿನಿಂದ ಒದೆಯಿತು. ಅದರಿಂದ ವೇಗ ದಲ್ಲಿದ್ದ ಆ ಕುದುರೆಯು ಒಮ್ಮೆಲೆ ನೆಲಕ್ಕುರುಳಿತು. ಅಸಾವಧಾನತೆಯಿಂದಲೂ ಶಾಠ್ಯತೆಯಿಂದಲೂ ಕುಳಿತಿದ್ದ ನಂದಸಿಂಹನು ಆ ಕುದುರೆಯ ಕೆಳಗೆ ಬಿದ್ದನು; ಕುದುರೆಯು ಅವನ ಮೈಮೇಲೆ ಬಿದ್ದಿತು!

ಹೀಗೆ ನಂದಸಿಂಹನು ಬಿದ್ದೊಡನೆ ನೆರೆದ ಜನರೆಲ್ಲರೂ "ಯೋಗ್ಯವಾ ಯಿತು-ಯೋಗ್ಯವಾಯಿತು" ಎಂದು ಚಪ್ಪಾಳೆ ಬಾರಿಸಿ, ನಂದಸಿಂಹನನ್ನು ನೋಡಿ ನಗಹತ್ತಿದರು. ಯಾವ ಜನರು ಈ ವರೆಗೆ ನಂದಸಿಂಹನ ಆ ನಿಂದ್ಯ ಪ್ರಕಾರಕ್ಕೆ ಉತ್ತೇಜನ ಕೊಡುತ್ತಿದ್ದರೋ, ಈಗ ಅವರು ಕೂಡ ನಂದಸಿಂಹ ನನ್ನೇ ಬೊಗಳಹತ್ತಿದರು. ಈ ಪ್ರಕಾರದಿಂದ ನಂದಸಿಂಹನಿಗೆ ಬಲು ಕೆಡಕೆನಿ ಸಿದರೂ, ಅವನ ಅಂತರಂಗದೊಳಗಿನ ಡಬ್ಲಿನ್ನನ ವಿಷಯದ ದ್ವೇಷ-ಅಸೂಯೆ ಗಳು ಮಾತ್ರ ಕೊಂಚಮಾತ್ರಕ್ಕೂ ಕಡಿಮೆಯಾಗಲಿಲ್ಲ; ಅವು ಮೊದಲಿಗಿಂತ ಇಮ್ಮಡಿಸಿದವು ಮಾತ್ರ. ಕೂಡಿದ ಜನರೆಲ್ಲರೂ ನಗುತ್ತಿರುವಾಗ ಡಬ್ಲಿನ್ನನು ತನ್ನ ಕುದುರೆಯಿಂದಿಳಿದು, ನಂದಸಿಂಹನ ಬಳಿಗೆ ಹೋಗಿ:—"ನಾನು ನಿಮಗೆ

ಮೊದಲೇ ಸೂಚಿಸಿರಲಿಲ್ಲವೇ, ನನ್ನ ಕುದುರೆಯು ಖೊಟ್ಟಿಯಿದೆಯೆಂದು?'' ಎಂದವನೇ, ಅವನ ರಕೀಪಿನೊಳಗಿನ ಕಾಲನ್ನು ತೆಗೆದು, ಅವನನ್ನು ಕುದುರೆಯ ಕೆಳಗಿಂದ ಜಗ್ಗಿಕೊಂಡು ನಿಲ್ಲಿಸಿ, ತನ್ನ ಕರವಸ್ತ್ರದಿಂದ ಅವನ ಅಂಗಿಯ ಮೇಲಿನ ಧೂಳವನ್ನು ಕೊಡವಿದನು. ಡಬ್ಲಿನ್ನನ ಈ ಸಮಯಸೂಚಕತೆಯನ್ನು ಕಂಡು ನಂದಸಿಂಹನ ವಿರುದ್ಧ ಪಕ್ಷದ ಜನರು ಒಳ್ಳೇ ಉತ್ತೇಜಿತ ಸ್ವರದಿಂದ:— ಶಾಬಾಸ್, ಫಿರಂಗೀ ಶಾಬಾಸ್! ವೈರಿಯ ಮೇಲೂ ದಯೆ ತೋರಿಸುವ ನಿನ್ನ ಈ ಸದ್ಗುಣಗಳಿಂದ ನೀನು ಬೇಗನೆ ಉತ್ತಮ ಪದವಿಯನ್ನೈದುವದು ಖಂಡಿತವು! ಎಂದು ಅವನನ್ನು ಹೊಗಳಿದರು.

ಹೀಗೆ ಡಬ್ಲಿನ್ನನು ನೆರೆದ ಜನ ಸಮೂಹದಿಂದ ಪ್ರಶಂಸೆಯನ್ನು ಪಡೆಯುತ್ತಿರುವಾಗ, ರಣಜಿತಸಿಂಹನ ದರ್ಬಾರದ ದರೋಗನು ಇವನೆಡೆಗೆ ಬಂದು:— ಸಾಹೇಬ, ನಿಮ್ಮನ್ನು ಮಹಾರಾಜರು ಕರೆಯುತ್ತಿರುವರು, ಬನ್ನಿರಿ, ಎಂದು ಕರೆದನು. ಒಡನೆಯೇ ಡಬ್ಲಿನ್ನನು ತನ್ನ ಕುದುರೆಯನ್ನು ತನ್ನ ಸೇವಕನ ಕೈಗೆ ಕೊಟ್ಟು, ತನ್ನ ತಲೆಯ ಮೇಲಿನ ಟೊಪ್ಪಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ದರ್ಬಾರ ಗೃಹವನ್ನು ಪ್ರವೇಶಿಸಿದನು.

ರಣಜಿತಸಿಂಹನ ದರ್ಬಾರ ಗೃಹವು ಭವ್ಯವೂ ವಿಶಾಲವೂ ಆಗಿತ್ತೇನೋ ನಿಜ; ಆದರೆ ಅದರ ದರ್ಶನದಿಂದ ನಮ್ಮ ಡಬ್ಲಿನ್ನನಿಗೆ ಆಶ್ಚರ್ಯ-ವಿಸ್ಮಯಗಳೇನೂ ಉಂಟಾಗಲಿಲ್ಲ. ಯಾಕಂದರೆ ಅವನು ಈ ಮೊದಲೇ ಇಂತಹ ಎಷ್ಟೋ ದರ್ಬಾರ ಗೃಹಗಳನ್ನು ಹೊಕ್ಕು ಬಂದವನಾಗಿದ್ದನು. ಮೇಲಾಗಿ ರಣಜಿತಸಿಂಹನ ಆ ದರ್ಬಾರ ಗೃಹವು ಶೃಂಗಾರ ಸಾಮಗ್ರಿಗಳಿಂದ ಕೇವಲ ಅಲಿಪ್ತವಾಗಿತ್ತು. ಯಾವ ರಣಜಿತಸಿಂಹನು ತನ್ನ ಸ್ವಂತದ ಪೋಷಾಕನ್ನು ಕೂಡ ಅಷ್ಟು ಸಾದಾ ಇಡುತ್ತಿದ್ದನೋ, ಅವನು ತನ್ನ ಸಭಾಗೃಹದ ಶೃಂಗಾರಕ್ಕೆ ಮನಸ್ಸು ಮಾಡುವನೇ? ಅದೊಂದು ಸರ್ವ ಸಾಮಾನ್ಯವಾದ ಕಚೇರಿಯಂತೆ ತೋರುತ್ತಿತ್ತು. ಅಲ್ಲಿಯ ನೆಲಕ್ಕೆ ಉತ್ತಮವಾದ ಜಮಖಾನೆಗಳು ಹಾಸಲ್ಪಟ್ಟಿದ್ದವು. ಅವುಗಳ ಮೇಲೆ ಸಾಲು ಸಾಲಾಗಿ ಕುಳಿತ ಕಾರಕೂನ ಜನರು ಒತ್ತರದಿಂದ ಏನನ್ನೋ ಬರೆಯುತ್ತಿದ್ದರು. ರಣಜಿತಸಿಂಗನು ತನ್ನ ದರ್ಬಾರನ್ನು ಬಹುಶಃ ಪ್ರತಿನಿತ್ಯ ಮುಂಜಾನೆ ನೆರಿಸುತ್ತಿದ್ದನು. ಪೂರ್ವ ರಾತ್ರಿಯಲ್ಲಿ ತಾನು ತನ್ನ ರಾಜ್ಯಾಧಾಳಿತದ ಸಂಬಂಧವಾಗಿ ಯೋಜಿಸಿಟ್ಟ ಹುಕುಮುಗಳನ್ನು ಅವನು ದರ್ಬಾರಕ್ಕೆ ಬಂದ ಕೂಡಲೆ ಕಾರಕೂನರ ಮುಖ್ಯಸ್ಥನಿಗೆ ತಿಳಿಸುತ್ತಿದ್ದನು. ಅವನು

ಆ ಹುಕುಮಿನ ಪ್ರತಿಗಳನ್ನು ಕಾರಕೂನರಿಂದ ಬರೆದು ತಯಾರಿಸಿ, ಮಹಾರಾಜರ ಮೊಹರು ಮಾಡಿಸಿ, ಸ್ವಾರರ ಮುಖಾಂತರ ದೇಶದೊಳಗಿನ ಅಧಿಕಾರಿಗಳಿಗೆಲ್ಲ ಕಳಿಸುತ್ತಿದ್ದನು. ಅದೇ ಪ್ರಕಾರ ಡಬ್ಲಿನ್ನನು ದರ್ಬಾರಕ್ಕೆ ಹೋದ ದಿನವೂ ನಡೆದಿತ್ತು.

ಕಾರಕೂನರ ಹಿಮ್ಮಗ್ಗಲಿನಲ್ಲಿ ಬೆಲೆಯುಳ್ಳ ರತ್ನಗಂಬಳಿಗಳು ಹಾಸಲ್ಪಟ್ಟಿದ್ದವು. ಅವುಗಳ ಮೇಲೆ ದರ್ಬಾರದೊಳಗಿನ ಸರದಾರರೂ ಶ್ರೀಮಂತರೂ ಕುಳಿತಿದ್ದರು. ಅದಕ್ಕೂ ಹಿಂದಿನ ಕೆಲವು ಭವ್ಯವಾದ ಆಸನಗಳ ಮೇಲೆ ದರ್ಬಾರದೊಳಗಿನ ಪ್ರಮುಖ ಮಂತ್ರಿಗಳು ಕುಳಿತಿದ್ದರು. ಅವರ ಪಕ್ಕದಲ್ಲಿ ಅವರವರ ಹುಜುರೆಗಳು ನಿಂತುಕೊಂಡು, ಬೀಸಣಿಕೆಗಳಿಂದ ತಮ್ಮ ತಮ್ಮ ಒಡೆಯರಿಗೆ ಗಾಳಿ ಬೀಸುತ್ತಿದ್ದರು.

ಆ ಮಂತ್ರಿಗಳ ಮಧ್ಯದಲ್ಲಿಯ ಒಂದು ಆಸನದ ಮೇಲೆ ಸ್ವತಃ ರಣಜಿತಸಿಂಹನು ಕುಳಿತಿದ್ದನು. ಅವನ ಪೋಷಾಕಿನಂತೆ ಆತನಿಗಾಗಿ ಮಂಡಿಸಿದ್ದ ಸಿಂಹಾಸನವಾದರೂ ತೀರ ಸಾದಾತರದ್ದಾಗಿತ್ತು; ಆದರೆ ಅದು ಬಹಿರಂಗದಲ್ಲಿ ತೋರುವಷ್ಟು ಕಡಿಮೆ ಕ್ರಯದ್ದಾಗಿರಲಿಲ್ಲ. ಅದು ಬಹುಮೂಲ್ಯವಾಗಿತ್ತೆಂಬದಕ್ಕೆ ಸಂದೇಹವಿರಲಿಲ್ಲ. ಸಿಂಹಾಸನದ ಎಡಬಲಗಳಲ್ಲಿ ಎರಡು ಆಸನಗಳು ಇದ್ದು, ಅವು ಆಗ ತೆರವಾಗಿದ್ದವು. ಯಾರಾದರೂ ವಿಶೇಷ ಸನ್ಮಾನನೀಯರು ಬಂದರೆ ಅವರಿಗಾಗಿ ಆ ಆಸನಗಳು ಮಂಡಿಸಲ್ಪಟ್ಟಿದ್ದವು. ಡಬ್ಲಿನ್ನನು ದರ್ಬಾರದ ಆ ನೋಟವನ್ನು ಸೂಕ್ಷ್ಮರೀತಿಯಿಂದ ನೋಡನೋಡುತ್ತ ರಣಜಿತಸಿಂಹನ ಮಂತ್ರಿಗಳು ಕುಳಿತಿದ್ದ ಸ್ಥಳದ ವರೆಗೆ ಸಾಗಿದನು. ಡಬ್ಲಿನ್ನನ ಆ ಸುಂದರವಾದ ವೀರಮೂರ್ತಿಯು ಈ ವರೆಗೆ ಆ ದರ್ಬಾರದೊಳಗಿನ ಬಹುತರ ಎಲ್ಲ ಜನರಿಗೆ ಕಾಣಿಸಿಕೊಂಡಿದ್ದು, ಅದರ ಕಡೆಗೆ ಎಲ್ಲರೂ ಎವೆಯಿಕ್ಕದೆ ನೋಡುತ್ತಿದ್ದರು. ಅವನು ಮಂತ್ರಿಗಳ ಸಮೀಪಕ್ಕೆ ಹೋಗಿ ತನ್ನ ಬಕ್ಕಣದೊಳಗಿನ ಒಂದು ಬಹುಮೂಲ್ಯ ವಸ್ತ್ರವನ್ನು ರಣಜಿತಸಿಂಗನ ಸಿಂಹಾಸನದ ಎದುರಿಗಿದ್ದ ಒಂದು ಆಸನದ ಮೇಲೆ ಹಾಸಿ, ಆದರ ಮೇಲೆ ಆ ಕಾಲದ ನೂರು ರೂಪಾಯಿಗಳಿಂದ ತುಂಬಿದ ಒಂದು ಅತ್ಯಂತ ಸುಂದರವಾದ ಬೆಳ್ಳಿಯ ಒಟ್ಟಲವನ್ನು ಇಟ್ಟು, ರಣಜಿತಸಿಂಹನಿಗೆ ಲಷ್ಕರೀಪದ್ಧತಿಯಿಂದ ಮುಜುರೆ ಮಾಡಿ ನಿಂತನು.

ಕೂಡಲೆ ಮಹಾರಾಜಾ ರಣಜಿತಸಿಂಹನು ತನ್ನ ಶಿರವನ್ನು ಕುಸ ಬಾಗಿಸಿ, ಅವನ ಸಲಾಮು ಹಾಗು ನಜರಾಣೆಗಳನ್ನು ಸ್ವೀಕರಿಸಿದಂತೆ ಸೂಚಿಸಿದನು;

ಮತ್ತು ಸಮೀಪದ ಒಂದು ಆಸನದ ಕಡೆಗೆ ಬೆಟ್ಟು ಮಾಡಿ, ಅಲ್ಲಿ ಕೂಡ್ರಲಿಕ್ಕೆ ಡಬ್ಲಿನ್ನನಿಗೆ ತಿಳಿಸಿದನು. ಆಗ ಡಬ್ಲಿನ್ನನು ಮತ್ತೊಮ್ಮೆ ರಣಜಿತಸಿಂಹನಿಗೆ ಸಲಾಮು ಮಾಡಿ ಅಲ್ಲಿ ಕುಳಿತನು. ಮಹಾರಾಜನು ಮೊದಲು ಅವನೊಡನೆ ಕೆಲವು ಔಪಚಾರಿಕ ಮಾತುಗಳನ್ನಾಡಿ, ಬಳಿಕ ಅವನು:—ನಿಮ್ಮ ವ್ಯವಸಾಯ ವಾವುದು? ಯಾವ ವಿದ್ಯೆಯು ನಿಮಗೆ ಚೆನ್ನಾಗಿ ಬರುತ್ತಿದೆ? ನೀವು ಇಲ್ಲಿಗೆ ಬಂದ ಉದ್ದೇಶವೇನು? ಎಂದು ಕೇಳಲು,

ಡಬ್ಲಿನ್ನನು ಅವನ ಆ ಮೂರೂ ಪ್ರಶ್ನೆಗಳಿಗೆ:—ಮನೆತನಸ್ಥ ಹುಡುಗ ರನ್ನು ಶಾಲೆಗೆ ಕಳಿಸಿ ಅವರಿಗೆ ಯಾವ ಶಿಕ್ಷಣವನ್ನು ಕೊಡುವ ರೂಢಿಯು ಇಂಗ್ಲಂಡದಲ್ಲಿದೆಯೋ ಆ ಎಲ್ಲ ಶಿಕ್ಷಣವೂ ನನಗೆ ದೊರೆತಿದೆ. ಬಳಿಕ ನಾನು ತಾರುಣ್ಯದಲ್ಲಿ ದಂಡಿನ ಶಿಕ್ಷಣವನ್ನು ಪಡೆದು ಇಂಗ್ಲಿಷ ದಂಡಿನಲ್ಲಿ ಮೇಜರನ ವರೆಗೆ ಕೆಲಸ ಮಾಡಿದೆನು. ಆ ನಂತರ ನಾನು ಫ್ರಾನ್ಸಿಗೆ ಹೋದೆನು. ಅಲ್ಲಿಯು ದಂಡಿನಲ್ಲಿಯೂ ನಾನು ದೊಡ್ಡ ಹುದ್ದೆದಾರನಿದ್ದೆನು; ಆದರೆ ಅಲ್ಲಿ ನಾನು ಆಕಸ್ಮಿ ಕವಾಗಿ ಭಯಂಕರ ಬೇನೆಯಿಂದ ಬಳಲಿದೆನು. ಮುಂದೆ ದೇಶಭ್ರಮಣ ಮಾಡುವ ಇಚ್ಛೆಯು ನನಗುಂಟಾಗಲು, ನಾನು ತಿರುಗಾಡುತ್ತ ಈ ದೇಶಕ್ಕೆ ಬಂದೆನು. ಇಲ್ಲಿಯ ತಮ್ಮ ಕೀರ್ತಿಯನ್ನು ಕೇಳಿ, ಆಶ್ರಯ ದೊರೆತರೆ ತಮ್ಮಲ್ಲಿರ ಬೇಕೆಂದು ಇಲ್ಲಿಗೆ ಬಂದಿರುತ್ತೇನೆ, ಎಂದು ಹೇಳಿದನು.

ಡಬ್ಲಿನ್ನನು ರಣಜಿತಸಿಂಹನಿಗೆ ಉರ್ದುಭಾಷೆಯಿಂದಲೇ ತನ್ನ ಉತ್ತರ ವನ್ನು ಹೇಳಿದನು. ಆ ಇಂಗ್ಲಿಷ ಯುವಕನ ಆ ಭಾಷಾಮಾಧುರ್ಯವನ್ನೂ, ಮಾತಿನ ಸೊಬಗನ್ನೂ ನೋಡಿ ದರ್ಬಾರಿಗಳೆಲ್ಲರೂ ದಂಗಾದರು. ಸ್ವತಃ ರಣ ಜಿತಸಿಂಹನೂ ಪ್ರಸನ್ನನಾದನು. ಆಗ ಅವನು:—ಸಾಹೇಬ, ನಿಮಗೆ ಎಷ್ಟು ಬಗೆಯ ಭಾಷೆಗಳು ಬರುತ್ತವೆ? ಎಂದು ಪ್ರಶ್ನ ಮಾಡಿದನು.

"ನನಗೆ ಇಂಗ್ಲಿಷ, ಫ್ರೆಂಚ, ಜರ್ಮನ್, ಫಾರ್ಸೀ, ಉರ್ದೂ, ಹಿಂದೀ ಈ ಭಾಷೆಗಳು ಚೆನ್ನಾಗಿ ಬರುತ್ತಿದ್ದು, ಬಂಗಾಲೀ ಹಾಗು ಮರಾಠೀ ಭಾಷೆ ಗಳು ಶಕ್ಯವಮಟ್ಟಿಗೆ ಅವಗತವಾಗಿರುತ್ತವೆ.''

"ಇಷ್ಟು ಚಿಕ್ಕ ವಯಸ್ಸಿನಲ್ಲಿ ಇಷ್ಟೆಲ್ಲ ಭಾಷೆಗಳನ್ನು ನೀವು ಕಲಿತುದುದು ಹೇಗೆ?''

"ಆಯಾ ದೇಶಗಳಲ್ಲಿ ಕೆಲಕಾಲವಿರುವ ಪ್ರಸಂಗವುಂಟಾದುದರಿಂದ ಅವ ನ್ನೆಲ್ಲ ಕಲಿಯಲೇ ಬೇಕಾಯಿತು. ಇನ್ನು ಈ ಪಂಜಾಬದಲ್ಲಿರುವ ಸಂಧಿ ದೊರೆ

ತರೆ ಪಂಜಾಬೀ ಹಾಗು ಸಂಸ್ಕೃತಗಳನ್ನು ಕಲಿಯುವ ಇಚ್ಛೆಯಿದೆ.''

“ಅದಿರಲಿ; ಸಾಹೇಬರೇ, ನಿಮಗೆ ಕೋಟೆಗಳನ್ನು ಕಟ್ಟಿಸುವದು, ರಣಭೂಮಿಯಲ್ಲಿ ತಾತ್ಕಾಲಿಕವಾದ ಕಂದಕಗಳನ್ನು ಅಗಿಸುವದು ಮುಂತಾದ ಕೆಲಸಗಳು ಬರುವವೊ?''

“ನನಗೆ ಅವುಗಳ ಪ್ರತ್ಯಕ್ಷ ಜ್ಞಾನವಿರುವದಿಲ್ಲ; ಆದರೆ ಅವನ್ನು ಹೇಗೆ ನಿರ್ವಹಿಸುತ್ತಾರೆಂಬದನ್ನು ಅವಲೋಕಿಸುವ ಪ್ರಸಂಗಗಳು ನನಗೆ ಎಷ್ಟೋಸಾರೆ ಬಂದಿವೆ. ನಮ್ಮ ದೇಶದಲ್ಲಿ ಆ ಕೆಲಸಗಳನ್ನೆಲ್ಲ ಇಂಜನೀಯರ ಖಾತೆದವರು ಮಾಡುತ್ತಾರೆ; ಅವು ದಂಡಿನ ಶಿಪಾಯಿಗಳ ಕರ್ತವ್ಯಗಳಲ್ಲ.'' ಎಂದು ಡಬ್ಲಿನ್ನನು ಸ್ವಾಭಿಮಾನದಿಂದ ನುಡಿದನು.

ಯುರೋಪದಲ್ಲಿ ಪ್ರತಿಯೊಬ್ಬನು ಹಲವು ವಿದ್ಯೆಗಳಲ್ಲಿ ಪಾರಂಗತನಿರುತ್ತಾನೆಂದು ರಣಜಿತನ ತಿಳುವಳಿಕೆಯಾಗಿತ್ತು. ಅಂತೇ ಅವನು ಡಬ್ಲಿನ್ನನಿಗೆ ಆ ಬಗೆಯಾಗಿ ಕೇಳಿದ್ದನು. ಡಬ್ಲಿನ್ನನ ಕಡೆಯ ವಾಕ್ಯವು ಕಿವಿಗೆ ಬಿದ್ದ ಕೂಡಲೆ ರಣಜಿತಸಿಂಗನು ಅವನ ಕಡೆಗೆ ನೋಡಿದನು. ಆಗ ಡಬ್ಲಿನ್ನನ ಮುಖದ ಮೇಲೆ ಒಂದು ಬಗೆಯ ಸ್ವಾಭಿಮಾನದ ಕಳೆಯು ನಿಚ್ಚಳವಾಗಿ ಕಾಣುತ್ತಿತ್ತು. ಅದನ್ನು ನೋಡಿ “ಶಾಬಾಸ್, ಡಬ್ಲಿನ್‌ಸಾಹೇಬ, ಶಾಬಾಸ್!'' ಎಂದಂದು, ರಣಜಿತನು ತನ್ನ ಮಂತ್ರಿಮಂಡಲದ ಕಡೆಗೆ ಹೊರಳಿ:—ಫಕೀರಜೀ, ಈ ನಿಮ್ಮ ಮಿತ್ರರು ಒಳ್ಳೇ ಸಾಹಸಿಗರೂ, ಶೂರರೂ, ಸರಳಸ್ವಭಾವದವರೂ ಇದ್ದಂತೆ ತೋರುತ್ತಿದೆ, ಎಂದನು.

ಆಗ ಫಕೀರಜಿಯು ಅವನತ ಮುಖದಿಂದಲೇ ಮಹಾರಾಜನನ್ನು ಅಭಿವಂದಿಸಿ:—ಅಹುದು ಮಹಾರಾಜ, ಮಹಾರಾಜರ ಕೃಪೆಯು ಈ ಸಾಹೇಬರ ಮೇಲೆ ಆದರೆ ಇವರಲ್ಲಿಯ ಸದ್ಗುಣಗಳು ಬೇಗನೆ ಗೋಚರವಾದಾವು. ಈ ಸಾಹೇಬರು ಮಾತಿನಲ್ಲಿ ಎಷ್ಟು ದಿಟ್ಟರೂ, ಚತುರರೂ ಇರುವರೋ, ಹಾಗೆಯೇ ಇವರು ತಮ್ಮ ಕರ್ತವ್ಯದಲ್ಲಿಯೂ ತತ್ಪರರಾಗಿರುತ್ತಾರೆ. ತುರ್ಕಸ್ತಾನ, ಇರಾಣ, ಚೀನ ಮುಂತಾದ ದೇಶಗಳ ಬಾದಶಹರು ಇವರನ್ನು ತಮ್ಮ ದರ್ಬಾರದಲ್ಲಿಟ್ಟುಕೊಳ್ಳಲಿಕ್ಕೆ ಬಹು ಸಾಹಸಪಟ್ಟರು; ಆದರೆ ಇವರು ನಮ್ಮ ಮಹಾರಾಜರ ಕೀರ್ತಿರವವನ್ನು ಕೇಳಿ, ಅವರೆಲ್ಲರಿಗೂ ನಕಾರಾತ್ಮಕವಾದ ಉತ್ತರವನ್ನು ಕೊಟ್ಟು ಇಲ್ಲಿಗೆ ಬಂದಿರುತ್ತಾರೆ.

ಫಕೀರಜಿಯ ಈ ನುಡಿಗಳನ್ನು ಕೇಳಿ ಡಬ್ಲಿನ್ನನು ಆಶ್ಚರ್ಯಚಕಿತನಾದನು.

ಇಷ್ಟು ದೊಡ್ಡ ಮಂತ್ರಿಯೂ, ಈ ಶೀಖರಾಜ್ಯದ ಆಧಾರಸ್ತಂಭನೂ, ಮಹಾರಾಜರ ಬಲಗೈಯಂತಿರುವ ಶ್ರೇಷ್ಠ ಅಧಿಕಾರಿಯೂ ಆಗಿರುವ ಫಕೀರಜೆಯು ತನ್ನ ವಿಷಯವಾಗಿ ಮಹಾರಾಜರೆದುರಿಗೆ ಇಷ್ಟು ಶಿಫಾರಸ ಮಾಡಿದ್ದನ್ನು ಕೇಳಿ ಅವನಲ್ಲಿ ಒಂದು ಬಗೆಯ ಹುರುಪು ಉಂಟಾಯಿತು.

ಇಷ್ಟರಲ್ಲಿ ರಣಜಿತಸಿಂಗನೆದುರಿಗೆ ಒಂದು ನ್ಯಾಯ ನಿರ್ಣಯದ ಪ್ರಕರಣವು ಬಂದಿತು. ಒಬ್ಬ ಬದ್‌ಮಾಷನು ರಣಜಿತಸಿಂಗನ ಆ ಸಾಲೀಮಾರ ಬಾಗದೊಳಗಿನ ಹಣ್ಣುಗಳನ್ನು ಹರಿಯುತ್ತಿದ್ದದ್ದನ್ನು ಕಾವಲುಗಾರನು ನೋಡಿದನು. ಕೂಡಲೆ ಕಾವಲುಗಾರನು ಅವನನ್ನು ಮಹಾರಾಜನೆದುರಿಗೆ ತಂದು ನಿಲ್ಲಿಸಿದನು. ಅಪರಾಧಿಯು ತನ್ನ ತಪ್ಪನ್ನು ಒಪ್ಪಿಕೊಂಡು, ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡನು; ಆದರೆ ರಣಜಿತಸಿಂಗನು ಆ ಸಾಮಾನ್ಯ ಅಪರಾಧಕ್ಕಾಗಿ ಅವನನ್ನು ಕ್ಷಮಿಸದೆ, ಅವನ ತುದಿಮೂಗು-ಕಿವಿಗಳನ್ನು ಕೊಯ್ದುಬಿಡುವಂತೆ ಆಜ್ಞೆಮಾಡಿದನು! ಆ ಕೂಡಲೆ ಒಬ್ಬ ಸಿಪಾಯಿಯು ಬಂದು ಅಲ್ಲಿಂದಲ್ಲೇ ಆ ಅಪರಾಧಿಗೆ ಆ ಶಿಕ್ಷೆಯನ್ನು ವಿಧಿಸಿಬಿಟ್ಟನು!! ಆ ವಿಚಿತ್ರ ಪ್ರಕಾರವನ್ನು ಕಂಡು ಡಬ್ಲಿನ್ನನು ತಾನು ಎಲ್ಲಿ ಇರುವೆನು? ಯಾತಕ್ಕಾಗಿ ಬಂದಿರುವೆನು? ಯಾರ ಎದುರಿಗೆ ನಿಂತಿರುವೆನು? ಮುಂತಾದುದೆಲ್ಲವನ್ನೂ ಮರೆತು, ಕೇವಲ ದುಃಖಿತ ಹೃದಯದಿಂದ: "ಅಯ್ಯೋ, ಇದೆಂಥ ಶಿಕ್ಷೆಯ ಪ್ರಕಾರವು!" ಎಂದು ನುಡಿದು ಬಿಟ್ಟನು. ಆತನ ಬಾಯಿಂದ ಹೊರಟ ಆ ಶಬ್ದಗಳು ರಣಜಿತಸಿಂಗ, ಫಕೀರಜೀ ಮೊದಲಾದವರೆಲ್ಲರಿಗೆ ಸಹಜವಾಗಿ ಕೇಳಿಸಿದವು.

ಕೂಡಲೆ ರಣಜಿತಸಿಂಗನು ಡಬ್ಲಿನ್ನನ ಕಡೆಗೆ ಹೊರಳಿ:—ಸಾಹೇಬ, ನಿಮಗಿದೊಳ್ಳೇ ಕಠಿಣ ಶಿಕ್ಷೆಯೆಂದೆನಿಸಿತೇನು? ಎಂದು ಪ್ರಶ್ನೆ ಮಾಡಲು,

"ಮಹಾರಾಜ, ಯುರೋಪದಲ್ಲಿ ಇಂಥ ಕ್ಷುಲ್ಲಕ ಅಪರಾಧಗಳಿಗೆ ಇಷ್ಟು ಭಯಂಕರವಾದ ಶಿಕ್ಷೆಯು ವಿಧಿಸಲ್ಪಡುವದಿಲ್ಲ. ಅಪರಾಧಿಯು ಬಡವನು; ತನ್ನ ಹೊಟ್ಟೆಯ ಪಾಡಿಗಾಗಿ ಅವನೀ ದುಷ್ಕರ್ಮಕ್ಕೆ ಪ್ರವೃತ್ತನಾಗಿದ್ದಾನೆ. ಯುರೋಪದೊಳಗೆ ಇಂಥವರಿಗೆ..........." ಎಂದು ಡಬ್ಲಿನ್ನನು ತುಸ ತಿರಸ್ಕಾರ ಸೂಚಕ ದನಿಯಿಂದಲೇ ನುಡಿಯುತ್ತಿರಲು, ರಣಜಿತಸಿಂಗನು ಅವನನ್ನು ಮತ್ತೆ ಮಾತಾಡಗೊಡದೆ:—ಸಾಹೇಬ, ಸಾಕುಮಾಡಿರಿ, ನಿಮ್ಮ ಈ ವ್ಯಾಖ್ಯಾನವನ್ನು. ನೀವು ಯಾರ ಎದುರಿಗೆ ಮಾತಾಡುತ್ತಿರುವಿರೆಂಬದನ್ನು ಯೋಚಿಸಿರಿ, ಎಂದು ಸಿಟ್ಟಿನಿಂದಲೇ ನುಡಿದನು.

ರಣಜಿತಸಿಂಗನ ದರ್ಬಾರದ ಆ ವಿಲಕ್ಷಣ ಪ್ರಕಾರವನ್ನು ಕಂಡು ಡಬ್ಲಿನ್ನನಿಗೆ ಪರಮ ವಿಸ್ಮಯವೆನಿಸಿತು; ಆದರೂ ಅವನು ಸುಮ್ಮನಿರಲಾರದೆ, ಈ ಪ್ರಸಂಗದಲ್ಲಿ ತಾನು ತನ್ನ ಸ್ವಾಭಿಮಾನವನ್ನು ಕಾಯ್ದುಕೊಳ್ಳಲೇಬೇಕೆಂದು ಅವನು ಏನನ್ನೋ ಮಾತಾಡಬೇಕೆಂದಿದ್ದನು; ಆದರೆ ಡಬ್ಲಿನ್ನನ ದಿಟ್ಟತನಕ್ಕೆ ಮೂಗು ಮುರಿಯುತ್ತಿದ್ದಂಥ ಹಾಗು ರಣಜಿತಸಿಂಗನನ್ನು ತಮ್ಮ ಸಹಾನುಭೂತಿಯಿಂದ ಆ ಅಪರಿಚಿತ ಸಾಹೇಬನ ವಿರುದ್ಧವಾಗಿ ಎಳೆಯಬೇಕೆಂದು ಹಾತೊರೆಯುತ್ತಿದ್ದಂಥ ದರ್ಬಾರದೊಳಗಿನ ಜನರು ಗೊಂಗಾಟಮಾಡಿ:—ಸಾಹೇಬ, ಸಾಕುಮಾಡು ನಿನ್ನ ಭಾಷಣವನ್ನು-ಮುಚ್ಚು ಬಾಯಿ, ಎಂದು ಕೂಗಹತ್ತಿದರು. ಆಗಂತೂ ಡಬ್ಲಿನ್ನನು ಒಳ್ಳೇ ಆವೇಶದಿಂದ ಮಾತಾಡುವ ಹವಣಿಕೆಯಲ್ಲಿದ್ದನು; ಆದರೆ ಫಕೀರಜಿಯು ಅವನನ್ನು ಹಾಗೆ ಮಾತಾಡಗೊಡದೆ, ತನ್ನ ಕಣ್ಣುಸಂಜ್ಞೆಯಿಂದ ಸುಮ್ಮನಿರಿಸಿದನು. ರಣಜಿತಸಿಂಗನು ತನ್ನ ದರ್ಬಾರಿಗಳಿಗೆಲ್ಲ ಸುಮ್ಮಗಿರುವಂತೆ ಸೂಚಿಸಿ:—ಫಕೀರಜೀ, ಡಬ್ಲಿನ್ನ ಸಾಹೇಬನು ಹೇಳತಕ್ಕದ್ದನ್ನು ಮರೆಮಾಜದೆ ಹೇಳಲಿ. ನಾನು ಇಂಥ ಸ್ಪಷ್ಟ ಮಾತಾಡುವವರನ್ನೇ ಹೆಚ್ಚಾಗಿ ಪ್ರೀತಿಸುತ್ತೇನೆ, ಎಂದನು.

ಆದರೆ ಡಬ್ಲಿನ್ನನು ಏನೂ ಮಾತಾಡಲಿಲ್ಲ. ಆಗ ರಣಜಿತಸಿಂಗನೇ ಪುನಃ:-ಸಾಹೇಬ, ಫಿರಂಗಿಗಳು ಕುದುರೆಯನ್ನು ಹತ್ತುವ ವಿದ್ಯೆಯಲ್ಲಿ ಒಳ್ಳೇ ಗಟ್ಟಿಗರಿರುತ್ತಾರೆಂದು ಕೇಳಿದ್ದೇನೆ; ಅಲ್ಲದೆ ಅಶ್ವವಿದ್ಯೆಯು ಅವರಿಗೆ ಯಥಾಶಾಸ್ತ್ರ ಬರುತ್ತದಂತೆ. ತಾವು ಹೇಗೂ ಆ ಕಲೆಯನ್ನು ತಿಳಿದವರೇ ಇರುತ್ತೀರಿ. ನಿಮ್ಮಂತೆ ನಮ್ಮ ದರ್ಬಾರದಲ್ಲಿಯೂ ಅಗೋ, ಅತ್ತ ನಿಂತಿರುವ ಆ ಮನುಷ್ಯನು ಕುದುರೆ ಹತ್ತುವದರಲ್ಲಿ ನಿಷ್ಣಾತನಿರುತ್ತಾನೆ. ನಮ್ಮ ಈ ಸಾಲೀಮಾರ ಬಾಗದ ಹೊರಬದಿಗೊಂದು ಸಣ್ಣ ಕಂದಕವಿರುತ್ತದೆ. ಆತನು ತನ್ನ ಕುದುರೆಯನ್ನು ಆ ಕಂದಕದ ಮೇಲಿಂದ ಹಾರಿಸುವನು. ನೀವೂ ನಿಮ್ಮ ಕುದುರೆಯನ್ನು ಆ ಕಂದಕದ ಮೇಲಿಂದ ಹಾರಿಸಿ ತೋರಿಸತಕ್ಕದ್ದು, ಎಂದಂದು ದರ್ಬಾರದೊಳಗಿಂದ ಎದ್ದನು.

ಡಬ್ಲಿನ್ನನು ಮುಜುರೆಮಾಡಿ, ಮಹಾರಾಜರ ಆಜ್ಞೆಯನ್ನು ಶಿರಸಾವಹಿಸಿ, ರಣಜಿತಸಿಂಗನು ಯಾರ ವಿಷಯವಾಗಿ ನುಡಿದನೋ ಅವನ ಕಡೆಗೆ ಹೊರಳಿ ನೋಡಿದನು. ಅವನು ಮತ್ತಾರೂ ಆಗಿರದೆ, ತನ್ನ ಕುದುರೆಯಿಂದ ಒದಿಸಿಕೊಂಡು ಬಿದ್ದಿದ್ದ ನಂದಸಿಂಹನೇ ಆಗಿದ್ದನು. ಅವನು ತನ್ನನ್ನು ಕಡುಕೋಪದಿಂದ ನೋಡುತ್ತಿರುವಂತೆ ಇವನಿಗೆ ಕಾಣಿಸಿತು. ನಂದಸಿಂಹನು ದರ್ಬಾರ

ದೊಳಗೆ ಬಂದಾಗ ಡಬ್ಲಿನ್ನನು ರಣಜಿತಸಿಂಗನ ಹತ್ತಿರವೇ ಕುಳಿತಿದ್ದನು. ಮೊದಲೇ ಡಬ್ಲಿನ್ನನಿಂದ ನೊಂದು ಅವನ ವಿಷಯದಲ್ಲಿ ಸಂತಪ್ತನಾಗಿದ್ದ ಆ ದುಷ್ಟನಿಗೆ ಅದನ್ನು ಕಂಡು ಮತ್ತಿಷ್ಟು ಸಂತಾಪವೇರಿತು. ಮಹಾರಾಜನ ಆ ಆಜ್ಞೆಯಿಂದಂತೂ ಆತನ ಸಂತಾಪಾತಿರೇಕವಾಯಿತು. ಯಾಕಂದರೆ, ತಾನು ಮಹಾರಾಜನ ಕೇವಲ ಪ್ರೀತಿಪಾತ್ರನಾದ ಅಶ್ವಸೇನೆಯ ಮುಖ್ಯಸ್ಥನಾಗಿದ್ದು, ಆ ಪರದೇಶಿಯಾದ ಫಿರಂಗಿಯೊಡನೆ ತನ್ನ ಅಶ್ವವಿದ್ಯೆಯ ಪರೀಕ್ಷೆಯಾಗುವದನ್ನು ಕಂಡು ಆ ದುರಭಿಮಾನಿಗೆ ಸಹನವಾಗುವದೆಂತು? ಆದರೂ ಆತನು ಮಹಾರಾಜನ ಆಜ್ಞೆಯಂತೆ ತನ್ನ ಕುದುರೆಯೊಡನೆ ಸಾಲೀಮಾರ ಬಾಗದ ಹೊರಬದಿಯ ಆ ಕಂದಕದ ಕಡೆಗೆ ನಡೆದನು. ರಣಜಿತಸಿಂಗನೂ, ಆತನ ಮುಖ್ಯ ಮುಖ್ಯ ಮಂತ್ರಿ-ಸರದಾರರೂ ಅಲ್ಲಿಗೆ ತೆರಳಿದರು. ಡಬ್ಲಿನ್ನನೂ ಆತನ ಸಂಗಡ ನಡೆದಿದ್ದನು. ಆತನ ಕುದುರೆಯನ್ನು ಅವನ ಸೇವಕನು ತಂದನು.

ಕಂದಕದ ಹತ್ತರ ಎಲ್ಲರೂ ಬಂದ ಕೂಡಲೆ ಮಹಾರಾಜನು ನಂದಸಿಂಹನಿಗೇ ತನ್ನ ಕುದುರೆಯನ್ನು ಮೊದಲು ಕಂದಕವನ್ನು ಹಾರಿಸುವ ಸಲುವಾಗಿ ಹೇಳಿದನು. ಆ ಕಂದಕವು ಅಷ್ಟೊಂದು ಆಳವಾಗಿರಲಿಲ್ಲ. ಅದು ೩-೪ ಮೊಳ ಆಳವಾಗಿದ್ದು, ಆರೇಳು ಮೊಳ ಅಗಲಾಗಿತ್ತು. ಅದರ ಎರಡೂ ಬದಿಗೆ ವಿಸ್ತೃತವಾದ ಬೈಲು ಪ್ರದೇಶವಿತ್ತು. ಆ ಪುಟ್ಟ ಕಂದಕದ ಮೇಲಿಂದ ತನ್ನ ಕುದುರೆಯನ್ನು ಹಾರಿಸಿಕೊಂಡು ಹೋಗುವದು ನಂದಸಿಂಹನಿಗೇನೂ ಅಸಾಧ್ಯವಾಗಿರಲಿಲ್ಲ; ಆದರೆ ಅವನು ಈ ಮೊದಲು ತಾನು ಡಬ್ಲಿನ್ನನಿಂದ ಅಪಮಾನ ಹೊಂದಿದ್ದರ ಸೇಡು ತೀರಿಸಿಕೊಳ್ಳಲಿಕ್ಕೆ ಆತುರನಾದುದರಿಂದ, ಅವಸಾನಗೆಟ್ಟು ತಕ್ಕ ಪದ್ಧತಿಯಿಂದ ಕುದುರೆಯನ್ನು ಓಡಿಸಲಿಲ್ಲ. ಅದರಿಂದ ಅವನ ಕುದುರೆಯು ಕಂದಕವನ್ನು ಪಾರಾಗುವಂತೆ ಜಿಗಿಯದೆ, ಕಂದಕದಲ್ಲಿಯೇ ಬಿದ್ದುಬಿಟ್ಟಿತು! ಈ ಪ್ರಸಂಗದಲ್ಲಂತೂ ನಂದಸಿಂಹನ ವಿಡಂಬನೆಗೆ ಅಂತವೇ ಉಳಿಯಲಿಲ್ಲ. ಹತ್ತರದಲ್ಲಿ ಸ್ವತಃ ರಣಜಿತಸಿಂಹನಂಥ ನ್ಯಾಯನಿಷ್ಠುರನಾದ ಮಹಾರಾಜನು ನಿಂತುಕೊಂಡಿದ್ದರೂ ನಂದಸಿಂಹನ ವಿರೋಧಿಗಳೂ, ಡಬ್ಲಿನ್ನನ ಸದ್ಗುಣಗಳಿಗೆ ಲುಬ್ಧರಾದವರೂ ಚಪ್ಪಾಳೆ ಬಡಿದು ನಗಲಿಕ್ಕೆ ಹಿಂಜರಿಯಲಿಲ್ಲ.

ಈ ಪ್ರಕಾರವು ನಡೆದಾಗ ಡಬ್ಲಿನ್ನನ ಹೊರತು ಎಲ್ಲರೂ ಆ ಬೈಲಿನಲ್ಲಿ ಕಂದಕದಿಂದ ದೂರದಲ್ಲಿ ನಿಂತುಕೊಂಡಿದ್ದರು. ಡಬ್ಲಿನ್ನನೊಬ್ಬನೇ ಕುದುರೆ ಹತ್ತಿ ನಿಂತಿದ್ದನು. ಅದರಿಂದ ಅವನು ತನ್ನ ಕುದುರೆಯನ್ನು ಫಕ್ಕನೆ ಓಡಿಸಿ,

ಎಲ್ಲರಿಗಿಂತಲೂ ಮೊದಲು ಆ ಕಂದಕದ ಹತ್ತರ ಹೋಗಿ, ನಂದಸಿಂಹನನ್ನೆಬ್ಬಿಸಿ ಅವನೊಡನೆ ಮಹಾರಾಜನ ಬಳಿಗೆ ಬಂದನು. ತನ್ನ ಸವಾರರ ಮುಖ್ಯಸ್ಥನು ಹೀಗೆ ಆಯತ ಸಮಯದಲ್ಲಿ ಅಪಯಶ ಹೊಂದಿದ್ದರಿಂದ ರಣಜಿತಸಿಂಹನು ಕ್ರುದ್ಧ ಮುದ್ರೆಯಿಂದಲೇ ನಂದಸಿಂಹನ ಕಡೆಗೆ ನೋಡಿದನು; ಆದರೆ ಆಗ ಯಾರೂ ಪಿಟ್ಟೆಂದು ಮಾತಾಡಲಿಲ್ಲ. ಬಳಿಕ ಮಹಾರಾಜನು ಡಬ್ಲಿನ್ನನಿಗೆ ಕಂದಕವನ್ನು ಹಾರಿಸುವ ಅಪ್ಪಣೆ ಮಾಡಿದನು. ಆಗ ಅವನು ತನ್ನ ಕುದುರೆಯನ್ನು ಕಂದಕದಿಂದ ಬಹಳ ಹಿಂದಕ್ಕೆ ಒಯ್ದು ಅಲ್ಲಿಂದ ವೇಗವಾಗಿ ಬಿಟ್ಟು, ಕಂದಕವು ಸಮೀಪಿಸುತ್ತಲೇ ತನ್ನ ಕಾಲಿನಿಂದ ಅದರ ಹೊಟ್ಟೆಗೆ ಸಂಜ್ಞೆ ಮಾಡಿದನು. ಕೂಡಲೆ ಅದು ಟಣ್ಣನೆ ಜಿಗಿದು ಕಂದಕದ ಪರತೀರದಲ್ಲಿ ಹೋಗಿ ನಿಂತಿತು. ಬಳಿಕ ಡಬ್ಲಿನ್ನನು ಆ ತನ್ನ ಕುದುರೆಯನ್ನು ಆಜೆಯ ದಂಡೆಯಿಂದಲೂ ಹಾಗೆಯೇ ಇತ್ತ ಹಾರಿಸಿಕೊಂಡು ಮಹಾರಾಜರ ಎದುರಿಗೆ ಬಂದು ಅವರಿಗೆ ಸಲಾಮು ಮಾಡಿ ನಿಂತುಕೊಂಡನು.

ರಣಜಿತನು ಡಬ್ಲಿನ್ನನ ಆ ಚಾತುರ್ಯವನ್ನು ಕಂಡು ಹರ್ಷಾತಿರೇಕದಿಂದ ಅವನ ಬೆನ್ನಮೇಲೆ ಚಪ್ಪರಿಸಿ:—ಶಾಬಾಸ, ಫಿರಂಗೀ ಶಾಬಾಸ! ಇಂದಿನಿಂದ ನೀನು ನನ್ನ ಅಶ್ವಸೈನ್ಯದ ಮುಖ್ಯಸ್ಥನೂ, ಶಿಕ್ಷಕನೂ ಆಗಿರುತ್ತೀ. ಅಲ್ಲದೆ ನನ್ನ ದಂಡಿನಲ್ಲಿ ನಿನ್ನನ್ನು ಕರ್ನಲ್ಲನೆಂದು ನೇಮಿಸಿರುತ್ತೇನೆ. ಆ ವಿಷಯದ ಸನದು ಹಾಗು ವಸ್ತ್ರಗಳನ್ನು ಈಗಲೆ ಕೊಡಿಸುವೆನು. ನೀನು ರಣಾಂಗಣದಲ್ಲಿ ಹೀಗೆಯೇ ಚಾತುರ್ಯ-ಸಾಹಸಗಳನ್ನು ತೋರಿಸಿ, ಈ ರಣಜಿತನ ಪರಮಮಿತ್ರನಾಗುವಿಯೆಂದು ನಾನು ಆಶಿಸುತ್ತೇನೆ; ಆದರೆ ಸಾಹೇಬ, ನಿಮಗೆ ಈ ವೃದ್ಧ ರಣಜಿತಸಿಂಹನು ಈಗಲೆ ಸೂಚಿಸುವದೇನಂದರೆ:—ರಣವೀರನಿಗೆ ರಣಕೌಶಲ್ಯವೂ ಸಾಹಸವೂ ಸಲ್ಲತಕ್ಕವೇ ಹೊರತು, ರಣೋನ್ಮಾದವು ಸಹಸಾ ಸಲ್ಲತಕ್ಕದ್ದಲ್ಲ. ಅದರಿಂದ ಅವನ ಘಾತವು ಬೇಗನೆ ಆಗದಿರದು. ನೀವು ನನ್ನ ದರ್ಬಾರವನ್ನು ಪ್ರವೇಶಿಸುವ ಮೊದಲೇ ಈ ಉನ್ಮಾದ ನಂದಸಿಂಹನಿಗೆ ನಿಮ್ಮ ಕೈ ತೋರಿಸಿರುವಿರೆಂದು ನಾನು ಕೇಳಿದ್ದೇನೆ. ಒಳ್ಳೇದಾಯಿತು. ಅಂದರೇ ಇಂಥವರಿಗೆ ಬುದ್ಧಿ ಬಂದೀತು.

ಮಹಾರಾಜರ ಆ ಕಡೆಯ ವಾಕ್ಯವನ್ನು ಕೇಳಿ, ಡಬ್ಲಿನ್ನನಿಗೂ ಅವನ ಪಕ್ಷದವರಿಗೂ ಎಷ್ಟು ಆನಂದವಾಯಿತೋ, ಅದರ ಇಮ್ಮಡಿಯಷ್ಟು ದುಃಖವೂ ತ್ವೇಷವೂ ನಂದಸಿಂಹನಿಗಾದವು; ಆದರೆ ಆಗ ಅವನು ಏನೂ ಮಾಡಲಿಕ್ಕೆ ಶಕ್ತ

ನಾಗಿರದ್ದರಿಂದ, ಹಲ್ಲು ಕಡಿಯುತ್ತ ಸುಮ್ಮನೆ ನಿಂತಿರಬೇಕಾಯಿತು.

ಡಬ್ಲಿನ್ನನೊಡನೆ ರಣಜಿತಸಿಂಗನು ಪುನಃ ದರ್ಬಾರ ಗೃಹವನ್ನು ಪ್ರವೇಶಿಸಿದನು. ರಣಜಿತಸಿಂಗನು ಇನ್ನು ತನ್ನ ಮಂತ್ರಿಗಳಿಗೆ ಹೇಳಿ, ಅವನಿಗೆ ಸನದು ಮುಂತಾದವುಗಳನ್ನು ಕೊಡಿಸುವವನಿದ್ದನು; ಆದರೆ ಆತನಿಗೇನೆನಿಸಿತೋ ಯಾರು ಬಲ್ಲರು? ಆಗ ಆ ಕಾರ್ಯವನ್ನು ಅವನು ರಹಿತ ಮಾಡಿ:—ಸಾಹೇಬ, ನಾನು ಹೇಳಿದ ಮೇರೆಗೆ ನಿಮಗೆ ಸನದು ಮುಂತಾದವುಗಳನ್ನು ಬೇಗನೆ ಕೊಡಿಸುವೆನು. ಅದಕ್ಕಾಗಿ ನಿಮ್ಮನ್ನು ಇನ್ನೊಂದು ದಿನ ಕರೆಕಳುಹುವೆನು. ಆ ವರೆಗೆ ನೀವು ನಿಮ್ಮ ಇಳಕೊಂಡ ಸ್ಥಳದಲ್ಲಿಯೇ ಸ್ವಸ್ಥವಾಗಿರ್ರಿ. ನಿಮ್ಮ ನಿತ್ಯದ ಖರ್ಚಿನ ವ್ಯವಸ್ಥೆಯನ್ನು ಮಾಡಿಸುವೆನು, ಎಂದು ಹೇಳಿ, ಫಕೀರಜಿಗೆ ಏನೇನೋ ತಿಳಿಸಿದನು. ಅವನು ಅದರಂತೆ ಖಜಾನಜಿಗೆ ಅಪ್ಪಣೆ ಮಾಡಿದನು.

ಹೀಗೆ ಡಬ್ಲಿನ್ನನು ಆ ದಿನ ರಣಜಿತನ ದರ್ಬಾರನ್ನು ಪ್ರವೇಶಿಸಿ, ಅವನಿಂದ ಸನ್ಮಾನ ಹೊಂದಿ, ತನ್ನ ದಂಡಿನೊಡನೆ ತನ್ನ ಬಿಡಾರಕ್ಕೆ ತಿರುಗಿದನು. ಅಷ್ಟರಲ್ಲಿ ಮಧ್ಯಾಹ್ನದ ಹನ್ನೊಂದು ಗಂಟೆಯಾದ್ದರಿಂದ ಎಲ್ಲರೂ ತಂತಮ್ಮ ಹೊಟ್ಟೆಯ ಉದ್ಯೋಗಕ್ಕೆ ತೊಡಗಿದರು.

---

## ೯ನೆಯ ಪ್ರಕರಣ—ರಣಜಿತಸಿಂಗನೂ, ಆತನ ದರ್ಬಾರಿಗಳೂ.

ಡಬ್ಲಿನ್ನನು ತಾನು ಇಳುಕೊಂಡಿದ್ದ ಬಂಗ್ಲೆಗೆ ಬಂದ ಬಳಿಕ ಊಟಮಾಡಿ ದಿವಾಣಖಾನೆಯಲ್ಲಿ ಒಂದು ಕೋಚದ ಮೇಲೆ ಅಡ್ಡಾಗಿ ವಿಚಾರಮಗ್ನನಾದನು. ಆಗ ಅವನು ತನ್ನ ಮನಸ್ಸಿನಲ್ಲಿ ಆ ಪಂಜಾಬದ ಸಿಂಹನಾದ ರಣಜಿತಸಿಂಗನ, ಆತನ ದರ್ಬಾರದೊಳಗಿನ ಅಮೀರ-ಉಮರಾವರ, ಫಕೀರಜಿಯಂಥ ಅಕಲ್ಪಿತ ಮಿತ್ರರ ಮತ್ತು ನಂದಸಿಂಹನಂತಹ ನಿಷ್ಕಾರಣ ಶತ್ರುಗಳ ವಿಷಯವಾಗಿ ವಿಚಾರಮಗ್ನನಾದನು. ನಂತರ ಅವನು ತನ್ನ ಅಕಲ್ಪಿತ ಭಾಗ್ಯೋದಯವನ್ನೂ, ಅನುಚರರ ಪ್ರೇಮವನ್ನೂ, ಅಲ್ಲಿಯ ಸಭ್ಯ ಗೃಹಸ್ಥರು ತನ್ನ ಗುಣಗಳಿಗೆ ಲುಬ್ಧರಾದುದನ್ನೂ ಆಲೋಚಿಸಿ, ಕಡೆಗೆ ಅವನು ಒಂದು ಸಂಗತಿಯನ್ನು ನಿಷ್ಕರ್ಷಿಸಿದುದೇನಂದರೆ:—

"ನಾನು ಇಂಗ್ಲಂಡದ ನ್ಯಾಯಕೋರ್ಟಿನ ತೀರ್ಪನ್ನು ಕೇಳಿದಾಗ ನನಗೆ ಜಗತ್ತಿನಲ್ಲಿ ಇನ್ನು ಆಶ್ರಯಸ್ಥಾನವೇ ಇಲ್ಲವೆಂದೂ, ನಾನು ದಾರಿಯ ಭಿಕಾರಿ

ಯಾದೆನೆಂದೂ ತಿಳಿದು ಹತಾಶನಾಗಿದ್ದೆನು; ಆದರೆ ಅದೇ ನಾನು ಈಗ ನನ್ನ ತಾಯಿನಾಡಿಗೆ ಬರಲು, ನನ್ನಂಥ ದುರ್ಭಾಗ್ಯನನ್ನು ಕೂಡ ರಣಜಿತಸಿಂಹನಂಥಹ ಮಹಾರಾಜನೂ ಮನ್ನಿಸಿದ್ದು ಏತರ ಪರಿಣಾಮವು? ಇದು ನನ್ನಲ್ಲಿ ಉಂಟಾದ ತಾಯಿನಾಡಿನ ವಿಷಯದ ಪ್ರೇಮದ ಪರಿಣಾಮವೇ ಹೊರತು ಮತ್ತೇತರದಿರ ಬೇಕು? ಆದರೆ ನಾನು ಇಂದಿನ ನನ್ನ ಭಾಗ್ಯೋದಯವನ್ನೇ ನಚ್ಚಿಕೊಂಡು ವಿಶ್ರಾಂತಿ ಸುಖಕ್ಕೆ ಮನಸ್ಸು ಮಾಡಬಾರದು. ಯಾಕಂದರೆ, ಯಾವ ಅಕ ಲ್ಪಿತ ಕಾರಣದಿಂದ ನಾನು ಇಷ್ಟು ತೀವ್ರವಾಗಿ ರಣಜಿತಸಿಂಹನಿಂದ ಈ ಭಾಗ್ಯೋ ದಯವನ್ನು ಹೊಂದಿದೆನೋ, ಅಂಥದೇ ಕಾರಣ ಮೂಲಕ ಅವನಿಂದಲೇ ನನ್ನ ಭಾಗ್ಯಾಸ್ತವು ತೀವ್ರವೇ ಆಗಲಿಕ್ಕಿಲ್ಲೆಂದು ಅದಾರು ಹೇಳಬೇಕು? ಅದು ಹೇಗೆಯೇ ಇರಲಿ, ನಾನು ನನ್ನ ನಿಜ ಸಂಗತಿಯನ್ನು ಮಹಾರಾಜರಿಗೆ ತಿಳಿಸ ಬೇಕು; ಫಕೀರಜಿಗೂ ತಿಳಿಸಬೇಕು ಇದೇ ನನ್ನ ಈಗಿನ ಕರ್ತವ್ಯವಾಗಿರುತ್ತದೆ.

ಆದರೆ ಮಹಾರಾಜರು ನನಗೆ ಏಕಾಂತದಲ್ಲಿ ದೊರೆಯುವ ಬಗೆ ಹೇಗೆ? ಸದಾ ಸರ್ವದಾ ಅವರ ಹತ್ತರ ಎಷ್ಟೋ ಜನರು ಇದ್ದೇ ಇರುತ್ತಾರೆ. ಒಂದು ವೇಳೆ ನಾನು ಅಂಥ ಸಮಯವನ್ನೇ ಸಾಧಿಸಿ ಅವರಿಗೆ ಅದನ್ನು ಹೇಳಿದರೂ, ಅವರು ನನ್ನ ಸಂಗತಿಯನ್ನು ನಂಬಬಹುದೋ? ನಂಬಿದರೂ ಅವರಿಗೆ ಅದರಿಂದ ವಿಷಾದವೆನಿಸಲಿಕ್ಕಿಲ್ಲವೆ? ಇನ್ನು ಸ್ವತಃ ನಾನೇ ಈ ಸಂಗತಿಯನ್ನು ಅವರಿಗೆ ತಿಳಿ ಸದೆ, ಫಕೀರಜಿಯು ಮುಖಾಂತರ ತಿಳಿಸಬೇಕೆಂದರೆ, ಫಿರಂಗಿಯೆಂದು ಅವನು ನನ್ನಲ್ಲಿ ಎಷ್ಟು ಶ್ರದ್ಧೆಯನ್ನು ವಹಿಸಿರುವನೋ, ನಾನು ಹಿಂದುವೆಂಬದನ್ನು ತಿಳಿದ ನಂತರ ಅವನಲ್ಲಿಯ ಆ ಶ್ರದ್ಧೆಯು ದೃಢಮೂಲವಾಗಿ ಉಳಿಯುವದೋ ಇಲ್ಲವೋ? ನಾನು ಆ ಉದಾರ ಚರಿತರ ವಿಷಯದಲ್ಲಿ ಇಷ್ಟು ಅವಿಶ್ವಾಸವನ್ನು ತಾಳುವದಾದರೂ ಉಚಿತವೇ? ಯಾವ ದೇವರಲ್ಲಿ ವಿಶ್ವಾಸವನ್ನು ತಾಳಿ ನಾನು ಇಂಗ್ಲಂಡವನ್ನು ಬಿಟ್ಟು ಇಲ್ಲಿಗೆ ಬಂದಿರುವೆನೋ, ಅದೇ ದೇವರ ಮೇಲೆ ಭಾರ ಹಾಕಿ ನಾನು ನನ್ನ ಕರ್ತವ್ಯವನ್ನು ಮಾಡುತ್ತೇನೆ. ಮುಂದೆ ಆದದ್ದು ಆಗಲಿ.'’

ಹೀಗೆ ಅವನು ತನ್ನಲ್ಲಿಯೇ ಆಲೋಚಿಸುತ್ತ ಬಿದ್ದುಕೊಂಡಿರಲು, ಫಕೀ ರಜಿಯು ತಮ್ಮನಾದ ಕಾಲಿಫಾನೂರುದ್ದೀನನು ತನ್ನ ಭೆಟ್ಟಿಗೆ ಬಂದಿರುವನೆಂಬ ದನ್ನು ಚಾರರ ಮುಖಾಂತರವಾಗಿ ತಿಳಿದು, ಎದ್ದು ಕುಳಿತು ಅವನನ್ನು ಬರ ಮಾಡಿಕೊಂಡನು. ನೂರುದ್ದೀನನು ಬಂದವನೇ:—ಸಾಹೇಬ, ನಿಮ್ಮ ದೈವವು ಬಲವತ್ತರವಾದದ್ದೇ ಸರಿ. ಅಂತೇ ರಣಜಿತಸಿಂಹ ಮಹಾರಾಜರು ಎಂದೂ

ಯಾರಿಗೂ ತೋರಿಸದಷ್ಟು ದಯೆಯನ್ನೂ, ಆದರವನ್ನೂ ತೋರಿ, ನಿಮ್ಮನ್ನು ಸನ್ಮಾನಿಸಿದರು. ಇಷ್ಟು ದಿವಸಗಳಲ್ಲಿ ಅವರ ಕೃಪೆಯನ್ನು ನಿಮ್ಮಷ್ಟು ಸಹಜವಾಗಿ ಯಾರೂ ಸಂಪಾದಿಸಿರುವದಿಲ್ಲ.

ಡಬ್ಲಿನ್ನನು ನೂರುದ್ದೀನನನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡು:— ಶಾಲೀಫಜೀ, ತಮ್ಮ ಹಾಗು ತಮ್ಮ ಸಹೋದರರ ಅಕಲ್ಪಿತ ಕೃಪೆಯ ಬಲದಿಂದಲೇ ಮಹಾರಾಜರ ಕೃಪೆಯು ನನಗಿಂದು ಲಭಿಸಿತು. ನೀವೇ ನನಗೆ ಆಶ್ರಯ ಕೊಡದಿದ್ದರೆ ಹಾಗು ಮಹಾರಾಜರಲ್ಲಿ ನನ್ನ ವಿಷಯವಾಗಿ ನಿಮ್ಮ ಛಿಡೆ-ಮುರುವತ್ತುಗಳನ್ನು ಖರ್ಚು ಮಾಡದಿದ್ದರೆ, ನನ್ನನ್ನು ಇಲ್ಲಿ ಕೇಳುವವರಾರಿದ್ದರು? ಆದ್ದರಿಂದ ಮಹಾರಾಜರ ಕೃಪೆಗಿಂತಲೂ ನಾನು ನಿಮ್ಮ ಕೃಪೆಗೇ ಹೆಚ್ಚು ಮಹತ್ವವನ್ನು ಕೊಡುತ್ತೇನೆ.

ಕಾಲೀಫ:—ನಮ್ಮ ಅಣ್ಣಂದಿರು ನಿಮ್ಮ ವಿಷಯದಲ್ಲಿ ಒಳ್ಳೇ ಪ್ರಸನ್ನಚಿತ್ತರಾಗಿದ್ದಾರೆ. ನಿಮಗೆ ಇಷ್ಟು ಸಹಾಯ ಮಾಡುವದರಲ್ಲಿ ಅವರ ಉದ್ದೇಶವೇನಿದೆಯೆಂಬದು ನಿಮಗೆ ಬೇಗನೆ ತಿಳಿದೀತು. ನಿಮಗೆ ಸಹಾಯ ಮಾಡುವವರು ಹೇಗೆ ಕೆಲ ಜನರಿರುವರೋ ಹಾಗೆಯೇ ನಿಮ್ಮನ್ನು ಕಂಡರೆ ನಿಷ್ಕಾರಣವಾಗಿ ದ್ವೇಷಿಸುವವರೂ ಕೆಲಜನರಿರುತ್ತಾರೆಂಬದನ್ನು ನೀವು ಮರೆಯಲಾಗದು. ಅದನ್ನು ತಿಳಿಸುವದಕ್ಕಾಗಿಯೇ ನಾನು ಈಗ ಬೇಕಂತ ನಿಮ್ಮೆಡೆಗೆ ಬಂದಿರುತ್ತೇನೆ. ನಿಮ್ಮನ್ನು ದ್ವೇಷಿಸುವವರಲ್ಲಿ ರಾಜಾ ಧ್ಯಾನಸಿಂಹ ಮತ್ತು ರಾಜಾ ಗುಲಾಬಸಿಂಹರೆಂಬ ಇಬ್ಬರು ಸಹೋದರರೇ ಪ್ರಮುಖರಾಗಿದ್ದಾರೆ. ಅವರಿಬ್ಬರೂ ರಣಜಿತನ ದರ್ಬಾರದಲ್ಲಿ ಅಗ್ರಗಣ್ಯರು. ರಣಜಿತನ ದರ್ಬಾರದಲ್ಲಿ ರಾಜಾಧ್ಯಾನಸಿಂಹನು ಮಾಡಿದ್ದೇ ಮಾಟ್ಕು. ಆದುದರಿಂದ ನೀವು ಆ ಇಬ್ಬರನ್ನು ಪ್ರಸನ್ನೀಕರಿಸಿಕೊಳ್ಳಲಿಕ್ಕೆ ಮನಸರಿ ಮಾಡಬೇಡಿರಿ. ರಣಜಿತಸಿಂಹನ ಪೂರ್ಣಕೃಪೆಯು ನಿಮ್ಮ ಮೇಲೆ ಸದೋದಿತವಾಗಿರಲಿಕ್ಕೆ ಸ್ವತಃ ರಣಜಿತನಿಗಿಂತ ಆ ಇಬ್ಬರು ಬಂಧುಗಳೇ ಹೆಚ್ಚು ಕಾರಣರಾಗಿರುತ್ತಾರೆ. ನೀವು ತರುಣರಿದ್ದು ತೇಜಸ್ವಿಗಳಾಗಿರುವಿರಿ; ಆದರೆ ನೀವು ನಿಮ್ಮ ತೇಜಸ್ವಿತೆಯನ್ನು ಅನಿವಾರ್ಯ ಪ್ರಸಂಗದ ಹೊರತು ಹೊರಗೆ ತೋರಗೊಡಕೂಡದು. ಯಾಕೆಂದರೆ ಈ ಪಂಜಾಬದಲ್ಲಿ ಈ ನಿಮ್ಮ ಆತ್ಮಸಂಯಮನದಿಂದಲೇ ನಿಮ್ಮ ಸುಕೀರ್ತಿಯಾಗುವದಿದೆ.

ಡಬ್ಲಿನ್ನ ಸಾಹೇಬ, ಇಲ್ಲಿಯ ರಾಜನೀತಿಯು ನಿಮ್ಮ ಯುರೋಪಿಯನ್ ರಾಜನೀತಿಯಂತೆ ಸರಳವಾಗಿಲ್ಲ. ಇಲ್ಲಿ ಎಲ್ಲರೂ ಆ ಧ್ಯಾನಸಿಂಹ-ಗುಲಾಬ

ಸಿಂಹರು ಹೇಳಿದಂತೆಯೇ ನಡೆಯಬೇಕು. ಅವರಿಗೆ ಸ್ವಲ್ಪಾದರೂ ವಿರೋಧಿಸಿದರೆ, ಅವರು ಅವನನ್ನು ಪಕ್ಷಿ ಹತ್ತಿದಂತೆ ಕೊಲೆಮಾಡಿಸಿ ಬಿಡುವರು! ನೀವು ಹೇಗೂ ವಿಚಾರವಂತರೂ ಸಮಯವನ್ನು ನೋಡಿ ನಡೆಯುವವರೂ ಆಗಿರುವದರಿಂದ, ನಿಮ್ಮಂಥವರಿಗೆ ನಾನು ಹೆಚ್ಚಿಗೆ ಹೇಳುವದೇನಿದೆ? ಎಂದಂದು ಕಾಲೀಫನು ಮಿಠಾಯಿಗಳಿಂದ ತುಂಬಿದ ಕೆಲವು ತಾಟುಗಳನ್ನೂ, ಭಂಗಾರದ ನಾಣ್ಯಗಳಿಂದ ತುಂಬಿದ ಒಂದು ಹಮ್ಮಿಣಿಯನ್ನೂ ತನ್ನ ನೌಕರರಿಂದ ಡಬ್ಲಿನ್ನನ ಎದುರಿಗೆ ಇಡಿಸಿದನು.

ಅವುಗಳನ್ನು ಕಂಡು ಡಬ್ಲಿನ್ನನು ಸಂತೋಷವನ್ನು ವ್ಯಕ್ತಗೊಳಿಸುತ್ತ:--ಕಾಲೀಫಜೀ, ನೀವು ಇದನ್ನೇತಕ್ಕೆ ತಂದಿರಿ? ನಿಮ್ಮ ಅಣ್ಣಂದಿರು ಕಳಿಸಿದರೇನು? ಎಂದು ಕೃತಜ್ಞತಾದರ್ಶಕ ದನಿಯಿಂದ ನುಡಿಯಲು,

"ಇಲ್ಲ-ಸಾಹೇಬ, ಇವನ್ನು ನಮ್ಮ ಅಣ್ಣಂದಿರು ಕಳಿಸಿರುವದಿಲ್ಲ. ಇವುಗಳನ್ನು ಸ್ವತಃ ಮಹಾರಾಜರೇ ನಿಮಗೆ ಮುಟ್ಟಿಸಿ ಬಾರೆಂದು ನನಗೆ ಹೇಳಿ ಕಳಿಸಿದ ಮೇರೆಗೆ ನಾನು ತಂದಿರುತ್ತೇನೆ. ಸಾಹೇಬ, ನಿಮ್ಮ ಕೂಡ ಬರೇ ದಂಡಿನ ಶಿಪಾಯಿಗಳೇ ಇರುವಂತೆ ಕಾಣುತ್ತದೆ. ನಿಮ್ಮ ದಂಡಿನ ಹಾಗು ಇತರ ಲೆಕ್ಕಪತ್ರಗಳನ್ನು ನೋಡಲಿಕ್ಕೆ ನಿಮಗೊಬ್ಬ ಆಸಾಮಿಯನ್ನು ನಾನು ಕಳಿಸಬೇಕೆಂದು ಮಾಡಿರುತ್ತೇನೆ. ಆತನು ಒಳ್ಳೇ ವಿಶ್ವಾಸುಕನಾದ ಬಂಗಾಲೀ ಬ್ರಾಹ್ಮಣನು. ಆತನಿಗೂ ಅಲ್ಪ-ಸ್ವಲ್ಪ ಇಂಗ್ಲಿಷ ಭಾಷೆಯ ಜ್ಞಾನವಿದೆ. ಕಳಿಸಲಿಕ್ಕೆ ತಿಳಿಸಿದರೆ ನಾಳೆಗೆ ಅವನನ್ನು ನಿಮ್ಮ ಆಶ್ರಯಕ್ಕೆ ಕಳಿಸುತ್ತೇನೆ. ಅವನು ಬಹು ದಿನಗಳಿಂದ ನಮ್ಮಲ್ಲಿರುತ್ತಾನೆ."

"ಕಳಿಸಿರಿ, ನೋಡೋಣ; ಅವನು ನನ್ನ ಕೆಲಸಕ್ಕೆ ಎಷ್ಟರ ಮಟ್ಟಿಗೆ ನೆರವಾಗುತ್ತಾನೆಂಬುದನ್ನು" ಎಂದು ಹೇಳಿ, ಆಗಲೆ ಹೋಗಲಿಕ್ಕೆ ಹೊರಟು ನಿಂತಿದ್ದ ಕಾಲೀಫನಿಗೆ ಅಪ್ಪಣೆ ಕೊಟ್ಟು ಕಳುಹಿದನು.

ಡಬ್ಲಿನ್ನನು ರಣಜಿತನಲ್ಲಿ ಆಶ್ರಯ ಬೇಡಲಿಕ್ಕೆ ಹೋದಾಗ ರಣಜಿತಸಿಂಗನ ವಯಸ್ಸು ೫೫ ಆಗಿರಬಹುದು. ಅವನ ವಿಷಯದ ಅಲ್ಪ ಮಾಹಿತಿಯನ್ನು ಈಗಲೆ ನಮ್ಮ ವಾಚಕರಿಗೆ ತಿಳಿಸಿಬಿಡುವೆವು. ಅವನು ಪುಡಿಯಾಳಾಗಿದ್ದು, ಒಕ್ಕಣ್ಣಿನವನಾಗಿದ್ದನು. ಅವನು ಬಾಲ್ಯದಿಂದಲೂ ಯುದ್ಧ ವ್ಯವಸಾಯದಲ್ಲಿಯೇ ಕಾಲ ಕಳೆದುದರಿಂದಲೂ, ರಾಜ್ಯಸಂಪಾದನದ ಹಲವು ಚಿಂತಾಜನಕ ಪ್ರಸಂಗಗಳಿಂದಲೂ ಅವನ ಮೋರೆಯ ಮೇಲೆ ವಾರ್ಧಕ್ಯದ ಕಳೆಯು ಒಡ

ಮೂಡಿತ್ತು. ಹೆಚ್ಚಾಗಿ ವಿಷಯಲಂಪಟಿಯಾದ್ದರಿಂದಲೇ ಅವನು ಹಾಗೆ ಮುಪ್ಪಾಗಿದ್ದನೆಂತಲೂ ಕೆಲವರು ಅನ್ನುತ್ತಿದ್ದರು. ಮೇಲಿನಂತೆ ಅವನ ಶಾರೀರಿಕ ವರ್ಣನೆಯು ಅಷ್ಟೊಂದು ಭವ್ಯವಾಗಿರದಿದ್ದರೂ, ಅವನ ಬೌದ್ಧಿಕ ವರ್ಣನೆಯು ಮಿಗಿಲಾದದ್ದಿತ್ತು. ಅವನು ಹುಟ್ಟಿದಂದಿನಿಂದ ಎಂದೂ ಸಾಲೆಗೆ ಹೋಗಿರಲಿಲ್ಲ. ಇಷ್ಟೇ ಅಲ್ಲ, ಅವನು ಒಂದು ಅಕ್ಷರವನ್ನು ಕೂಡ ಬರೆಯಲಿಕ್ಕೆ ಸಮರ್ಥನಾಗಿರಲಿಲ್ಲ. ಹೀಗಿದ್ದರೂ ಅವನೊಳ್ಳೇ ಬುದ್ಧಿಶಾಲಿಯಾಗಿದ್ದನು. ಆತನ ದೂರದೃಷ್ಟಿ, ಮುತ್ಸದ್ದೇಗಿರಿ, ಸ್ಮರಣಶಕ್ತಿ ಇವುಗಳು ಬಹು ಸೂಕ್ಷ್ಮ ಹಾಗು ತೇಜಸ್ವಿಗಳಾಗಿದ್ದವು. ಅವನನ್ನು ಗಾಢ ನಿದ್ದೆಯೊಳಗಿಂದ ಎಬ್ಬಿಸಿ, ಅವನಿಗೆ ರಾಜ್ಯದೊಳಗಿನ ಯಾವದೊಂದು ಇಕ್ಕಟ್ಟಿನ ಪ್ರಶ್ನೆಯನ್ನು ಮಾಡಿದರೂ, ಅವನು ಅದಕ್ಕೆ ಸಮರ್ಪಕವಾದ ಉತ್ತರವನ್ನು ತಟ್ಟನೆ ಕೊಡುತ್ತಿದ್ದನು. ಅವನ ಸ್ಮರಣಶಕ್ತಿಯಂತೂ ನಾಗರಹಾವಿನಂತೆ ಯಾವಾಗಲೂ ಒಳ್ಳೇ ಚುರುಕಾಗಿತ್ತು. ರಾಜ್ಯದೊಳಗಣ ಯಾವದೊಂದು ಕ್ಷುಲ್ಲಕ ಬಾಬಿನಿಂದ ಮೊದಲುಗೊಂಡು, ದೊಡ್ಡದೊಡ್ಡ ಸಂಸ್ಥಾನಿಕರ ಕಪ್ಪ-ಕಾಣಿಕೆಗಳ ವರೆಗಿನ ಅಂಕಿಗಳನ್ನೆಲ್ಲ ಅವನು ಬೇಕಾದಾಗ ನಿರಾಲೋಚನೆಯಿಂದ ಹೇಳುತ್ತಿದ್ದನು. ಸಣ್ಣ ಪುಟ್ಟ ಕಳವು ದರೋಡೆಗಳಿಂದ ದೊಡ್ಡ ದೊಡ್ಡ ಬಂಡಾಯಗಳ ವರೆಗಿನ ಎಲ್ಲ ಇತಿಹಾಸವೂ ಅವನ ಹೃದಯದಲ್ಲಿ ಸದಾ ಜಾಗೃತವಾಗಿರುತ್ತಿತ್ತು. ತನ್ನ ರಾಜ್ಯದೊಳಗಿನ ಯಾವನೊಬ್ಬ ಸಾಮಾನ್ಯ ಶಿಪಾಯಿಯನ್ನು ಮೊದಲುಮಾಡಿಕೊಂಡು ಮುಖ್ಯ ಅಮಾತ್ಯನ ವರೆಗಿನ ಎಲ್ಲರ ಗುಪ್ತ ಸಂಗತಿಗಳನ್ನೂ ಆತನು ಸಂಗ್ರಹಿಸಿ ತಿಳಕೊಂಡಿದ್ದನು. ಅದರಿಂದ ತನ್ನ ಮಿತ್ರರಾರು? ಶತ್ರುಗಳಾರು? ಎಂಬದನ್ನು ಅವನು ತನ್ನ ಅಂಗರಕ್ಷಕರಿಂದ ಕೇಳಿ ತಿಳಕೊಳ್ಳಬೇಕಾಗುತ್ತಿರಲಿಲ್ಲ. ಅವನ ನಡತೆಯು ತೀರ ಸಾದಾ ಇದ್ದುದರಿಂದ, ಬೇಕಾದವನು ಬೇಕಾದಾಗ ತನ್ನ ಬಳಿಗೆ ಬಂದು ತನ್ನ ಅಂಬೋಣವನ್ನು ತಿಳಿಸುತ್ತಿರಬೇಕೆಂದು ಅವನು ಎಲ್ಲರಿಗೂ ಜಾಹೀರ ರೀತಿಯಿಂದ ತಿಳಿಸಿದ್ದನು. ಅವನು ಗಂಭೀರನೂ, ಉದಾರನೂ ಆಗಿದ್ದನು. ಅವನು ದಯಾರ್ದ್ರಹೃದಯದವನಾಗಿದ್ದು, ಅನ್ಯಾಯ-ಒತ್ತಾಯಗಳು ಯಾರ ಮೇಲೂ ಆಗಬಾರದೆಂದು ಅವನ ಇಚ್ಛಿತವಾಗಿತ್ತು. ರಾಜಕೋಶಕ್ಕೆ ಬರುವ ದುಡ್ಡು ಪ್ರಜೆಗಳ ಪೂರ್ಣ ಸಂತೋಷದಿಂದ ಬರದಿದ್ದರೆ, ಆ ರಾಜ್ಯವು ಯಾವಾಗ ಬುಡಮೇಲಾದೀತೆಂಬದರ ಭರವಸೆ ಹಿಡಿಯಕೂಡದೆಂದು ರಣಜಿತಸಿಂಗನ ಮುಖ್ಯವಾದ ರಾಜನೀತಿಯಾಗಿದ್ದಿತು.

ಶೀಖಧರ್ಮದಂತೆ ನೋಡಿದರೆ ಅವನೊಬ್ಬ ಕರ್ಮಠನಾದ ಶೀಖನಾಗಿದ್ದನು. ಅಂತೇ ಅವನನ್ನು ಶೀಖರು ಹೆಚ್ಚಾಗಿ ಮನ್ನಿಸುತ್ತಿದ್ದರು; ಆದರೂ ರಣಜಿತಸಿಂಗನು ದಯಾಲುವೆಂದೂ ನ್ಯಾಯಪ್ರಿಯನೆಂದೂ ಆಗಿನ ಕಾಲದ ಎಲ್ಲ ಜನರೂ ಅವನನ್ನು ಹೊಗಳುತ್ತಿದ್ದರು. ರಾಜ್ಯವನ್ನೇ ಸಂಪಾದಿಸುವ ಉದ್ದೇಶವನ್ನಿಟ್ಟುಕೊಂಡದ್ದರಿಂದ ಅವನು ಅಲ್ಪ ಸ್ವಲ್ಪ ಲೋಭಿಯೂ ಆಗಿದ್ದನು; ಆದರೆ ಅದೇ ಧೇಯದಿಂದ ಪರರನ್ನು ಗೆದ್ದು ಮನೆಮಾರುಗಳಿಗೆ ಬೆಂಕಿಹಚ್ಚುವಂತಹ ರಾಜ್ಯಲೋಭಿಗಳೆದುರಿಗೆ ರಣಜಿತನು ಸಾಧು ಪುರುಷನೆಂದೇ ತಿಳಿಯಬಹುದು. ರಣಜಿತನು ಸಂಗ್ರಾಮದಲ್ಲಿ ಹೇಗೆ ಕಡುಗಲಿಯಾಗಿದ್ದನೋ, ನ್ಯಾಯವಿಚಾರಣೆಯಲ್ಲಿ ಹಾಗೆಯೇ ನ್ಯಾಯಪ್ರಿಯನಾದ ನ್ಯಾಯಾಧೀಶನಾಗಿದ್ದನು. ತನ್ನ ವಿಲಕ್ಷಣ ಬುದ್ಧಿಮತ್ತೆಯ ಮೂಲಕ ಅವನಿಗೆ ಪ್ರತಿಯೊಂದು ನ್ಯಾಯಪ್ರಕರಣದಲ್ಲಿ ನ್ಯಾಯವು ಎತ್ತ ಕಡೆಗಿದೆ, ಅನ್ಯಾಯವು ಎತ್ತ ಕಡೆಗಿದೆ? ಎಂಬದು ಕೂಡಲೆ ಕಂಡು ಬರುತ್ತಿತ್ತು. ಅಪರಾಧಿಯು ಎಂಥ ಗುರುತರ ಅಪರಾಧವನ್ನು ಮಾಡಿದ್ದರೂ ಅವನಿಗೆ ರಣಜಿತನು ಎಂದೂ ಪ್ರಾಣದಂಡದ ಶಿಕ್ಷೆಯನ್ನು ವಿಧಿಸುತ್ತಿರಲಿಲ್ಲ. ತನ್ನ ಪ್ರಜೆಗಳ ಮೇಲೆ ಅಧಿಕಾರಿಗಳ ಹಾಗು ಮಾಂಡಲಿಕ ಸಂಸ್ಥಾನಿಕರ ಒತ್ತಾಯವಾಗಬಾರದೆಂದು ಅವನು ಯಾವಾಗಲೂ ಜಾಗರೂಕನಾಗಿರುತ್ತಿದ್ದನು. ಯಾವನೊಬ್ಬನಿಗೆ ಯಾರಿಂದಾದರೂ ಆ ತರದ ಒತ್ತಾಯವಾದರೆ ಅವನು ನೆಟ್ಟಗೆ ತನ್ನ ಬಳಿಗೆ ಬಂದು ಅದನ್ನು ತಿಳಿಸಬೇಕೆಂದು ಅವನು ತನ್ನ ಪ್ರಜೆಗಳಿಗೆ ಕಟ್ಟಪ್ಪಣೆ ಗೈದಿದ್ದನು. ಈ ಹುಕುಮಿನಿಂದ ರಣಜಿತನಿಗೆ ಬಹು ಅನುಕೂಲವಾಗುತ್ತಿತ್ತು. ಯಾಕಂದರೆ ಪ್ರತಿಯೊಬ್ಬ ಅಧಿಕಾರಿಯೂ, ಸಂಸ್ಥಾನಿಕನೂ ಇವನಿಗೆ ಬಹಳ ಅಂಜಿ ನಡೆಯುತ್ತಿದ್ದರು.

ಅಂದ ಮೇಲೆ ಆ ಕಾಲಕ್ಕೆ ಪ್ರಜೆಗಳನ್ನು ಯಾರೂ ಹಿಂಸಿಸುತ್ತಿದ್ದಿಲ್ಲವೆಂದು ತಿಳಿಯಲಾಗದು; ಆದರೆ ಕೆಲವು ಅಪವಾದಗಳನ್ನು ಬಿಟ್ಟು ಸರ್ವಸಾಮಾನ್ಯ ಪ್ರಜೆಗಳು ಆ ಕಾಲಕ್ಕೆ ಸುಖ-ಸಮಾಧಾನದಿಂದಿರುತ್ತಿದ್ದರು. ರಣಜಿತಸಿಂಗನ ವಿಷಯದಲ್ಲಿ ಮುಖ್ಯವಾಗಿ ತಿಳಿಸುವದೇನಂದರೆ:--ಅವನೊಬ್ಬ ಸಾಮಾನ್ಯ ಸರದಾರನ ಮಗನು. ಅವನು ನಿರಕ್ಷರನು. ಕುರೂಪಿಯು. ಮೇಲಾಗಿ ತೀರ ಸಾದಾ ನಡತೆಯವನು. ಇಂಥ ಸಾಮಾನ್ಯ ಮನುಷ್ಯನು ಕೂಡ ತನ್ನ ಕರ್ತವ್ಯನಿಷ್ಠೆಯ ಬಲದಿಂದ ಪಂಜಾಬದಲ್ಲಿ ಶೀಖರ ರಾಜ್ಯವನ್ನು ಸ್ಥಾಪಿಸಿ, ಏಕಛತ್ರಪತಿಯಾಗಿ ಮೆರೆದನು. ಇಷ್ಟೇ ಅಲ್ಲ, ಸುತ್ತಮುತ್ತಲಿನ ಬಲವಾನ್ ಶತ್ರು

ಗಳಲ್ಲಿಯೂ ತನ್ನ ವಿಷಯದ ಅಂಜಿಕೆಯನ್ನು ಸ್ಥಿರಗೊಳಿಸಿ ಪಂಜಾಬದ ಸಿಂಹನೆಂದು ಪ್ರಸಿದ್ಧನಾದನು. ಆದರಿಂದ ರಣಜಿತಸಿಂಗನು ಸಾಮಾನ್ಯವ್ಯಕ್ತಿಯಾಗಿರದೆ, ವಿಲಕ್ಷಣ ಪ್ರತಿಭಾ ಸಂಪನ್ನನಾದ ಮಹಾರಾಜನಾಗಿದ್ದನೆಂಬದಕ್ಕೆ ಸಂದೇಹವಿಲ್ಲ.

ಇನ್ನು ರಣಜಿತನ ಪ್ರಧಾನಮಂಡಳವನ್ನು ಕುರಿತು ನಮ್ಮ ವಾಚಕರಿಗೆ ಕುಸ ಮಾಹಿತಿ ಮಾಡಿಕೊಡುವೆವು. ರಣಜಿತನ ರಾಜ್ಯದಲ್ಲಿ ರಾಜಾಧ್ಯಾನಸಿಂಹ, ಜಮಾದಾರ ಖೋಸಾಲಸಿಂಹ ಮತ್ತು ಫಕೀರ ಅಜೀಜುದ್ದೀನ ಎಂಬ ಮೂವರು ಮುಖ್ಯ ಪ್ರಧಾನರಾಗಿದ್ದರು. ರಣಜಿತಸಿಂಹನು ಆ ಮೂವರಲ್ಲಿಯೂ ವಿಶ್ವಾಸವಿಟ್ಟು, ಬಹುಶಃ ಅವರ ಮುಖಾಂತರವಾಗಿಯೇ ತನ್ನ ಎಲ್ಲ ರಾಜ್ಯಕಾರಭಾರವನ್ನು ನಡಿಸುತ್ತಿದ್ದನು. ಆ ಕಾಲಕ್ಕೆ ಪಂಜಾಬದಲ್ಲಿ ಆ ಮೂವರಿಗಿಂತಲೂ ಬೇರೆ ಯೋಗ್ಯರಾದ ದೊಡ್ಡ ಮನುಷ್ಯರಿದ್ದಿಲ್ಲವೆಂತಲ್ಲ; ಆದರೆ ಕಾರಣಾಂತರದಿಂದ ಅವರೇ ಆ ಕಾಲಕ್ಕೆ ಪ್ರಸಿದ್ಧಿ ಪಡೆದಿದ್ದರು. ಆ ಮೂವರಲ್ಲಿ ಧ್ಯಾನಸಿಂಹನೇ ಪ್ರಮುಖನು. ರಾಜಾಧ್ಯಾನಸಿಂಹ ಮತ್ತು ಜಮಾದಾರ ಖೋಸಾಲಸಿಂಹರ ಪ್ರವೇಶವು ರಣಜಿತನ ದರ್ಬಾರದಲ್ಲಿ ಯಾವ ಬಗೆಯಾಯಿತು? ಆದರಿಂದ ಅವರ ಅಭ್ಯುದಯವು ಎಷ್ಟು ತೀವ್ರವಾಗಹತ್ತಿತು? ಮುಂತಾದವುಗಳನ್ನು ನಮ್ಮ ಸುಶೀಲ ವಾಚಕರಿಗೆ ತಿಳಿಸುವದು ಅಯೋಗ್ಯವಾದುದರಿಂದ ಆ ಬಗ್ಗೆ ಮೂಕವೃತ್ತಿಯನ್ನು ಅವಲಂಬಿಸುವದೇ ವಿಹಿತವಾಗಿದೆ. ಧ್ಯಾನಸಿಂಗನಿಗೆ ಗುಲಾಬಸಿಂಹ ಮತ್ತು ಸುಚೇತಸಿಂಹರೆಂಬ ಹೆಸರಿನ ಇನ್ನೂ ಇಬ್ಬರು ತಮ್ಮಂದಿರಿದ್ದರು. ಈ ಮೂವರು ಸಹೋದರರೂ ವಿಲಕ್ಷಣ ರಾಜಕಾರಸ್ಥಾನಿಗಳಾಗಿದ್ದರು. ಗುಲಾಬಸಿಂಹನಂತೂ ರಾಜದ್ರೋಹವನ್ನು ಮಾಡಿ ಇಂಗ್ಲಿಷರಿಗೆ ೭೫ ಲಕ್ಷ ರೂಪಾಯಿಗಳನ್ನು ಕೊಟ್ಟು ಕಾಶ್ಮೀರಪ್ರಾಂತವನ್ನು ನುಂಗಿಬಿಟ್ಟಿದ್ದನು! ಆ ಮೂವರ ಅಧಿಕಾರ-ಸಂಪತ್ತುಗಳು ಆ ಶೀಖರಾಜ್ಯದಲ್ಲಿ ಎಲ್ಲರಿಗಿಂತಲೂ ಮಿಗಿಲಾಗಿದ್ದವು. ಅವರು ಕ್ಷತ್ರಿಯವಂಶಜರಾಗಿದ್ದರು; ಆದರೂ ಅವರು ಪ್ರಸಿದ್ಧ ಮನೆತನದವರಿದ್ದಿಲ್ಲ; ಅಲ್ಲದೆ ಅವರ ವ್ಯವಸಾಯವೂ ತಕ್ಕಪ್ರಕಾರದ್ದಿರಲಿಲ್ಲ. ಮೊದಲು ಗುಲಾಬಸಿಂಹನು ಒಬ್ಬ ಸಾಮಾನ್ಯ ಶಿಪಾಯಿಯಾಗಿದ್ದನು. ಅವನು ಒಬ್ಬ ಮನುಷ್ಯನ ಕೊಲೆ ಮಾಡಿದ್ದರಿಂದ ಅವನನ್ನು ಹಿಡಿಯಲಿಕ್ಕೆ ವಾರಂಟುಗಳು ಹೊರಡಲು, ಅವನು ಸ್ವದೇಶದಿಂದ ಪಂಜಾಬಕ್ಕೆ ಓಡಿಹೋಗಿ ರಣಜಿತನ ಆಶ್ರಯವನ್ನು ಹೊಂದಿದನು. ಬರಬರುತ್ತ ಅಲ್ಲಿ ಗುಲಾಬಸಿಂಹನು ತಲೆಯೆತ್ತ

ಲಾರಂಭಿಸಿದನು. ಮುಂದೆ ಅವನು ತನ್ನ ಅಣ್ಣ-ತಮ್ಮಂದಿರಾದ ಧ್ಯಾನಸಿಂಹ-ಸಜೇತಸಿಂಹರನ್ನು ಅಲ್ಲಿಗೆ ಕರಿಸಿಕೊಂಡನು; ಹಾಗು ಅವರಿಗೂ ರಣಜಿತನ ಆಶ್ರಯವನ್ನು ದೊರಕಿಸಿಕೊಟ್ಟನು. ಧ್ಯಾನಸಿಂಹನು ಹುಟ್ಟಾ ಶ್ರೀಮಂತನೂ, ಬುದ್ಧಿವಂತನೂ, ಕಾರಸ್ಥಾನಿಯೂ ಆಗಿದ್ದನು. ಅದರಿಂದ ಅವನು ಕ್ಷಿಪ್ರದಲ್ಲಿಯೇ ತನ್ನ ಕಾರಸ್ಥಾನಗಳ ಬಲದಿಂದ ರಣಜಿತಸಿಂಗನ ಮುಖ್ಯ ಅಮಾತ್ಯನಾದನು; ಹಾಗು ತನ್ನ ಇಬ್ಬರೂ ತಮ್ಮಂದಿರನ್ನು ಸೇನಾಪತಿಗಳನ್ನಾಗಿ ನಿಯಮಿಸಿ, ಬೇರೆ ಬೇರೆ ಪ್ರಾಂತಗಳ ಮೇಲೆ ಕಳಿಸಿಕೊಟ್ಟನು. ಒಬ್ಬ ಸಾಮಾನ್ಯ ಮನುಷ್ಯನು ಇಷ್ಟು ತೀವ್ರವಾಗಿ ಉಚ್ಚಪದವಿಯನ್ನು ಹೊಂದಿದ್ದಕ್ಕೆ ರಣಜಿತಸಿಂಗನ ವಿಷಯಲಂಪಟತನವೇ ಕಾರಣವೆಂದು ಆ ಕಾಲದ ಕೆಲವರು ಅನ್ನಲಿಕ್ಕೆ ಹಿಂಜರಿಯಲಿಲ್ಲ!

ರಾಜಾಧ್ಯಾನಸಿಂಹನಿಗೆ ಅಷ್ಟು ದೊಡ್ಡ ಅಧಿಕಾರವು ಕೈಸೇರಿದ ಬಳಿಕ ಅವನು ತನ್ನ ತಮ್ಮಂದಿರೊಡನೆ ಪ್ರಜೆಗಳನ್ನು ಬಗೆಬಗೆಯಾಗಿ ಹಿಂಸಿಸಿ, ಅವರನ್ನು ಸೆಳೆಯಲುಪಕ್ರಮಿಸಿದನು; ಆದರೆ ಆ ಸಂಗತಿಯು ರಣಜಿತಸಿಂಹನ ಕಿವಿಗೆ ಮುಟ್ಟಬಾರದೆಂದು ಅವನು ಬಹಳ ಎಚ್ಚರಪಡುತ್ತಿದ್ದನು. ಅದಕ್ಕಾಗಿಯೇ ದಿನಗಳ ಬಾಲದಂತೆ ಅವನು ಸದಾ ರಣಜಿತನ ಹತ್ತರವೇ ಇರುತ್ತಿದ್ದನು. ಯಾವಾಗಾದರೊಮ್ಮೆ ರಣಜಿತನಿಂದ ದೂರ ಹೋಗುವ ಪ್ರಸಂಗ ಬಂದರೆ, ಅವನು ತನ್ನ ಕೇವಲ ವಿಶ್ವಾಸುಕರಾದ ಹೇರರನ್ನು ರಣಜಿತನ ಹತ್ತರ ಅವನಿಗೆ ತಿಳಿಯದಂತೆ ಇಟ್ಟು ಹೋಗುತ್ತಿದ್ದನು. ರಾಜಾಧ್ಯಾನಸಿಂಹನು ರಣಜಿತನ ಮುಖ್ಯ ಪ್ರಧಾನನಾಗಿದ್ದರೂ, ತಾನು ಒಳ್ಳೇ ನಿಸ್ಪೃಹನಿರುವೆನೆಂದು ತೋರಿಸುವದಕ್ಕಾಗಿ ಅವನು ರಣಜಿತನ ದರ್ಬಾರದಲ್ಲಿ ಸಿಂಹಾಸನದ ಹತ್ತರ ಕೇವಲ ನೆಲದ ಮೇಲೆಯೇ ಕೂಡ್ರುತ್ತಿದ್ದನು. ಆತನ ಈ ಡಾಂಭಿಕತನವು ರಣಜಿತಸಿಂಗನಿಗೆ ಗೊತ್ತಾಗಿದ್ದಿಲ್ಲವೆಂತಲ್ಲ; ಆದರೆ ಯಾವ ಕಾರಣದಿಂದಲೋ, ಅವನು ಅದನ್ನು ಎಂದೂ ವ್ಯಕ್ತಗೊಳಿಸುತ್ತಿದ್ದಿಲ್ಲ. ಧ್ಯಾನಸಿಂಹನಾದರೂ ತನ್ನ ಒಡೆಯನಾದ ರಣಜಿತಸಿಂಹನಂತೆ ನಿರಕ್ಷರ ಕುಕ್ಷಿಯಾಗಿದ್ದನು; ಆದರೂ ಅವನು ಬುದ್ಧಿವಂತನಿದ್ದನೆಂಬುವ ವಿಷಯದಲ್ಲಿ ಶಂಕೆಯಿರಲಿಲ್ಲ.

ಜಮಾದಾರ ಖೋಸಾಲಸಿಂಹನು ಪಂಜಾಬಿಯಾಗಿರದೆ ಶಹಾರಾಣಪುರದ ರಜಪೂತನಾಗಿದ್ದನು. ಅವನು ಮೊದಲು ರಣಜಿತಸಿಂಗನ ಅಂಗರಕ್ಷಕರ ಜಮಾದಾರನಾಗಿದ್ದನು. ಆತನು ತನ್ನ ಪ್ರಾಯದಲ್ಲಿ ಒಳ್ಳೇ ರೂಪಸಂಪನ್ನನಾಗಿದ್ದನು.

ಡಬ್ಲಿನ್ನನ ಕಾಲಕ್ಕೆ ಆತನು ವೃದ್ಧನಾಗಿದ್ದದರಿಂದ ಅವನ ಸೌಂದರ್ಯವೆಲ್ಲ ಅಡಗಿ ಹೋಗಿತ್ತು. ಆತನು ರಣಜಿತನ ಮಂತ್ರಿಯಾಗುವಷ್ಟು ರಣವೀರನೂ ಅಲ್ಲ; ಮುತ್ಸದ್ದಿಯೂ ಅಲ್ಲ. "ನದಿಯ ಮೂಲ, ಋಷಿಯ ಕುಲ, ದೊಡ್ಡವರ ಶೀಲ ನೋಡಬಾರದೆ"ಂಬ ಗಾದೆಯ ಮಾತಿನಂತೆ ಅವನು ಯಾವ ಬಗೆಯಿಂದಲೋ ರಣಜಿತಸಿಂಹನ ಸಚಿವನಾಗಿದ್ದನು. ಆತನು ಮಂತ್ರಿಯಾಗಿದ್ದರೂ ಜನರು ಅವನನ್ನು ಜಮಾದಾರ ಖೋಸಾಲಸಿಂಹನೆಂದೇ ಗುರುತಿಸುತ್ತಿದ್ದರು. ಖೋ-ಸಾಲಸಿಂಹನಲ್ಲಿ ಮಂತ್ರಿಪದದ ಯಾವ ಗುಣಗಳೂ ಇರದ್ದರಿಂದ ಅವನನ್ನು ರಣ ಜಿತನು ಹಲಕೆಲವು ಸಾರೆ ಆ ಪದದಿಂದ ತೆಗೆದು ಹಾಕಿದ್ದನು; ಆದರೂ ಯಾವು ದೋ ಒಂದು ವಿಶಿಷ್ಟ ಕಾರಣದ ಮೂಲಕ ಅವನನ್ನು ಮತ್ತೆ ಮತ್ತೆ ಮಂತ್ರಿ ಯಾಗಿ ನೇಮಿಸುತ್ತಿದ್ದನು.

ಫಕೀರ ಅಜೀಜುದ್ದೀನನೆಂಬ ರಣಜಿತಸಿಂಹನ ತೃತೀಯ ಸಚಿವನು ಜಾತಿ ಯಿಂದ ಹಜಾಮನಾಗಿದ್ದನು. ಅವನು ರಣಜಿತಸಿಂಗನ ರಾಜ್ಯದಲ್ಲಿ ಕೆಲದಿನ ಗಳನ್ನು ತನ್ನ ಪಿತ್ರಾರ್ಜಿತ ಕುಲಕಸಬಾದ ಕ್ಷೌರವನ್ನು ಮಾಡುತ್ತ ಕಳೆದನು. ಚಿಕ್ಕಂದಿನಿಂದಲೇ ಫಕೀರಜಿಯು ಒಳ್ಳೇ ಬುದ್ಧಿಶಾಲಿಯಾಗಿದ್ದು, ಧರ್ಮಶಾಸ್ತ್ರ ವನ್ನು ಅಭ್ಯಾಸ ಮಾಡಿದವನಾಗಿದ್ದನು. ಆತನು ತನ್ನ ಕುಲಕಸಬಿಗನುಗುಣ ವಾಗಿ ಮಿಷ್ಟ ಭಾಷಣ ಮಾಡುವವನೂ, ಸಮಯೋಚಿತ ಉತ್ತರ ಕೊಡುವ ವನೂ ಆಗಿದ್ದನು. ಮುಂದಿಯ ಮನಸ್ಸನ್ನು ನೋಯಿಸದಂತೆ ತನ್ನ ಕೆಲಸವನ್ನು ಹೇಗೆ ಕೈಗೂಡಿಸಿಕೊಳ್ಳಬೇಕೆಂಬ ಕಲೆಯು ಅವನಿಗೆ ಚೆನ್ನಾಗಿ ಅವಗತವಾಗಿ ದ್ದಿತು. ಆತನು ದೇಹದಾರ್ಢ್ಯವುಳ್ಳವನಾಗಿದ್ದನಲ್ಲದೆ, ರೂಪಸಂಪನ್ನನೂ ಆಗಿ ದ್ದನು. ಅಭ್ಯುದಯವನ್ನು ಹೊಂದಬೇಕೆಂದು ಆತನು ಮೊದಲಿಗೆ ಯಾವನೋ ಒಬ್ಬ ರಾಜನ ದಂಡಿನಲ್ಲಿ ಶಿಪಾಯಿಯಾದನು. ಅಲ್ಲಿ ಅವನು ಉತ್ತಮ ರೀತಿ ಯಿಂದ ಕೆಲಸ ಮಾಡುತ್ತಿದ್ದರೂ, ಅವನ ಒಡೆಯನು ಅವನಿಗೆ ಪ್ರಸನ್ನನಾಗದೆ, ಇವನನ್ನು ನೌಕರಿಯಿಂದ ತೆಗೆದುಬಿಟ್ಟನು! ಅಂದಿನಿಂದ ಅವನು ತೀರ ಉದ್ವಿಗ್ನ ನಾಗಿ, ಫಕೀರವೃತ್ತಿಯನ್ನವಲಂಬಿಸಿ, ಭಿಕ್ಷೆ ಮಾಡಿ ಉಪಜೀವಿಸತೊಡಗಿದನು. ಒಮ್ಮೆ ಆತನು ಲಾಹೋರಕ್ಕೆ ಬಂದಿರಲು, ಅವನಿಗೆ ರಣಜಿತಸಿಂಗನ ಭೆಟ್ಟಿಯ ಯೋಗವೊದಗಿತು. ಫಕೀರಜಿಯ ಅಸಾಮಾನ್ಯ ಪಾಂಡಿತ್ಯ ಹಾಗು ಬುದ್ಧಿ ಮತ್ತೆಯನ್ನು ಪರೀಕ್ಷಿಸಿ ರಣಜಿತನು ಅವನಿಗೆ ಆಶ್ರಯವಿತ್ತನು. ರಣಜಿತನ ಆಶ್ರಯದಲ್ಲಿರ ಹತ್ತಿದ ಬಳಿಕ ಬೇರೆ ಬೇರೆ ಪ್ರಸಂಗಗಳಲ್ಲಿ ಅವನು ರಣಜಿತಸಿಂಗ

ನಿಗೆ ಯೋಗ್ಯ ಸಲಹೆಗಳನ್ನು ಕೊಟ್ಟದ್ದರಿಂದ ರಣಜಿತನು ಪ್ರಸನ್ನನಾಗಿ ಅವನಿಗೆ ಮಂತ್ರಿಪದವನ್ನು ದಯಪಾಲಿಸಿದನು.

ಫಕೀರಅಜೀಜುದ್ದೀನನು ಹುಟ್ಟಾ ಹಜಾಮನ ಮಗನಾಗಿದ್ದರೂ, ಭಿಕ್ಷಾವೃತ್ತಿಯಲ್ಲಿ ಅವನು ಕೆಲಕಾಲವನ್ನು ಕಳೆದವನಾಗಿದ್ದರೂ, ಐಶ್ವರ್ಯಾಭಿಲಾಷೆಯು ಅವನಲ್ಲಿ ಹೆಚ್ಚಾಗಿರದಿದ್ದರೂ ಅವನು ಸಚಿವನಾಗಲಿಕ್ಕೆ ಸರ್ವ ಪ್ರಕಾರದಿಂದಲೂ ಯೋಗ್ಯನಿದ್ದನು. ಇಷ್ಟೇ ಅಲ್ಲ, ರಣಜಿತಸಿಂಗನ ದರ್ಬಾರದಲ್ಲಿ ಫಕೀರಅಜೀಜುದ್ದೀನನಂತಹ ಯೋಗ್ಯ ಹಾಗು ನಿಷ್ಣಾತ ಮಂತ್ರಿಯು ಇನ್ನೊಬ್ಬನಿರಲಿಲ್ಲ. ರಣಜಿತನು ಸಂಗ್ರಾಮಧುರೀಣನೂ, ನ್ಯಾಯನಿಷ್ಠುರನೂ ಆಗಿದ್ದರೂ ಅವನಲ್ಲಿ ವಾಕ್‌ಚಾತುರ್ಯವು ಲವಲೇಶವೂ ಇರಲಿಲ್ಲ. ತನ್ನ ಭಾವನೆಗಳನ್ನು ಹೇಗಾದರೂ ಮಾಡಿ ಮಂದಿಗೆ ತಿಳಿಸಲು ಸಮರ್ಥನಾಗಿದ್ದನು, ಇಷ್ಟೇ ಆತನ ಹೆಚ್ಚಿನ ವಾಕ್‌ಪಾಂಡಿತ್ಯವು; ಆದರೆ, ಫಕೀರಜಿಯು ಮಂತ್ರಿಯಾದಂದಿನಿಂದ ರಣಜಿತನ ದರ್ಬಾರದೊಳಗಿನ ಆ ಕೊರತೆಯು ಹೇಳಹೆಸರಿಲ್ಲದಾಯಿತು. ಯಾಕಂದರೆ ರಣಜಿತನ ಬಾಯಿಂದ ಶಬ್ದಗಳು ಹೊರಹೊರಡುವ ಮೊದಲೇ ಫಕೀರಜಿಯು ಆತನ ಮುಖಭಾವದಿಂದಲೇ ಅವನ ಆಶಯವನ್ನು ತಿಳಿದುಕೊಂಡು ತನ್ನ ಸುಂದರ ವಾಕ್ಸರಣಿಯಿಂದ ಅದನ್ನು ದರ್ಬಾರದಲ್ಲಿ ತಿಳಿಸುತ್ತಿದ್ದನು. ಆತನು ಇತ್ತೀಚೆಗೆ ರಣಜಿತನ ಪ್ರಧಾನನಾಗಿದ್ದರೂ ಜನರು ಅವನನ್ನು ಫಕೀರಜಿ ಎಂದೇ ಕರೆಯುತ್ತಿದ್ದರು. ಅವನಿಗಾದರೂ ಆ ಹೆಸರಿನ ಬಗ್ಗೆ ಒಳ್ಳೇ ಅಭಿಮಾನವೆನಿಸುತ್ತಿತ್ತು. ಡಬ್ಲಿನ್ಸನ ಕಾಲಕ್ಕೆ ಫಕೀರಜಿಯು ಸಾಧಾರಣವಾಗಿ ವೃದ್ಧಾವಸ್ಥೆಯನ್ನೇ ಹೊಂದಿದ್ದನು.

ಇವರ ಹೊರತು ರಣಜಿತನ ಅಮಾತ್ಯವರ್ಗದಲ್ಲಿ ರಾಮಸಿಂಗ, ಗೋವಿಂದರಾಮ, ವೇಣೀರಾಮ ಮುಂತಾದ ಇಮಾನೀ ಜನರಿದ್ದರು. ಇವರು ತಮ್ಮ ತಮ್ಮ ಕೆಲಸಗಳನ್ನು ದಕ್ಷತೆಯಿಂದ ಸಾಗಿಸುತ್ತಿದ್ದರು. ಇವರು ಅವ್ಯಾಪಾರೇಷು ವ್ಯಾಪಾರಗಳನ್ನು ಮಾಡಿ ಮುಂದೆ ಬಂದಿರಲಿಲ್ಲ. ಅದರಿಂದ ರಾಜ್ಯದಲ್ಲಿ ಇವರು ಖ್ಯಾತಿ ಪಡೆದಿರಲಿಲ್ಲ. ಆದರೂ ಇವರ ವರ್ಚಸ್ಸು ಚನ್ನಾಗಿದ್ದಿತು. ಪ್ರಜೆಗಳು ಇವರನ್ನು ಅಂತಃಕರಣಪೂರ್ವಕವಾಗಿ ಮನ್ನಿಸುತ್ತಿದ್ದರು. ರಾಮಸಿಂಗ ಹಾಗು ಗೋವಿಂದರಾಮ ಇವರಿಬ್ಬರೂ ಒಡಹುಟ್ಟಿದ ಅಣ್ಣ-ತಮ್ಮಂದಿರಿದ್ದು, ರಾಮಸಿಂಹನು ಶೀಖಪಂಥವನ್ನು ಸ್ವೀಕರಿಸಿದ್ದನು; ಗೋವಿಂದರಾಮನು ಹಿಂದುವೇ ಆಗಿದ್ದನು. ರಣಜಿತನ ರಾಜ್ಯದೊಳಗಿನ ದಂಡಿನ ಖರ್ಚು-ವೆಚ್ಚಗಳ ವ್ಯವಸ್ಥೆಯು

ರಾಮಸಿಂಹನ ಕಡೆಗಿದ್ದು, ಗೋವಿಂದರಾಮನು ಮುಲಕೀ ಖಾತೆಯ ಪ್ರಧಾನನಾಗಿದ್ದನು. ಗೋವಿಂದರಾಮನು ಒಳ್ಳೇ ದಕ್ಷನಾಗಿದ್ದದರಿಂದ, ಅವನು ಶೀಖ ಧರ್ಮದವನಿರದಿದ್ದರೂ, ರಣಜಿತಸಿಂಗನು ಅವನನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದನಲ್ಲದೆ, ಕೆಲ ಕೆಲವು ಪ್ರಸಂಗಗಳಲ್ಲಿ ತಾನು ಸ್ವತಃ ಅವನೆಡೆಗೆ ಹೋಗಿ ಅವನ ಸಲಹೆಗಳನ್ನು ಕೇಳಿಕೊಳ್ಳುತ್ತಿದ್ದನು. ವೇಣೀರಾಮನು ಮುಖ್ಯ ಖಜೀನದಾರನಿದ್ದನು. ಅವನಾದರೂ ರಣಜಿತನ ಪೂರ್ಣ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಇವರ ಹೊರತು ರಣಜಿತನ ದರ್ಬಾರದಲ್ಲಿ ೩-೪ ಜನ ಯುರೋಪಿಯನ್ನ ಅಧಿಕಾರಿಗಳೂ ಇದ್ದರು; ಆದರೆ ಅವರು ದಂಡಿನೊಳಗಿನ ಕವಾಯತ ಬಲ್ಲಂಥ ಸೇನಾನಿಗಳೆಂದಷ್ಟೇ ಪ್ರಸಿದ್ಧರಿದ್ದರು.

ಡಬ್ಲಿನ್ನನು ರಣಜಿತನ ಆಶ್ರಯವನ್ನು ಪಡೆದಾಗ ರಣಜಿತಸಿಂಗನಿಗೆ ಖಡ್ಗಸಿಂಹ, ಶೇರಸಿಂಹ ಮತ್ತು ತಾರಾಸಿಂಹರೆಂಬ ಹೆಸರಿನ ಮೂವರು ಮಕ್ಕಳಿದ್ದರು. ಮುಂದೆ ಕೆಲದಿನಗಳ ನಂತರ ದಲೀಪಸಿಂಹನೆಂಬ ನಾಲ್ಕನೆಯ ಮಗನಾದನು. ರಣಜಿತಸಿಂಹನಂತೆ ಅವನ ಮಕ್ಕಳಾರೂ ಪ್ರತಿಭಾಸಂಪನ್ನರಾಗಲಿಲ್ಲ. ಎಲ್ಲರೂ ಮೈಗಳ್ಳರೂ, ವ್ಯಸನಾಧೀನರೂ, ರಣಭೀರುಗಳೂ, ವಿಷಯಲಂಪಟರೂ ಆಗಿದ್ದರು. ಅವರಲ್ಲಿ ಶೇರಸಿಂಹನೆಂಬುವನು ಮಾತ್ರ ತುಸ ಗಂಡುಗಲಿಯಾಗಿದ್ದನು; ಆದರೆ ಅಸಚ್ಚರಿತ್ರ ಜನರ ಸಹವಾಸದಿಂದ ಅವನೂ ಹಾಳಾಗಿ ಹೋದನು. ದಲೀಪಸಿಂಹನು ಚಿಕ್ಕಂದಿನಿಂದ ಇಂಗ್ಲಂಡದಲ್ಲಿ ಬ್ರಿಟಿಶರ ಕೃಪಾಛತ್ರದಲ್ಲಿ ಬೆಳೆದಿದ್ದನು; ಆದರೂ ಅವನು ಅವರ ವಿರುದ್ಧವಾಗಿ ಆಚರಿಸಲಿಕ್ಕೆ ಹಿಂಜರಿಯಲಿಲ್ಲ. ಒಟ್ಟಿನ ಮೇಲೆ ಹೇಳುವದೇನಂದರೆ, ರಣಜಿತಸಿಂಹನು ಎಷ್ಟು ಕಷ್ಟಪಟ್ಟು ರಾಜ್ಯವನ್ನು ಸಂಪಾದಿಸಿ, ಪಂಜಾಬದ ಸಿಂಹನೆಂದು ಪ್ರಸಿದ್ಧನಾಗಿದ್ದನೋ, ಅದೇ ಸಿಂಹನ ಹೊಟ್ಟೆಯಲ್ಲಿ ನರಿ-ನಾಯಿಗಳಂತೆ ಹುಟ್ಟಿದ ಅವನ ಮಕ್ಕಳು ಆ ರಾಜ್ಯವನ್ನು ಕಳೆದದ್ದು ನಮ್ಮ ಹಿಂದುಗಳ ದುರ್ದೈವವಲ್ಲದೆ ಮತ್ತೇನು?



## ೧೦ನೆಯ ಪ್ರಕರಣ—ಡಬ್ಲಿನ್ನನು ಗವರ್ನರನಾದುದು.

ಒತುವು ಚುವವು ಬೆಳಗಾಗುವಷ್ಟರಲ್ಲಿ ಎದ್ದು ತನ್ನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ಕುದುರೆಯನ್ನು ಹತ್ತಿ ಅಡ್ಡಾಡಲಿಕ್ಕೆ ಹೋಗುವ ಪರಿಪಾಠವನ್ನು ಡಬ್ಲಿನ್ನನು ಬಹುದಿನಗಳಿಂದಲೂ ಇಟ್ಟುಕೊಂಡಿದ್ದನು. ರಣಜಿತಸಿಂಗನಲ್ಲಿ ಆಶ್ರಯ ದೊರೆತ ಮರುದಿನವಾದರೂ ಅವನು ಅದೇ ಕ್ರಮದಿಂದ ತಿರುಗಾಡಲಿಕ್ಕೆ ಹೋದನು. ಅವನು ಹೊರಟು ಹೋದ ಅಲ್ಪಕ್ಷಣಗಳಲ್ಲಿಯೇ ಒನ್ನೂನು ಹಾಸಿಗೆಯಿಂದೆದ್ದನು. ಕೂಡಲೆ ತನ್ನ ಯಜಮಾನನು ತಿರುಗಾಡಲಿಕ್ಕೆ ಹೋದ ಸಂಗತಿಯು ಅವನಿಗೆ ತಿಳಿಯಿತು. ಆದನ್ನು ಕೇಳಿ ಅವನ ಎದೆಯಲ್ಲಿ ಧಸ್ಸೆಂದಿತು. ತಾನು ತನ್ನ ಯಜಮಾನನಿಗಿಂತ ಮೊದಲು ಏಳದೆಯಿದ್ದ ಬಗ್ಗೆ ಅವನಿಗೆ ಕೆಡಕೆನಿಸಿತು. ಅವನಿಗೆ ಪಂಚಾಬದೊಳಗಿನ ಸ್ಥಿತಿಗತಿಯು ಚೆನ್ನಾಗಿ ಅವಗತವಾಗಿತ್ತು. ಪಂಜಾಬೀಜನರ ಸ್ವಭಾವವು ಅವನಿಗೆ ಗೊತ್ತಿದ್ದದರಿಂದಲೂ, ನಿನ್ನೆಯೇ ನಂದಸಿಂಹನ ಉಪದ್ವ್ಯಾಪಿತನವು ಅವನಿಗೆ ಗೋಚರವಾದ್ದರಿಂದಲೂ ಬೆಳಿಗ್ಗೆ ಬೇಗನೆ ಏಳದೆಯಿದ್ದ ಬಗ್ಗೆ ಅವನು ಹಳಹಳಿಸಹತ್ತಿತು. ಇಷ್ಟರಲ್ಲಿ ಡಬ್ಲಿನ್ನನು ಸುಖರೂಪವಾಗಿ ಮರಳಿ ಬಂದದ್ದನ್ನು ನೋಡಿ ಅವನ ಮನಸ್ಸಿನೊಳಗಿನ ಎಲ್ಲ ಕುಶಂಕೆಗಳೂ ನಿರ್ನಾಮವಾದವು.

ಮರುದಿನ ಬೆಳಗಿನ ಝಾವದಲ್ಲಿ ಡಬ್ಲಿನ್ನನು ಎದ್ದು ಕುದುರೆಯನ್ನು ಹತ್ತಿ ಹೊರಹೊಡುವಷ್ಟರಲ್ಲಿ ಬನ್ನೂ-ಧನ್ನೂ ಇವರಿಬ್ಬರೂ ತಂತಮ್ಮ ಕುದುರೆಗಳನ್ನೇರಿ ಅವನನ್ನನುಸರಿಸಿ ನಡೆದರು. ಆ ಮೂವರ ಕುದುರೆಗಳೂ ಅವರ ಬಂಗ್ಲೆಯಿಂದ ಒಂದು ಒಂದೂವರೆ ಮೈಲು ದೂರ ಹೋಗಿರಬಹುದು; ಅಷ್ಟರಲ್ಲಿ ಪಕ್ಕದ ಮಾವಿನತೋಪಿನೊಳಗಿನ ದಟ್ಟವಾದ ಪೆಳೆಯಿಂದ "ಸೂಂಂಂ" ಎಂದೆನ್ನುತ್ತ ಬಂದ ಒಂದು ಬಾಣವು ಡಬ್ಲಿನ್ನನ ಟೊಪ್ಪಿಗೆಗೆ ಬಡಿದು ಟೊಪ್ಪಿಗೆಯನ್ನು ಹಾರಿಸಿ ಒಗೆದು ಬಿಟ್ಟಿತು! ಸ್ವಲ್ಪದರಲ್ಲಿ ತಪ್ಪಿತು, ಇಲ್ಲದಿದ್ದರೆ ಆಗ ಆ ತೀಕ್ಷ್ಣವಾದ ಬಾಣದಿಂದ ಡಬ್ಲಿನ್ನನ ರುಂಡವೇ ದಿಂಡದಿಂದ ಬೇರೆಯಾಗಿ ಹೋಗುತ್ತಿತ್ತು. ಆ ಪ್ರಕಾರವನ್ನು ಕಂಡೊಡನೆಯೇ ಬನ್ನೂನು ತನ್ನ ಕುದುರೆಯನ್ನು ಆ ಬಾಣವು ಬಂದ ಕಡೆಗೆ ವೇಗದಿಂದ ಬಿಟ್ಟನು. ಅಷ್ಟರಲ್ಲಿ ಓಡಿ ಹೋಗುತ್ತಿದ್ದ ಒಬ್ಬ ಶೀಖನು ಅವನಿಗೆ ಕಂಡನು. ಕೂಡಲೆ ಬನ್ನೂನು ಮತ್ತಿಷ್ಟು ಒತ್ತರದಿಂದ ಕುದುರೆಯನ್ನು ಬಿಟ್ಟು ಆ ಮನುಷ್ಯನ ಸಮೀಪಕ್ಕೆ ಹೋದನು. ಅಷ್ಟರಲ್ಲಿ

ಆ ಮನುಷ್ಯನು ತನ್ನ ಒರೆಯೊಳಗಿನ ಕತ್ತಿಯನ್ನು ತೆಗೆದು ಬನ್ನೂನನನ್ನು ಅಡ್ಡ ಗಡಿಯು ಬಂದನು; ಆದರೆ ಬನ್ನೂನು ಅಸಾವಧನಿರಲಿಲ್ಲ. ಅದರಿಂದ ಅವನೂ ತನ್ನ ಖಡ್ಗವನ್ನು ಹಿರಿದನು. ಕೂಡಲೆ ಅವರಿಬ್ಬರಿಗೂ ಯುದ್ಧವು ನಡೆಯಿತು.

ಇಷ್ಟರಲ್ಲಿ ವೇಗದಿಂದ ಬಂದ ಧನ್ನೂನು ಅವನ ಮೇಲೆ ಏರಿಹೋದನು. ಆಗ ಬನ್ನೂನು ಗಟ್ಟಿಯಾಗಿ ಒದರಿ:—ಧನ್ನೂ, ನಾನೊಬ್ಬನೇ ಇವನಿಗೆ ಸಾಕು. ಹೀಗಿದ್ದು ನೀನು ಇವನ ಮೇಲೆ ಏರಿ ಬಂದು ನನ್ನ ಅಪಮಾನ ಮಾಡಬೇಕೆಂದಿ ರುವೆಯೇನು? ಎಂದು ನುಡಿಯಲು, ಧನ್ನೂನು ಹಿಂದಕ್ಕೆ ಸರಿದು ಸುಮ್ಮನೆ ನಿಂತುಕೊಂಡನು. ಅವರಲ್ಲಿ ಇಷ್ಟು ಮಾತುಗಳು ಬಳೆಸುತ್ತಿರಲು, ಡಬ್ಲಿನ್ನನೂ ಅಲ್ಲಿಗೆ ಬಂದು:--ಬನ್ನೂ, ಆ ವೈರಿಯ ಮೇಲೆ ನಿನ್ನ ಖಡ್ಗಪ್ರಹಾರವನ್ನು ಮಾಡ ಬೇಡ, ಎಂದನು. ಇಷ್ಟರಲ್ಲಿ ಆ ನೀಚ ಶೀಖನು ಬನ್ನೂನ ಏಟುಗಳಿಂದ ಹಣ್ಣಾಗಿ ಹೋಗಿದ್ದನು. ಅದರಿಂದ ಅವನು ಡಬ್ಲಿನ್ನನ ನುಡಿಕೇಳಿ ತಾನಾಗಿಯೇ ಕಾದು ವದನ್ನು ಬಿಟ್ಟು ನಿಂತುಕೊಂಡನು. ಆ ಕೂಡಲೆ ಬನ್ನೂನು ಅವನ ಕೈಯೊಳ ಗಿನ ಆ ಹದನಾದ ಕತ್ತಿಯನ್ನೂ, ಧನುರ್ಬಾಣಗಳನ್ನೂ ಕಸಿದನು. ಅವನಿಗೆ ಈ ಮೊದಲೇ ಬನ್ನೂನ ಒಂದು ಏಟು ರಟ್ಟೆಗೆ ಹತ್ತಿದ್ದರಿಂದ ಅಲ್ಲಿಂದ ರಕ್ತವು ಹೊರ ಚಿಮ್ಮುತ್ತಿತ್ತು. ಅದನ್ನು ಕಂಡು ಡಬ್ಲಿನ್ನನಿಗೆ ಅವನ ಬಗ್ಗೆ ದಯೆಯುಂಟಾಗಿ ತನ್ನ ಸೇವಕರಿಂದ ಆತನ ಗಾಯುವನ್ನು ಕಟ್ಟಿಸಿ:—ನೀನು ಯಾರು, ನನ್ನನ್ನು ಕೊಲ್ಲಲಿಕ್ಕೇಕೆ ಪ್ರಯತ್ನಿಸಿದೆ? ಮುಂತಾದ ಸಂಗತಿಯನ್ನು ಮರೆಮಾಜದೆ ತಿಳಿ ಸೆಂದು ಅವನಿಗೆ ಹೇಳಿದನು.

ಡಬ್ಲಿನ್ನನ ಧೀರಗಂಭೀರವಾದ ಮುಖಚರ್ಯೆಯಿಂದಲೂ, ವಾಣಿಯಿಂ ದಲೂ ಆ ಕೊಲೆಗಡಕನ ಮನಸ್ಸಿನ ಮೇಲೆ ಇಷ್ಟವಾದ ಪರಿಣಾಮವಾಯಿತು. ಅವನಿಗೆ ತನ್ನ ದುಷ್ಕೃತ್ಯದ ಬಗ್ಗೆ ಪಶ್ಚಾತ್ತಾಪವುಂಟಾದ್ದರಿಂದ ಅವನು ತನ್ನ ನಿಜಸಂಗತಿಯನ್ನು ಹೇಳಿದನು. ಅದನ್ನು ಕೇಳಿ ಬನ್ನೂನ ಸಂಶಯವು ನಿಜ ವಾಯಿತು. ಪ್ರತಿನಿತ್ಯ ಬೆಳಗ್ಗೆ ಡಬ್ಲಿನ್ನನು ಒಬ್ಬನೇ ತಿರುಗಾಡಲಿಕ್ಕೆಂದು ಬಹುದೂರ ಹೋಗುವದನ್ನು ಕಂಡಿದ್ದ ನಂದಸಿಂಹನು, ಈ ಕೊಲೆಗಡಕನ ಮುಖಾಂತರವಾಗಿ ಅವನನ್ನು ಕೊಲ್ಲಿಸಿಬಿಡುವ ಏರ್ಪಾಟು ಮಾಡಿದ್ದನು. ಈ ನೀಚ ಶೀಖನ ಹೆಸರು ಜಹರಸಿಂಹನೆಂದು. ಇವನು ತನ್ನ ಹೆಸರಿಗೆ ತಕ್ಕಂತೆ ಇಂಥ ನೀಚ ಕೆಲಸಗಳನ್ನು ಮಾಡಿಯೇ ಉಪಜೀವಿಸುತ್ತಿದ್ದನು. ನಂದಸಿಂಹನು ಇವನಿಗೆ ಬಹುದೊಡ್ಡ ಇನಾಮಿನ ಆಶೆ ಹಚ್ಚಿ, ಇವನಿಂದ ಶೀಖ ಜನರೊಳಗಿನ

ಗುರುತರವಾದ "ಪಹಲಿ"ನ ಆಣೆ ಕೂಡ ಮಾಡಿಸಿ ಈ ಕೆಲಸಕ್ಕೆ ತೊಡಗಿಸಿದ್ದನು.

ಜಹರಸಿಂಹನ ಸಂಗತಿಯನ್ನೆಲ್ಲ ಕೇಳಿ ಡಬ್ಲಿನ್ನನು ಶಾಂತಚಿತ್ತದಿಂದ:— ಜಹರಸಿಂಹ, ನಿನ್ನ ಅಪರಾಧವು ಅಕ್ಷಮ್ಯವಾದದ್ದು. ಪ್ರಾಣದಂಡಣೆಯು ಹೊರ ತು ನಿನ್ನ ಈ ಅಪರಾಧಕ್ಕೆ ಬೇರೆ ಯೋಗ್ಯವಾದ ಶಿಕ್ಷೆಯೇ ಇರುವದಿಲ್ಲ. ಆದರೂ ನಾನು ಇಂದು ನಿನ್ನನ್ನು ಕ್ಷಮಿಸಿ ಬಿಟ್ಟುಬಿಡುತ್ತೇನೆ. ಇನ್ನು ಮುಂದೆ ನೀನು ಎಂದೂ ಈ ತರದ ನೀಚ ಕೆಲಸಕ್ಕೆ ಪ್ರವೃತ್ತನಾಗಬೇಡ ಕಂಡೆಯಾ? ನೀನು ನಿನ್ನ ಹೊಟ್ಟೆಯ ಪಾಡಿಗಾಗಿಯೇ ಈ ತರದ ಉದ್ಯೋಗಕ್ಕೆ ಹತ್ತಿದ್ದರೆ ಇಕೋ, ಈ ಅಲ್ಪ ಧನವನ್ನು. ಇದನ್ನು ತಕ್ಕೊಂಡು ನೀನು ಯಾವುದೊಂದು ಚಿಕ್ಕ-ಪುಟ್ಟ ಉದ್ಯೋಗವನ್ನು ಆರಂಭಿಸು. ಮತ್ತೆ ಎಂದಾದರೂ ನಿನಗೆ ಸಹಾಯದ ಅವಶ್ಯಕತೆಯಿದ್ದರೆ ನನಗೆ ಬಂದು ಭೆಟ್ಟಿಯಾಗು; ಆದರೆ ಇನ್ನು ಮುಂದೆ ಎಂದೂ ಈ ತರದ ಪ್ರಾಣಹಿಂಸಕ ಉದ್ಯೋಗಕ್ಕೆ ಮನಸ್ಸು ಮಾಡಬೇಡ, ಎಂದು ಬೋಧಿಸಿದನು. ಜಹರಸಿಂಹನು ಡಬ್ಲಿನ್ನನು ಕೊಟ್ಟ ಆ ರೂಪಾಯಿಗಳನ್ನು ತಕ್ಕೊಂಡು ಕೃತಜ್ಞತೆಯಿಂದ:—ಸಾಹೇಬ, ನನಗೆ ನಿಮ್ಮ ಕೃಪಾ ಪ್ರಸಾದವಿಷ್ಟೇ ಸಾಕು. ನಾನು ಇನ್ನು ನಿಮ್ಮ ಕಣ್ಣಿಗೆಂದೂ ಬೀಳಲಿಕ್ಕಿಲ್ಲ; ಹಾಗು ನಾನು ಇನ್ನು ಮರಳಿ ಹೋಗುವದೆಂದರೆ ಆ ದುಷ್ಟನಾದ ನಂದಸಿಂಹನ ಕತ್ತಿಗೆ ತುತ್ತಾಗಲಿಕ್ಕೇ ಹೋಗಬೇಕಾಗುವದು. ಆದುದರಿಂದ ನಾನು ಇನ್ನು ಈ ದೇಶದಲ್ಲಿರದೆ, ಎಲ್ಲಿಗಾದರೂ ಹೊರಟು ಹೋಗುತ್ತೇನೆ, ಎಂದವನೇ ಹೊರಟು ನಡೆದನು.

ಜಹರಸಿಂಹನು ಹೊರಟು ಹೋದ ಮೇಲೆ ಡಬ್ಲಿನ್ನನು ಬನ್ಸೂ-ಧನ್ಸೂ ಕೂಡನೆ ತನ್ನ ಬಂಗ್ಲೆಗೆ ತಿರುಗಿದನು; ಹಾಗು ಅಂದಿನಿಂದ ತನ್ನ ಬಂಗ್ಲೆಯಲ್ಲಿ ಕಟ್ಟಿನ ಪಹರೆಯನ್ನಿರಿಸಿದನಲ್ಲದೆ, ತಾನು ಹೊರಗೆ ಹೋಗಬೇಕಾದರೆ ಒಬ್ಬನೇ ಹೊರಡದೆ, ತನ್ನ ಅಂಗರಕ್ಷಕರಿಬ್ಬರನ್ನು ಸಂಗಡ ಕರಕೊಂಡೇ ಹೋಗುತ್ತಿದ್ದನು.

ಡಬ್ಲಿನ್ನನು ಬಂಗ್ಲೆಗೆ ಬಂದಾಗ ಒಬ್ಬ ಒಕ್ಕನೆತ್ತಿಯ, ಕಪ್ಪು ಮೈಬಣ್ಣದ, ವಿಚಿತ್ರ ಮುಖಚರ್ಯದ ವ್ಯಕ್ತಿಯು ಬಂಗ್ಲೆಯ ಬಾಗಿಲಲ್ಲಿ ನಿಂತುಕೊಂಡಿದ್ದನು. ಅವನನ್ನು ಕಂಡು ಅಲ್ಲಿಯ ಪಹರೆಯವರು ಕಂಡ ಕಂಡ ಹಾಗೆ ಚೇಷ್ಟೆಮಾಡುತ ಲಿದ್ದರು. ಅವರ ಚೇಷ್ಟೆಗಳಿಂದ ಆ ವ್ಯಕ್ತಿಯು ಸಿಟ್ಟಿಗೆದ್ದಿದ್ದನು. ಅವರವರ ನಡುವೆ ಇನ್ನು ಬಹುದೊಡ್ಡ ರಣಸಂಗ್ರಾಮವೇ ಜರುಗತಕ್ಕದ್ದಿತ್ತು. ಅಷ್ಟರಲ್ಲಿ

ಡಬ್ಲಿನ್ನನು ಅಲ್ಲಿಗೆ ಬಂದುದರಿಂದ ಎಲ್ಲರೂ ಶಾಂತರಾದರು. ಡಬ್ಲಿನ್ನನನ್ನು ನೋಡಿದ ಕೂಡಲೆ ಆ ಅಪರಿಚಿತ ವ್ಯಕ್ತಿಯು ಒಳ್ಳೇ ಆತ್ಮ್ಯತೆಯಿಂದ ಕೆಲಹೆಜ್ಜೆ ಮುಂದಕ್ಕೆ ಹೋಗಿ:—"ಗುಡ್ ಮಾರ್ನಿಂಗ ಸರ!" ಎಂದು ಇಂಗ್ಲಿಷಿನಿಂದ ನುಡಿದು, ಹಿಂದೂಪದ್ಧತಿಯಿಂದ ಎರಡೂ ಕೈಗಳನ್ನು ಜೋಡಿಸಿ ನಮಸ್ಕರಿಸಿದನು. ಆತನ ಆ ಹರಕುಮುರಕಾದ ಇಂಗ್ಲಿಷ ಭಾಷೆ, ವಿಚಿತ್ರ ವೇಷ, ಹಾವಭಾವ ಮುಂತಾದವುಗಳಿಂದ ಅವನಾರೆಂಬದನ್ನು ಡಬ್ಲಿನ್ನನು ಕೂಡಲೆ ಗುರ್ತಿಸಿದನು. ಕಾಲೀಫಾನೂರುದ್ದೀನನು ಮೊದಲನೇ ದಿವಸ ಯಾವನ ಬಗ್ಗೆ ಹೇಳಿದ್ದನೋ ಅದೇ ಚೈತನ್ಯದಾಸನಿವನೆಂದು ಆತನು ತಿಳಿದನು.

ಡಬ್ಲಿನ್ನನು ತನ್ನ ದಿವಾಣಖಾನೆಯನ್ನು ಹೊಕ್ಕವನೇ ಚೈತನ್ಯದಾಸನನ್ನು ಒಳಗೆ ಕರೆದನು. ಆ ಕೂಡಲೆ ಚೈತನ್ಯದಾಸನು ಈ ವರೆಗೆ ತನ್ನನ್ನು ಒಳಗೆ ಬಿಡದ, ಹಾಗು ತನ್ನನ್ನು ಕಂಡು ಚೇಷ್ಟೆ ಮಾಡಿ ಮಾಡಿ ನಗುತ್ತಿದ್ದ ಅಲ್ಲಿಯ ಆ ಪಹರೆಯವನ ಕಡೆಗೆ ತುಚ್ಛತೆಯ ದೃಷ್ಟಿಯಿಂದ ನೋಡುತ್ತ:—"ಯಾಕಲೇ, ಮಗನೇ, ಹೇಗಿದೆ ಈ ಬಂಗಾಲಿಯ ವರ್ಚಸ್ಸು?" ಎಂದು ಒಳ್ಳೇ ಒಗರಿನಿಂದ ನುಡಿಯುತ್ತ, ಭರದಿಂದ ನಡೆದನು. ಅವನು ಡಬ್ಲಿನ್ನನ ಎದುರಿಗೆ ಹೋಗಿ ತನ್ನ ಸಂಗತಿಯನ್ನೆಲ್ಲ ವಿಶದವಾಗಿ ತಿಳಿಸಿದನು:—"ಸಾಹೇಬ, ನನ್ನವರೆಂಬು ವವರು ಈಗ ಯಾರೂ ಉಳಿದಿಲ್ಲ. ಎಲ್ಲರನ್ನೂ ಕಾಲನು ಕರೆದೊಯ್ದಿರುವನು. ನಾನು ಈ ವರೆಗೆ ಫಕೀರ ಅಜೀಜುದ್ದೀನರಲ್ಲಿ ಖಾಸಗೀ ಕಾರಭಾರಿಯಾಗಿದ್ದೆನು. ತಮಗೆ ನನ್ನ ಅವಶ್ಯಕತೆಯಿದೆಯೆಂಬದನ್ನು ಕಾಲೀಫಾನೂರುದ್ದೀನರ ಮುಖದಿಂದ ತಿಳಿದು, ಅವರು ನನ್ನನ್ನು ತಮ್ಮೆಡೆಗೆ ಕಳಿಸಿರುತ್ತಾರೆ," ಎಂದು ಚೈತನ್ಯದಾಸನು ಹೇಳಿದ್ದನ್ನು ಕೇಳಿ ಡಬ್ಲಿನ್ನನಿಗೆ ಸಮಾಧಾನವೆನಿಸಿತು. ಆಗ ಅವನಿಗೆ ಮುಲ್ಕೀ, ಲಷ್ಕರೀ ಬಾಬುಗಳ ಲೆಕ್ಕದ ಮಾಹಿತಿಯ ಬಗ್ಗೆಯೂ, ರಾಜ್ಯದಾಢಳಿತದ ಇತರ ಬಾಬುಗಳ ಬಗ್ಗೆಯೂ ಕೆಲ ಪ್ರಶ್ನೆಗಳನ್ನು ಮಾಡಿದನು. ಚೈತನ್ಯದಾಸನು ಅವು ಗಳಿಗೆಲ್ಲ ಹೇಳಿದ ಸಮರ್ಪಕ ಉತ್ತರಗಳನ್ನು ಕೇಳಿ ಡಬ್ಲಿನ್ನನು ಸಂತೋಷ ಗೊಂಡು, ಅವನನ್ನು ತನ್ನ ಕಾರಭಾರಿಯನ್ನಾಗಿ ನೇಮಿಸಿಕೊಂಡನು.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ರಣಜಿತನು ಡಬ್ಲಿನ್ನನನ್ನು ತನ್ನ ಅಶ್ವ ಸೈನ್ಯದ ಮುಖ್ಯಸ್ಥನನ್ನಾಗಿ ನೇಮಿಸಿದ್ದನಷ್ಟೇ? ಆದರೆ ಇನ್ನೂ ಇವನಿಗೆ ಸನದು ಮುಂತಾದವುಗಳನ್ನು ಕೊಡದ್ದರಿಂದ, ಇವನ ಕೆಲಸಕ್ಕೆ ಪ್ರತ್ಯಕ್ಷವಾಗಿ ಪ್ರಾರಂಭ ವಾಗಿರಲಿಲ್ಲ. ರಣಜಿತನು ಹೇಳಿದಂತೆ ಮುಂದೆ ಎಂಟು ದಿನಗಳಾದರೂ ಇವ

ನನ್ನು ತನ್ನ ದರ್ಬಾರಕ್ಕೆ ಕರೆಸಲಿಲ್ಲ. ಅದರಿಂದ ಇವನಲ್ಲಿ ಆ ವಿಷಯದ ಉತ್ಕಂಠೆಯು ಹೆಚ್ಚಿತು. ಯಾಕಂದರೆ ಅವನ ಸರಂಜಾಮುದ ನಿತ್ಯದ ಖರ್ಚು ಹೆಚ್ಚಾಗಿದ್ದಿತು. ಸುಮ್ಮನೆ ಕುಳಿತು ರಣಜಿತನಿಂದ ಆ ತನ್ನ ಖರ್ಚಿನ ಹಣವನ್ನು ತಕ್ಕೊಳ್ಳಲಿಕ್ಕೆ ಅವನಂಥ ಪಾಪಭೀರುವಿನ ಮನಸ್ಸು ಒಪ್ಪುವ ಬಗೆ ಹೇಗೆ? ಅದರಿಂದ ತನ್ನನ್ನು ಬೇಗನೆ ತನ್ನ ಕಾರ್ಯಕ್ಕೆ ತೊಡಗಿಸಲಿಕ್ಕೆ ಪ್ರಯತ್ನಿಸಿರೆಂದು ಅವನು ಫಕೀರಜಿಗೆ ಒಂದೆರಡು ಸಾರೆ ಹೇಳಿದನು. ಒಮ್ಮೆ ಡಬ್ಲಿನ್ನನು ಅದೇ ಉದ್ದೇಶದಿಂದ ಅವನೆಡೆಗೆ ಹೋದಾಗ ಫಕೀರಜಿಯು ಅವನನ್ನು ತನ್ನ ಬಳಿಯಲ್ಲಿ ಕೂರಿಸಿಕೊಂಡು, ಅವನಿಗೆ ಆ ರಣಜಿತನ ದರ್ಬಾರದ ಎಲ್ಲ ಗುಹ್ಯಗಳನ್ನು ಸಾಂಗೋಪಾಂಗವಾಗಿ ತಿಳಿಸಿದನಲ್ಲದೆ, ನೀವು ಎಲ್ಲಕ್ಕೂ ಮೊದಲು ರಾಜಾ ಧ್ಯಾನಸಿಂಹನನ್ನು ಪ್ರಸನ್ನೀಕರಿಸಿಕೊಳ್ಳುವ ಎತ್ತುಗಡೆ ಮಾಡಿರಿ, ಎಂದು ಹೇಳಿದನು.

ಡಬ್ಲಿನ್ನನು ಅದರಂತೆ ಮರುದಿನ ಧ್ಯಾನಸಿಂಹನಿಗೆ ಕೆಲವು ನಜರಾಣೆಯನ್ನು ಕಳಿಸಿ, ಅವನಿಗೆ ಒಂದೆರಡು ಸಾರೆ ಭೆಟ್ಟಿಯೂ ಆದನು. ಡಬ್ಲಿನ್ನನ ಪರಿಚಯದಿಂದ ಧ್ಯಾನಸಿಂಹನು ಪ್ರಸನ್ನನಾಗಿ ನಿನಗೆ ಬೇಕಾದ ಸಹಾಯವನ್ನು ಮಾಡುವೆನೆಂದು ಇವನಿಗೆ ತಿಳಿಸಿದನು; ಆದರೆ ಇವನು ತನಗೆ ಅನುಕೂಲನಾಗಿ ನಡೆಯುವವರೆಗೆ ಇವನಿಗೆ ಸಹಾಯ ಮಾಡುವದನ್ನೂ, ತುಸ ಪ್ರತಿಕೂಲನಾದರೆ ಇವನನ್ನು ರಸಾತಳಕ್ಕೆ ಮೆಟ್ಟುವದನ್ನೂ ಆ ಮಹಾಕಾರಸ್ಥಾನಿಯು ಗೊತ್ತುಮಾಡಿಕೊಂಡಿದ್ದನು. ಒಮ್ಮೆ ರಾಜಾಧ್ಯಾನಸಿಂಹನ ಭೆಟ್ಟಿಗೆ ಡಬ್ಲಿನ್ನನು ಹೋದಾಗ ಅವನು ಅಗ್ನಿಮಾಂದ್ಯದ ವಿಕಾರದಿಂದ ತೊಳಲುತ್ತಿದ್ದನು. ಅದನ್ನು ಕಂಡು ಡಬ್ಲಿನ್ನನು ತನಗೆ ಗೊತ್ತಿದ್ದ ಒಂದು ಖಾತ್ರಿಯ ಇಂಗ್ಲಿಷ ಔಷಧವನ್ನು ಅವನಿಗೆ ಕೊಟ್ಟು ಅವನ ವಿಕಾರವನ್ನು ಸಮೂಲವಾಗಿ ನಾಶಪಡಿಸಿದನು. ಬಹು ದಿನಗಳಿಂದ ಆ ರೋಗಕ್ಕೆ ಬಲಿಯಾಗಿದ್ದ ಧ್ಯಾನಸಿಂಹನು ಡಬ್ಲಿನ್ನನ ಔಷಧೋಪಚಾರದಿಂದ ಇವನ ಮೇಲೆ ಹೆಚ್ಚಾಗಿ ಪ್ರಸನ್ನನಾದನು.

ಡಬ್ಲಿನ್ನನು ಈ ದೇಶಕ್ಕೆ ಬಂದಂದಿನಿಂದ, ಮದ್ಯ-ಮಾಂಸಗಳನ್ನು ತ್ಯಜಿಸಿದ್ದನು. ಲಾಹೋರಕ್ಕೆ ಬಂದ ಬಳಿಕ ಅವನ ದಂಡಿನ ಸೇವಕರೇ ಅವನ ಅಡಿಗೆ-ಊಟಗಳ ವ್ಯವಸ್ಥೆ ಮಾಡುತ್ತಿದ್ದರು; ಆದರೆ ಇತ್ತೀಚೆಗೆ ಅವನು ಆ ಕೆಲಸಕ್ಕಾಗಿ ಒಬ್ಬ ನಿಷ್ಣಾತ ಕನೋಜೀ ಬ್ರಾಹ್ಮಣನನ್ನು ನೇಮಿಸಿದ್ದನು. ಒಂದು ದಿನ ಅವನು ತನ್ನ ಭೋಜನವನ್ನು ಮಾಡುತ್ತ ಕುಳಿತಿರಲು, ಹಿಂದೆ ಎಂಟನೇ

ಪ್ರಕರಣದಲ್ಲಿ ವರ್ಣಿಸಿರುವ ಆ ವಿಕ್ಷಿಪ್ತ ಪ್ರಕೃತಿಯ ಚಾಂದಖಾನನು ಬಂದು ಡಬ್ಲಿನ್ನನೆದುರಿಗೆ ನಿಂತುಕೊಂಡನು. ಡಬ್ಲಿನ್ನನ ಬಂಗಲೆಯ ಕಾವಲುಗಾರರು ಚಾಂದಖಾನನ್ನು ಒಳಗೆ ಹೋಗಿ-ಬರಲಿಕ್ಕೆ ಪ್ರತಿಬಂಧಿಸುತ್ತಿರಲಿಲ್ಲ. ಡಬ್ಲಿನ್ನನಿಗೆ ತಿಳಿಸಿ ಅವನು ಆ ಸೌಕರ್ಯವನ್ನು ಒದಗಿಸಿಕೊಂಡಿದ್ದನು. ಡಬ್ಲಿನ್ನನೆದುರಿಗೆ ಇದ್ದ ಆ ಕೇವಲ ಶಾಕಾಹಾರದ ಎಡೆಯನ್ನು ಕಂಡ ಚಾಂದಖಾನನು ಪರಮ ವಿಸ್ಮಯದಿಂದ:—ಹುಜೂರ, ತಾವು ಈ ನಿರ್ಜೀವವಾದ ಅನ್ನವನ್ನುಂಡು ಕ್ಷುಧೆಯನ್ನು ಶಾಂತಗೊಳಿಸಿಕೊಳ್ಳುತ್ತಿರುವಂತೆ, ತಮ್ಮ ತೃಷೆಗಾದರೂ ಬರೇ ನೀರನ್ನೇ ಉಪಯೋಗಿಸುತ್ತಿರಬಹುದಾಗಿ ತೋರುತ್ತದೆ. ಸಾಹೇಬ, ಈ ಮದ್ಯ-ಮಾಂಸ ವಿರಹಿತವಾದ ಅಸ್ವಾದಿಷ್ಟ ಖಾದ್ಯ-ಪೇಯಗಳಿಂದ ನಿಮ್ಮ ದೇಹದಲ್ಲಿ ಚೈತನ್ಯವಾದರೂ ಉಳಿಯುವ ಬಗೆ ಹೇಗೆ?

ಚಾಂದಖಾನನ ಆ ಅಶಿಷ್ಟಾಚಾರದ, ಆದರೆ ಆತನ ಹುಟ್ಟುಗುಣದ ಆ ವರ್ತನ-ಭಾಷಣಗಳಿಂದ ಡಬ್ಲಿನ್ನನು ಕ್ರೋಧಸಂತಪ್ತನಾಗುವ ಬದಲು, ಅವನು ಖೊ-ಖೊ ಕ್ಕೆಂದು ನಗಹತ್ತಿದನು. ಬಳಿಕ ಅವನು:—ಖಾನಸಾಹೇಬ, ನಿಮ್ಮ ಅಂಬೋಣವು ನನಗೆ ರುಚಿಸುವದಿಲ್ಲ. ನಾನು ನಿಮ್ಮ ಅಭಿಪ್ರಾಯಕ್ಕೆ ತೀರ ವಿರುದ್ಧವಾದವನು. ನಾನು ಪೂರ್ವದಲ್ಲಿ ಯಾವಾಗಾದರೊಮ್ಮೆ ಮದ್ಯ-ಮಾಂಸಗಳನ್ನು ಸ್ವೀಕರಿಸುತ್ತಿದ್ದೆನು; ಆದರೆ ಒಮ್ಮೆ ಕೆಲ ಕಾರಣಗಳ ಮೂಲಕ ನನಗೆ ಅವುಗಳ ಬಗ್ಗೆ ಅಸಹ್ಯವೆನಿಸಲು, ಅಂದಿನಿಂದ ನಾನು ಅವುಗಳನ್ನು ಮುಟ್ಟುವದಿಲ್ಲ ಸಹ; ಮತ್ತು ಈ ನಿಯಮವನ್ನೇ ನಾನು ಕಡೆತನಕ ಪಾಲಿಸಬೇಕೆಂಬ ನಿಶ್ಚಯವನ್ನು ಕೂಡ ಮಾಡಿಕೊಂಡಿರುತ್ತೇನೆ.

"ನಮ್ಮ ಹುಜೂರರು ಇಷ್ಟು ನಿಶ್ಚಯಿ ಸ್ವಭಾವದವರಿರುವರೆಂದೇ, ರಣಜಿತಸಿಂಹನ ದರ್ಬಾರದಲ್ಲಿ ಇವರ ಬೆಳಕು ಇಷ್ಟು ಬೇಗನೆ ಬಿದ್ದಿರುತ್ತದೆ; ಮತ್ತು ದಿನದಿನಕ್ಕೆ ಅದು ಹೆಚ್ಚಾಗಿ ಅದರಿಂದ ಹುಜೂರರವರ ಮಾನಮರ್ಯಾದೆಗಳೂ, ಧನ ದೌಲತ್ತುಗಳೂ ಅಭಿವೃದ್ಧಿಸುತ್ತಲಿವೆ. ಸದ್ಯಕ್ಕೆ ದರ್ಬಾರದಲ್ಲಿ ನಮ್ಮ ಹುಜೂರರ ವಿಷಯವೇ ಚರ್ಚಿಸಲ್ಪಡುತ್ತದೆ. ಸಾಹೇಬ, ಇನ್ನು ಕೆಲದಿನಗಳಲ್ಲಿಯೇ ತಾವು ಶೀಖಸರದಾರರ ಪೋಷಾಕನ್ನು ಧರಿಸಬೇಕಾಗುವದೆಂದು ತೋರುತ್ತದೆ. ನಮ್ಮ ಸಾಹೇಬರಿಗೆ ಆ ಪೋಷಾಕು ಒಗ್ಗಬಹುದೋ?"

ಚಾಂದಖಾನನ ಆ ಪ್ರಶ್ನೆಯನ್ನು ಕೇಳಿ, ತನ್ನ ವಿಷಯದ ಚರ್ಚೆಯು ದರ್ಬಾರದಲ್ಲಿ ನಡೆದಿರಬೇಕೆಂದೂ, ಆ ಬಗ್ಗೆ ನನ್ನ ಅಭಿಪ್ರಾಯವೇನೆಂಬದನ್ನು

ತಿಳಿಯುವದಕ್ಕಾಗಿಯೇ ಈ ಚಾಂದಖಾನನು ಹೀಗೆ ಅವೇಳೆಯಲ್ಲಿ ಬಂದು ತನಗೆ ಪ್ರಶ್ನೆಮಾಡಿರುವನೆಂದೂ ಡಬ್ಲಿನ್ನನು ಅನುಮಾನಿಸಿದನು. ಚಾಂದಖಾನನಿಗೆ ಸರ್ವತ್ರದಲ್ಲಿಯೂ-ರಣಜಿತನ ಖಾಸದರ್ಬಾರದಲ್ಲಿಯೂ-ಪ್ರವೇಶವಿದ್ದದರಿಂದ, ಇವನಿಂದ ತನಗೆ ಅಲ್ಲಿಯ ನಿಜವಾದ ಸಂಗತಿಗಳು ತಿಳಿಯುವ ಸಂಭವವು ವಿಶೇಷವಾಗಿರುವಂತೆ, ತನ್ನ ಅಭಿಪ್ರಾಯವಾದರೂ ಸ್ವತಃ ರಣಜಿತನ ವರೆಗೆ ನಿರಾತಂಕವಾಗಿ ಮುಟ್ಟಲಿಕ್ಕೆ ಈ ಚಾಂದಖಾನನೇ ಕಾರಣನಾಗಬಹುದೆಂದು ಡಬ್ಲಿನ್ನನು ಆಗ ತನ್ನ ಮನದಲ್ಲಿ ನಿಶ್ಚಯಿಸಿಕೊಂಡನು. ರಾಜಾ ಧ್ಯಾನಸಿಂಹ ಹಾಗು ಮಹಾರಾಜಾ ರಣಜಿತಸಿಂಹ ಇವರಿಬ್ಬರೂ ತಮ್ಮ ಕೈಕೆಳಗಿನವರ ಶೀಲ-ಸ್ವಭಾವಗಳನ್ನು ಮೊದಲು ಚನ್ನಾಗಿ ತಿಳಿದು, ಅವರನ್ನು ತಮ್ಮ ಕೈವಶ ಮಾಡಿಕೊಂಡು, ನಂತರ ಅವರಿಂದ ತಮ್ಮ ಬೇಕಾದ ಕೆಲಸಗಳನ್ನು ಮಾಡಿಕೊಳ್ಳುವ ಹಕೋಟಿಯವರಾಗಿದ್ದರು. ಅದರಿಂದ ಹಿಂದಿನಿಂದ ಆ ನೌಕರರ ಮಾನಾಪಮಾನಗಳನ್ನು ನೋಡುವ ಕಾರಣವೇ ಅವರಿಗೆ ಉಂಟಾಗುತ್ತಿರಲಿಲ್ಲ; ಆದರೆ ತಿಳಿಸಲಿಕ್ಕೆ ಅತ್ಯಂತ ವಿನೋದವೆನಿಸುವದೇನಂದರೆ, ರಣಜಿತಸಿಂಗನು ಅಂಥ ಆ ಕುರಿಯ ಸ್ವಭಾವದ ನೌಕರರ ಬಗ್ಗೆ ಎಂದೂ ಪ್ರಸನ್ನಚಿತ್ತನಾಗುತ್ತಿರಲಿಲ್ಲ. ತನ್ನ ಸ್ವಂತದ ಮಾನಮರ್ಯಾದೆಗಳನ್ನು ಕಾಯ್ದುಕೊಂಡು ದರ್ಬಾರದ ಚಾಕರಿಯನ್ನು ಇಮಾನದಿಂದ ಮಾಡುವಂಥವರನ್ನೇ ಅವನು ಹೆಚ್ಚಾಗಿ ಪ್ರೀತಿಸುತ್ತಿದ್ದನು; ಆದರೆ ತಾನು ಇಂಥ ನೌಕರರನ್ನು ಪ್ರೀತಿಸುತ್ತಿರುತ್ತೇನೆಂಬದನ್ನು ಮಾತ್ರ ಅವನು ಎಂದೂ ಯಾರಿಗೂ ಹೇಳುತ್ತಿರಲಿಲ್ಲ; ಹಾಗು ಅದನ್ನು ಮುಂದಿಗೆ ಪ್ರಯತ್ನಪೂರ್ವಕ ತೋರಗೊಡುತ್ತಿರಲಿಲ್ಲ. ರಣಜಿತನ ಸ್ವಭಾವದ ಆ ಮರ್ಮವನ್ನು ಡಬ್ಲಿನ್ನನು ಎಂದೋ ತಿಳಕೊಂಡಿದ್ದನು; ಮತ್ತು ಅವನು ಹುಟ್ಟಾ ಸ್ವಾಭಿಮಾನಿಯಾದುದರಿಂದ ತಾನು ರಣಜಿತನೊಡನೆ ಒಳ್ಳೇ ರೀತಿಯಿಂದಲೂ ಸ್ವಾಭಿಮಾನದಿಂದಲೂ ನಡಕೊಳ್ಳಬೇಕೆಂಬದನ್ನು ಮೊದಲೇ ಗೊತ್ತು ಮಾಡಿಕೊಂಡಿದ್ದನು.

"ಚಾಂದಖಾ, ಚಾಕರಿಯ ಸಲುವಾಗಿ ಪೋಷಾಕಿನಲ್ಲಿ ಬದಲು ಮಾಡುವದೇಕೆ? ಇನ್ನು ದಂಡಿನ ಚಾಕರಿಯ ದೃಷ್ಟಿಯಿಂದ ಯುರೋಪದೊಳಗೂ ಬೇರೆ ಬೇರೆ ದೇಶಗಳ ಮಾನದಿಂದ ಪೋಷಾಕುಗಳನ್ನು ಬದಲುಗೊಳಿಸಬೇಕಾಗುತ್ತದೆ. ಅದೇ ರಿವಾಜು ಇಲ್ಲಿಯೂ ಇದ್ದರೆ ನಾನು ಶೀಖ ಸರದಾರನ ಪೋಷಾಕನ್ನು ನಿರಾತಂಕವಾಗಿ ಧರಿಸುತ್ತೇನೆ; ಆದರೆ ಈ ಪೋಷಾಕಿನ ಬದಲಾವಣೆಯನ್ನು ಕೇವಲ

ರಣಜಿತನ ಸ್ವಂತದ ಇಚ್ಛೆಯು ಸಲುವಾಗಿ ಮಾಡಬೇಕಾಗಿದ್ದರೆ ಮಾತ್ರ, ನಾನು ನನ್ನ ಸ್ವಾಭಿಮಾನವನ್ನು ತೊರೆದು ಅದನ್ನೆಂದೂ ಧರಿಸಲಾರೆನು. ನನಗೆ ಅಂಥ ಸ್ವಾಭಿಮಾನ ಶೂನ್ಯತೆಯು ನೌಕರಿಯು ಅವಶ್ಯಕತೆಯಾದರೂ ಎಲ್ಲಿ ಇರುತ್ತದೆ? ಈ ರಣಜಿತಸಿಂಗನಲ್ಲಿ ನನ್ನ ಯೋಗ್ಯತೆಗೆ ತಕ್ಕ ನೌಕರಿಯು ಸಿಗದಿದ್ದರೆ, ಇಲ್ಲಿಯೇ ಸಮೀಪದಲ್ಲಿ ಇಂಗ್ಲಿಷ ಕಂಪನಿಯ ರಾಜ್ಯವಿರುತ್ತದೆ. ಅಲ್ಲಿ ಬೇಕಾದಾಗ ನನ್ನ ಮನಸ್ಸಿನ ತಕ್ಕ ಚಾಕರಿಯು ನನಗೆ ಸಿಕ್ಕೇಸಿಗುತ್ತದೆ. ಅದೂ ಅಲ್ಲದೆ ಈ ಭರತ ಖಂಡದಲ್ಲಿ ಬೇರೆ ದೇಶೀಯ ರಾಜ್ಯಗಳಿಗೇನು ಕೊರತೆಯಿದೆ? ಶಹಾ ಸುಜಾನು ತನ್ನ ರಾಜ್ಯವು ಮರಳಿ ದೊರೆಯಬೇಕೆಂದು ಪ್ರಯತ್ನ ಮಾಡುತ್ತಲಿರುವನು. ಅವನಿಗೆ ಒಬ್ಬ ಸುದಕ್ಷ ಸೇನಾಪತಿಯ ಅವಶ್ಯಕತೆಯುಂಟೆಂಬದೂ ನನಗೆ ಗೊತ್ತಿರುತ್ತದೆ.''

ಡಬ್ಲಿನ್ನನ ಆ ಭಾಷಣವು ಮುಗಿಯುವಷ್ಟರಲ್ಲಿ ಒಳ್ಳೇ ಆಹ್ಲಾದದಿಂದ ಚಾಂದಖಾನನು:-ಹುಜೂರ ತಮ್ಮ ಈ ವಿಚಾರವು ಬಲು ಯೋಗ್ಯವಾದದ್ದು. ಈ ವಿಷಯದಲ್ಲಿ ಈ ಸೇವಕ ಚಾಂದಖಾನನೂ ನಮ್ಮ ಹುಜೂರರವರಿಗೆ ಬೇಕಾದ ಸಹಾಯವನ್ನು ಒದಗಿಸಿಕೊಡಲಿಕ್ಕೆ ಸಿದ್ಧನಿರುತ್ತಾನೆ. ನನ್ನ ಬಳಿಯಲ್ಲಿ ಅತ್ಯುತ್ತಮವಾದಂಥ ೫೦ ಜನ ಕುದುರೆಯ ಸವಾರರಿದ್ದು, ಅವರಲ್ಲಿಯ ಒಬ್ಬೊಬ್ಬ ಸವಾರನು ಇಷ್ಟು ಬಲಿಷ್ಠನಾಗಿರುವನಲ್ಲ, ಅವನು ಹತ್ತತ್ತು ಜನ ಶೀಖ ದಂಡಾಳುಗಳನ್ನು ಸಹಜವಾಗಿ ನೆಲಕ್ಕುರುಳಿಸಬಲ್ಲನು.

ಡಬ್ಲಿನ್ನನು ಚಾಂದಖಾನನನ್ನು ಆ ಬಗ್ಗೆ ಮತ್ತೆ ಮಾತಾಡಗೊಡದೆ:-ಚಾಂದಖಾನ, ಈ ಬಗ್ಗೆ ಆ ಮೇಲೆ ಆಲೋಚಿಸುವಾ. ಅವಶ್ಯಕಂಡರೆ ನಿಮ್ಮ ಸಹಾಯವನ್ನು ನಾನು ಸ್ವೀಕರಿಸುತ್ತೇನೆ, ಎಂದಂದನು. ಅದನ್ನುಕೇಳಿ ಚಾಂದಖಾನನು ಸಂತೋಷಗೊಂಡು, ಅವನಿಗೊಮ್ಮೆ ಮುಜುರೆ ಮಾಡಿ, ಅಲ್ಲಿಂದ ಹೊರಟು ಹೋದನು.

ಡಬ್ಲಿನ್ನನು ಯಾವ ಉದ್ದೇಶದಿಂದ ಈ ಮೇಲಿನ ಭಾಷಣವನ್ನು ಮಾಡಿದ್ದನೋ ಆ ಉದ್ದೇಶ ಸಾಫಲ್ಯಕ್ಕೆ ಅಂದಿನಿಂದಲೇ ಪ್ರಾರಂಭವಾದಂತಾಯ್ತು. ತನ್ನ ರಾಜ್ಯಕ್ಕೆ ಬಂದಿದ್ದ ಒಬ್ಬ ಸಾಹಸಿಗನಾದ ಯುರೋಪಿಯನ್ನನಿಗೆ ತಕ್ಕ ನೌಕರಿಯು ತನ್ನಲ್ಲಿ ದೊರೆಯದ್ದಕ್ಕಾಗಿ ಅವನು ತಿರುಗಿ ಹೋಗುವನೆಂಬ ಸಂಗತಿಯು ಅಂದೇ ರಣಜಿತನ ಕಿವಿಯವರೆಗೆ ತಲುಪಿತು; ಆ ಸಂಗತಿಯನ್ನು ಕೇಳಿಕೊಳ್ಳಲಿಕ್ಕೆ ರಣಜಿತನೆಂದೂ ಸಿದ್ಧನಿರಲಿಲ್ಲ. ಯಾಕಂದರೆ ತನ್ನ ಸೈನ್ಯವು ಪಾಶ್ಚಾ

ಶ್ಯರ ರಣಕೌಶಲ್ಯದಿಂದಲೇ ಸರ್ವತ್ರದಲ್ಲಿಯೂ ವಿಜಯಿಯಾಗಿರುವದೆಂಬದು ರಣಜಿತನಿಗೆ ಚೆನ್ನಾಗಿ ಗೊತ್ತಿತ್ತು. ಆದರಿಂದ ಒಬ್ಬ ಸುರಿತ ಇಂಗ್ಲಿಷ ಸೇನಾಪತಿಯು ತಾನಾಗಿ ತನ್ನ ಬಳಿಗೆ ಬಂದಿರಲು, ಅವನನ್ನು ಹಾಗೇ ಹೋಗಗೊಡುವಂತಹ ಮೂರ್ಖನು ಅವನಾಗಿರಲಿಲ್ಲ. ಆದರಿಂದ ಅವನು ಡಬ್ಲಿನ್ನನ ನೌಕರಿಯನ್ನು ಇನ್ನು ಹೆಚ್ಚು ದಿನಗಳ ವರೆಗೆ ಮುಂದಕ್ಕೆ ಒತ್ತಬಾರದೆಂದು ನಿರ್ಧರಿಸಿಕೊಂಡನು.

ಇತ್ತ ಡಬ್ಲಿನ್ನನ ಬಳಿಯ ಹಣವೆಲ್ಲ ತೀರುತ್ತ ಬಂದದ್ದರಿಂದ ಅವನು ಇನ್ನು ಸುಮ್ಮನೆ ಕೂಡ್ರುವಂತಿರಲಿಲ್ಲ; ಆದರಿಂದ ಅವನು ತನ್ನ ಕಾರ್ಯಭಾಗವನ್ನು ಬೇಗನೆ ಸಾಧಿಸಿಕೊಳ್ಳುವದಕ್ಕಾಗಿ ತನ್ನ ಬುದ್ಧಿವಂತ್ರಿಯನ್ನು ವೆಚ್ಚಮಾಡ ತೊಡಗಿದನು. ಆದರಿಂದಲೇ ಅವನು ಚಾಂದಖಾನನೆದುರಿಗೆ ಮೇಲೆ ಬರೆದಂತೆ ಒಂದು ಗಮಕವನ್ನು ಒಗೆದಿದ್ದನು; ಆದರೆ ಆ ಸುದ್ದಿಯು ಕರ್ಣೋಪಕರ್ಣವಾಗಿ ಹೋಗಿ ರಣಜಿತನಿಗೆ ತಿಳಿಯಿತಲ್ಲದೆ, ಅದರೊಡನೆ ಮತ್ತೊಂದು ವಿಶೇಷತರದ ಸಂಗತಿಯೂ ಆತನ ಕಿವಿಗೆ ಬಿದ್ದಿತು. "ಪಂಜಾಬದೊಳಗಿನ ಈಗಿನ ಎಲ್ಲ ಸ್ಥಿತಿಗತಿಗಳನ್ನು ತಿಳಿದ ಡಬ್ಲಿನ್ನನು ಈ ದರ್ಬಾರದಲ್ಲಿರಲಿಕ್ಕೇ ಒಲ್ಲನಂತೆ" ಎಂಬ ಸಂಗತಿಯು ರಣಜಿತನಿಗೆ ತಿಳಿಯಲು, ಅವನು ಮರುದಿನವೇ ಡಬ್ಲಿನ್ನನಿಗೆ ತನ್ನ ದರ್ಬಾರಕ್ಕೆ ಬರಬೇಕೆಂದು ಫಕೀರಜಿಯ ಮುಖಾಂತರ ಬರೆದು ತಿಳಿಸಿದನು; ಆದರೆ ಎಷ್ಟೋ ಸಮುದ್ರಗಳ ನೀರು ಕುಡಿದು ಬಂದ ಡಬ್ಲಿನ್ನನು ರಣಜಿತನ ಆ ಆತುರವನ್ನು ತಿಳಿದು, ಮರುದಿನ ಬೇಕಂತಲೇ ಆತನ ದರ್ಬಾರಕ್ಕೆ ಹೋಗಲಿಲ್ಲ. ಮೈಯಲ್ಲಿ ಅಸ್ವಸ್ಥವಿರುವದರಿಂದ ಈಗ ಬರಲಿಕ್ಕೆ ಆಗುವದಿಲ್ಲೆಂದು ಅವನು ಉತ್ತರ ಬರೆದು ಕಳಿಸಿ, ತನ್ನ ಬಂಗ್ಲೆಯಲ್ಲೇ ಸುಮ್ಮನೆ ಇದ್ದುಬಿಟ್ಟನು. ಡಬ್ಲಿನ್ನನು ಅಂದು ದರ್ಬಾರಕ್ಕೆ ಬಾರದ್ದರಿಂದ ತನಗೆ ಈ ಮೊದಲು ತಿಳಿದ ಸುದ್ದಿಯು ನಿಜವಿರಬಹುದೇನೆಂಬ ಬಗ್ಗೆ ರಣಜಿತನ ಮನಸ್ಸಿನಲ್ಲಿ ಹೆಚ್ಚು ಅನುಮಾನವುಂಟಾಗಿ ಅವನ ಚಿತ್ತವು ವ್ಯಗ್ರವಾಯಿತು. ಆದರಿಂದ ಅವನು ಡಬ್ಲಿನ್ನನ ಮನಸ್ತುಷ್ಟಿಗಾಗಿ ಆ ದಿವಸ ನೂರು ನಾಣ್ಯಗಳನ್ನೂ ಕೆಲ ಮಿಠಾಯಿತುಂಬಿದ ತಬಕಗಳನ್ನೂ ಅವನ ಬಂಗ್ಲೆಗೆ ಬೇಕಂತ ಕಳಿಸಿದನು. ಇಷ್ಟೇ ಅಲ್ಲ, ಡಬ್ಲಿನ್ನನು ದರ್ಬಾರಕ್ಕೆ ಬರುವವರೆಗೆ ದಿನಾಲು ಹೀಗೆಯೇ ಕಳಿಸುತ್ತಿರಬೇಕೆಂದು ತನ್ನ ಕಾರಭಾರಿಗೆ ಹುಕುಂ ಮಾಡಿದನು.

ಮುಂದೆ ಮೂರು-ನಾಲ್ಕು ದಿನಗಳು ಕಳೆದ ಬಳಿಕ ರಣಜಿತಸಿಂಹನು

ಡಬ್ಲಿನ್ನನಿಗೆ ಮತ್ತೆ ಆಮಂತ್ರಣವನ್ನು ಕಳಿಸಿದನು; ಆದರೆ ಈ ಆಮಂತ್ರಣವು ದರ್ಬಾರಕ್ಕಾಗಿರದೆ, ರಾಜಾ ಧ್ಯಾನಸಿಂಹನಂತೆ ರಣಜಿತನಿಗಾದರೂ ಅಗ್ನಿಮಾಂದ್ಯ ರೋಗವಿದ್ದು, ತನ್ನ ಬಹುದಿನಗಳ ಅಗ್ನಿಮಾಂದ್ಯರೋಗವು ಡೆಬ್ಲಿನ್ನನ ಅಲ್ಪ ಉಪಚಾರಗಳಿಂದ ಸಮೂಲ ನಾಶವಾಗಿ ತನಗೆ ಒಳ್ಳೇ ಆರಾಮವಾಯಿತೆಂಬ ದನ್ನು ಹೇಳಿದ ಧ್ಯಾನಸಿಂಹನ ಸೂಚನೆಯ ಮೇರೆಗೆ ತಾನೂ ಅವನಿಂದ ಔಷಧೋ ಪಚಾರ ಮಾಡಿಸಿಕೊಳ್ಳಬೇಕೆಂಬ ಹೇತುವಿನಿಂದ ರಣಜಿತನು ಡಬ್ಲಿನ್ನನನ್ನು ಕರೆಕಳುಹಿದ್ದನು; ಆದರೆ ಆಗಲೂ ತನ್ನ ಬೇನೆಯ ನೇವಹೇಳಿ ಡಬ್ಲಿನ್ನನು ಅವ ನೆಡೆಗೆ ಹೋಗಲಿಲ್ಲ; ಮಾತ್ರ ತನ್ನನ್ನು ಕರೆಯಬಂದವನೊಡನೆ ರಣಜಿತಸಿಂಹನ ಆ ಅಗ್ನಿಮಾಂದ್ಯಕ್ಕೆ ತನ್ನ ಔಷಧವನ್ನೂ, ಪಥ್ಯಾದಿಗಳ ಅನುಪಾನ ಪತ್ರವನ್ನೂ ಕಳಿಸಿಕೊಡಲಿಕ್ಕೆ ಅವನು ಮರೆಯಲಿಲ್ಲ; ಹಾಗು ತನ್ನ ದೇಹದ ಅಸ್ವಸ್ಥತೆಯ ಮೂಲಕ ತನಗೆ ಸ್ವತಃ ಬರಲಿಕ್ಕೆ ಆಗದಿದ್ದ ಬಗ್ಗೆ ತನ್ನನ್ನು ಕ್ಷಮಿಸಬೇಕೆಂದು ವಿನಂತಿ ಮಾಡಿಕೊಳ್ಳಲಿಕ್ಕೂ ತಪ್ಪಲಿಲ್ಲ.

ಡಬ್ಲಿನ್ನನ ಸುದೈವದಿಂದಲೋ ಏನೋ ಎಂಬಂತೆ ಆ ಔಷಧದಿಂದ ರಣ ಜಿತನ ಪ್ರಕೃತಿಯು ಸುಧಾರಿಸಹತ್ತಿತು. ಮುಂದೆ ನಾಲ್ಕೆಂಟು ದಿನಗಳಲ್ಲೇ ಆ ಔಷಧಿಯ ಸೇವನದ ಮೂಲಕ ಆತನ ಬಹುದಿನದ ಅಗ್ನಿಮಾಂದ್ಯವು ನಾಮಶೇಷ ವಾಯಿತು. ಅದರಿಂದ ಸಂತಸಗೊಂಡ ರಣಜಿತನು ಡಬ್ಲಿನ್ನನ ವಿಷಯದಲ್ಲಿ ಪರಮ ಆದರವುಳ್ಳವನಾಗಿ, ಆ ತನ್ನ ರೋಗನಿವಾರಣದ ಪುರಸ್ಕಾರವೆಂದು ಒಂದು ಸಾವಿರ ನಾಣ್ಯಗಳನ್ನೂ ಕೆಲ ಮಿಠಾಯಿಗಳನ್ನೂ ಅವನು ಡಬ್ಲಿನ್ನನಿಗೆ ಕಳಿಸಿಕೊಟ್ಟನು. ಹಾಗೂ ಅದರೊಡನೆ ನಿಮ್ಮ ಪ್ರಕೃತಿಯು ಸುಧಾರಿಸಿದ ಕೂಡಲೆ ದರ್ಬಾರಕ್ಕೆ ಬರಬೇಕೆಂದು ತಿಳಿಸಿದನು. ಯಾವುದೊಂದು ಪದಾರ್ಥವು ಮೆತ್ತಗಿರುವದೆಂದು ಮೊಳಕೈಯಿಂದ ಅಗಿಯಬಾರದೆಂಬಂತೆ, ರಣಜಿತನನ್ನು ಇನ್ನು ಹೆಚ್ಚು ಪರೀಕ್ಷಿಸಬಾರದೆಂದು ಬಗೆದು, ಡಬ್ಲಿನ್ನನು ಮರುದಿನವೇ ತನ್ನ ಸರಂಜಾಮುದೊಡನೆ ಆತನ ದರ್ಬಾರಕ್ಕೆ ಹೊರಟನು.

ಡಬ್ಲಿನ್ನನು ತನ್ನ ಜನರೊಡನೆ ದರ್ಬಾರಕ್ಕೆ ಹೊರಟಿರಲು, ಇಷ್ಟರಲ್ಲಿ ಅವ ನನ್ನು ಕರೆಯಲಿಕ್ಕೆ ಬರುತ್ತಿರುವ ರಣಜಿತನ ಸೈನ್ಯವು ಅವನಿಗೆ ನಡುದಾರಿಯಲ್ಲೇ ಭೆಟ್ಟಿಯಾಯಿತು. ರಣಜಿತನ ದರ್ಬಾರಕ್ಕೆ ಡಬ್ಲಿನ್ನನು ತಲುಪುತ್ತಲೇ, ನಾನು ನಿಮ್ಮ ಶರೀರ ರಕ್ಷಣೆಗಾಗಿ ಕೆಲ ಸ್ವಾರರನ್ನು ಕಳಿಸಿದ್ದೆನು. ಅವರು ನಿಮಗೆ ಕೂಡಲಿಲ್ಲವೇ? ಎಂದು ರಣಜಿತನು ಪ್ರಶ್ನೆ ಮಾಡಲು, ಅದನ್ನು ಕೇಳಿ ಡಬ್ಲಿನ್ನನ

ಳ್ಳಿಯ ಸ್ವಾಭಿಮಾನವು ಜಾಗೃತವಾಗಿ ಅವನಿಗೆ ಅದರಿಂದ ಬಹು ಸಂತೋಷವೆನಿಸಿತು. ಅಂದು ದರ್ಬಾರದೊಳಗಿನ ಪ್ರತಿಯೊಬ್ಬರೂ ಅವನನ್ನು ಸನ್ಮಾನಿಸುತ್ತಿದ್ದರು. ಡಬ್ಲಿನ್ನನು ತನಗೆ ಮುಜುರೆ ಮಾಡಿಮಾಡಿ ಸನ್ಮಾನಿಸುತ್ತಿದ್ದಂಥ ದರ್ಬಾರದೊಳಗಿನ ಪ್ರತಿಯೊಬ್ಬ ಸಣ್ಣಪುಟ್ಟ ಅಧಿಕಾರಿಗಳಿಗೆ ಮಂದಹಾಸದಿಂದ ಪ್ರತಿ ಮುಜುರೆ ಮಾಡುತ್ತ ರಣಜಿತನ ಸಿಂಹಾಸನದ ಬಳಿಗೆ ಹೋಗಿ ದಂಡಿನ ಪದ್ಧತಿಯ ಮೇರೆಗೆ ಮುಜುರೆ ಮಾಡಿದನು. ಕೂಡಲೆ ರಣಜಿತನು ತನ್ನ ಶಿರವನ್ನು ತಗ್ಗಿಸಿ ಇವನಿಗೆ ಪ್ರತಿ ಮುಜುರೆಯನ್ನು ಮಾಡಿದಂತೆ ತೋರಿ, ತನ್ನ ಬಳಿಯ ಒಂದು ಆಸನದ ಕಡೆಗೆ ಬೊಟ್ಟು ಮಾಡಿ ಅಲ್ಲಿ ಕೂಡ್ರಲಿಕ್ಕೆ ತಿಳಿಸಿದನು.

ರಣಜಿತಸಿಂಹನು ಆತನ ದೇಹಸ್ವಾಸ್ಥ್ಯದ ವಿಷಯವಾಗಿ ಕುಶಲಪ್ರಶ್ನೆಯನ್ನು ಮಾಡಿದ ಬಳಿಕ, ಯುರೋಪ, ಅಮೇರಿಕಾ ಮುಂತಾದ ಪಾಶ್ಚಾತ್ಯ ದೇಶಗಳ ರಣನೀತಿಯ ವಿಷಯವಾಗಿ ಅವನೊಡನೆ ಕೆಲವಿಷಯವನ್ನು ಚರ್ಚಿಸಿದನು. ಡಬ್ಲಿನ್ನನು ತನಗೆ ಗೊತ್ತಿದ್ದ ಸಂಗತಿಯನ್ನು ಸ್ವಲ್ಪದರಲ್ಲಿ ಬಹು ಮಾರ್ಮಿಕವಾಗಿ ನಿವೇದಿಸಿದನು. ಅದರಿಂದ ರಣಜಿತನು ಬಹು ಸಂತುಷ್ಟನಾಗಿ:—ಡಬ್ಲಿನ್ನಸಾಹೇಬ, ನಿಮಗೆ ನಾನು ಇನ್ನುಮೇಲೆ ಏನನ್ನು ತಿಳಿಸಬೇಕೆಂದಿರುತ್ತೇನೋಯೆ ಅದು ಬಹು ಮಹತ್ವದ್ದಾಗಿರುತ್ತದೆ. ಆದುದರಿಂದ ನೀವು ನನ್ನ ಈ ಸಂದೇಶವನ್ನು ಲಕ್ಷ್ಯಪೂರ್ವಕವಾಗಿ ಕೇಳಿಕೊಳ್ಳಿರಿ. ನಿಮ್ಮ ಈ ಸಂಭಾಷಣ, ನಿಮ್ಮ ಶೌರ್ಯ, ಸಾಹಸ ಇವೆಲ್ಲವೂ ನನ್ನ ಮನಸ್ಸಿಗೆ ಬಹು ಸಂತೋಷವನ್ನುಂಟು ಮಾಡಿರುತ್ತವೆ. ನಿಮ್ಮಲ್ಲಿ ಅನೇಕ ಸದ್ಗುಣಗಳಿರುತ್ತವೆಂಬದು ನನ್ನ ನಿದರ್ಶನಕ್ಕೆ ಬಂದಿರುತ್ತದೆ. ನೀವು ನಿಮ್ಮ ಶತ್ರುವಿನ ಮೇಲಾದರೂ ಉಪಕಾರವನ್ನು ಮಾಡಿ, ನಿಮ್ಮ ಅಂತಃಕರಣದ ದೊಡ್ಡಿಸ್ತಿಕೆಯನ್ನು ನಮ್ಮೆಲ್ಲರಿಗೂ ತೋರಿರುತ್ತೀರಿ. ಮನುಷ್ಯರ ಸ್ವಭಾವವನ್ನು ಪರೀಕ್ಷಿಸುವದಕ್ಕೆ ನಾನೊಳ್ಳೇ ಖಂಬೀರನೆಂದು ಜನರು ನನಗೆ ಅನ್ನುತ್ತಿರುತ್ತಾರೆ; ಆದರೆ ಅದು ನಿಜವೊ ಸುಳ್ಳೊ ನಾನರಿಯೆನು. ಅದು ಹೇಗಿದ್ದರೂ ನಿಮ್ಮ ವಿಷಯದ ನನ್ನ ಪರೀಕ್ಷೆಯು ಮಾತ್ರ ಎಂದೂ ಸುಳ್ಳಾಗಲಿಕ್ಕಿಲ್ಲ. ನೀವು ಸಮರ್ಥರೂ ಸಾಹಸಿಗರೂ ಆಗಿರುತ್ತೀರೆಂದು ನನ್ನ ಖಾತ್ರಿಯಾಗಿರುತ್ತದೆ. ಅದರಂತೆ ನೀವು ಕುಶಾಗ್ರ ಬುದ್ಧಿಯವರೂ ಅತ್ಯಂತ ವಿಶ್ವಾಸುಕರೂ ಆಗಿರುತ್ತೀರಿ. ನೀವು ಇನ್ನೂ ಕೇವಲ ತರುಣರಾಗಿದ್ದರೂ ಯಾವನೊಬ್ಬ ದಿನಹೋದ ಮುತ್ಸದ್ದಿಗಿಂತಲೂ ನಿಮಗೆ ಜಗತ್ತಿನ ಅನುಭವವು ಹೆಚ್ಚಾಗಿರುತ್ತದೆ. ದೂರದರ್ಶಿತ್ವವಂತೂ ನಿಮ್ಮ ಹುಟ್ಟಗುಣವೇ ಆಗಿದೆ. ನನ್ನಲ್ಲಿ ವಕ್ತೃತ್ವಶಕ್ತಿಯು ಇರದ್ದ

ರಿಂದ ನಾನು ಹೇಗಾದರೂ ನಿಮ್ಮ ವಿಷಯದ ನನ್ನ ಮನೀಷೆಯನ್ನು ನಿಮಗೆ ತಿಳಿಸಿರುತ್ತೇನೆ ನೀವು ನಮ್ಮ ದರ್ಬಾರದ ನೌಕರಿಯನ್ನು ಮಾಡಲೊಪ್ಪಿದರೆ ನಿಸ್ಸಂಶಯವಾಗಿಯೂ ನಮ್ಮ ಲಾಭವಾಗದೆ ಇರದು. ನಿಮ್ಮ ಅದ್ವಿತೀಯ ಬುದ್ಧಿಮತ್ತೆಯ ಮಾನದಿಂದ ನಿಮ್ಮ ಮೇಲೆ ಅಂಥ ಗುರುತರ ಜವಾಬುದಾರಿಯ ಹೋರೆಯನ್ನೇ ಹೊರಿಸಬೇಕೆಂದಿರುತ್ತೇವೆ. ಇಂದು ನಮ್ಮ ದರ್ಬಾರದಿಂದ ನಿಮಗೆ ಎರಡು ಅಧಿಕಾರಪತ್ರಗಳು ಸಮರ್ಪಿಸಲ್ಪಡುವವು. ಅವುಗಳಲ್ಲೊಂದು ನಮ್ಮ ಸೇನಾಪತಿಪದದ ಅಧಿಕಾರ ಪತ್ರವು. ಇನ್ನೊಂದು ನಮ್ಮ ಒಂದು ಪ್ರಾಂತದ ಗವರ್ನರಪದದ ಅಧಿಕಾರ ಪತ್ರವು. ಆದುದರಿಂದ ಇಂದಿನಿಂದ ನೀವು ನಮ್ಮ ದರ್ಬಾರದ ಸೇನಾಪತಿಗಳೂ ಗವರ್ನರರೂ-ಸುಭೇದಾರರೂ ಆಗಿರುತ್ತೀರಿ.

ರಣಜಿತಸಿಂಹನು ತನ್ನ ಭಾಷಣವನ್ನು ಹಾಗೆಯೇ ಮುಂದರಿಸಿ:-ಡಬ್ಲಿನ್ನ ಸಾಹೇಬ, ನಮ್ಮ ಪಂಜಾಬದೇಶದ ತೀರ ಉತ್ತರದ ಗಡಿಯಲ್ಲಿ 'ಕೋಟಕಾಂಗ್ರಾ' ಎಂಬದೊಂದು ಸುಭೆಯಿರುತ್ತದೆ. ಇನ್ನು ಮುಂದೆ ನೀವು ಅಲ್ಲಿಯ ಗವರ್ನರ ರಾಗಿದ್ದುಕೊಂಡು ನಿಮ್ಮ ಕರ್ತವ್ಯವನ್ನು ನಡಿಸಬೇಕಾಗಿದೆ. ಆ ನಮ್ಮ ಪ್ರಾಂತವು ಕೇವಲ ಗುಡ್ಡಗಾಡಿನದಿದ್ದು, ಅಲ್ಲಿಯ ಪ್ರಜೆಗಳಂತೂ ವಿಲಕ್ಷಣಪ್ರಕಾರದವರಾಗಿ ರುತ್ತಾರೆ. ನೀವು ನಮ್ಮ ಪ್ರಾಂತಕ್ಕೆ ಕೇವಲ ಹೊಸಬರಾದುದರಿಂದ ನಾನು ನಿಮಗೀ ಸಂಗತಿಯನ್ನು ಬೇಕಂತ ತಿಳಿಸುತ್ತೇನೆ. ನಿಮಗೆ ವಹಿಸಿರುವ ಈ ಕೆಲಸವು ಅಷ್ಟೊಂದು ಕಠಿಣವಾಗಿರದಿದ್ದರೂ, ಸದ್ಯದ ಅಲ್ಲಿಯ ಪರಿಸ್ಥಿತಿಯ ಮೂಲಕ ಅದೊಳ್ಳೇ ಕಠಿಣವಾಗಿರುತ್ತದೆ. ಸದ್ಯದ ಅಲ್ಲಿಯ ರಾಜ್ಯಕಾರಭಾರದ ಪದ್ಧತಿಯ ಮೂಲಕ ಅಲ್ಲಿಯ ಪ್ರಜೆಗಳು ಸಂತುಷ್ಟರಿಲ್ಲ; ನಾನೂ ಸಂತುಷ್ಟನಿರುವದಿಲ್ಲ. ಮೊದಲು ಆ ನಮ್ಮ ಸುಭೆಯಿಂದ ಒಂಬತ್ತು ಲಕ್ಷ ಹಣವು ನಮ್ಮ ಖಜೀನೆಗೆ ಬರುತ್ತಿದ್ದಾಗ್ಯೂ ಆಗ ಅಲ್ಲಿಯ ಪ್ರಜೆಗಳು ಅತ್ಯಂತ ತುಷ್ಟರಾಗಿದ್ದರು; ಆದರೆ ಇತ್ತೀಚೆಗೆ ಆ ಪ್ರಾಂತದಿಂದ ನಮ್ಮ ಖಜೀನೆಗೆ ಸರಾಸರಿ ಆರುಲಕ್ಷ ಹಣವೇ ಬರುತ್ತಿದ್ದರೂ, ಅಲ್ಲಿಯ ಪ್ರಜೆಗಳು ತೀರ ಅಸಂತುಷ್ಟರಾಗಿರುತ್ತಾರೆ. ನೀವು ಆ ಪ್ರಾಂತಕ್ಕೆ ಹೋಗಿ ಅಲ್ಲಿಯ ಆ ಸ್ಥಿತಿಯನ್ನು ಸುಧಾರಿಸತಕ್ಕದ್ದು. ಅಲ್ಲಿಯ ಪ್ರಸ್ತುತದ ಪರಿಸ್ಥಿತಿಯೊಡನೆ ನೀವು ಹೋರಾಡಬೇಕಾದ್ದರಿಂದ ನಿಮಗೆ ಮೊದ ಮೊದಲು ಅಲ್ಲಿ ಹೆಚ್ಚು ಖರ್ಚು ಆಗುವ ಸಂಭವವಿದೆಯೆಂಬದು ನನಗರಿಯದ ವಿಷಯವಾಗಿಲ್ಲ. ಆದುದರಿಂದ ಆ ಬಗ್ಗೆ ನೀವು ಚಿಂತಿಸುವ ಕಾರಣವಿಲ್ಲ ನಿಮಗೆ ಯೋಗ್ಯವೆನಿಸಿದ ಖರ್ಚನ್ನು ನೀವು ಯಾರ ಮಂಜೂರಿಯನ್ನೂ ಪಡೆಯದೆ ಮಾಡ

ಬಹುದು; ಇಷ್ಟೇ ಅಲ್ಲ, ನಾನು ನಿಮಗೆ ಈ ವಿಷಯದಲ್ಲಿ ಹುಸ ರಿಯಾಯತಿಕೊಟ್ಟು ತಿಳಿಸುವದೇನಂದರೆ, ನೀವು ಅಲ್ಲಿಗೆ ತಲುಪಿದ ಬಳಿಕ ಎರಡು ವರ್ಷಗಳ ವರೆಗೆ ನಮ್ಮ ಖಜೀನಿಗೆ ಐದ್ವೈದು ಲಕ್ಷದಂತೆ ಕಳಿಸಿದರೂ ಸಾಕು; ಆದರೆ ಮುಖ್ಯ ಮಾತೇನಂದರೆ, ಅಲ್ಲಿಯ ನನ್ನ ಪ್ರಜೆಗಳ ಅಸಂತುಷ್ಟತೆಯನ್ನು ಕಿತ್ತೊಗೆಯಬೇಕು. ನನ್ನ ಪ್ರಜೆಗಳೆಲ್ಲರೂ ಸಂತುಷ್ಟರಾಗಿರಬೇಕೆಂದು ನನ್ನ ಇಚ್ಛೆಯಿರುತ್ತದೆ; ಮತ್ತು ಅದೇ ನನ್ನ ರಾಜ್ಯಕ್ಕೆ ಮುಖ್ಯವಾದ ಭೂಷಣವೆಂದು ನನಗನಿಸುತ್ತದೆ. ಅತ್ತ ಕಡೆಯ ಪ್ರಾಂತದಲ್ಲಿ ನಿಮ್ಮ ಮನಸ್ಸಿನ ತಕ್ಕ ಬೇಕಾದ ಸುಧಾರಣೆಗಳನ್ನು ನೀವು ಮಾಡಿದರೂ ಅದಕ್ಕೆ ನನ್ನ ಅಡ್ಡಿಯಿಲ್ಲ; ಆದರೆ ನನ್ನ ಪ್ರಜೆಗಳ ದೂರುಗಳು ಮಾತ್ರ ನನ್ನ ಕಿವಿಯ ವರೆಗೆ ಬರದಂತೆ ನೋಡಿಕೊಳ್ಳಿರೆಂದರಾಯಿತು. ರಾಜನ ಮುಖ್ಯ ಕರ್ತವ್ಯವಾದ ಪ್ರಜೆಗಳ ಸೌಖ್ಯ, ಕಲ್ಯಾಣಗಳ ಕಡೆಗೆ ಸಂಪೂರ್ಣವಾಗಿ ಲಕ್ಷ್ಯ ಕೊಡಿರೆಂದರಾಯಿತು. ಆ ನನ್ನ ಪ್ರಜೆಗಳ ಸುಖ-ಸಮೃದ್ಧಿಗಳನ್ನು ಹೆಚ್ಚಿಸುವದ ಕ್ಕಾಗಿ ಬೇಕಾದಷ್ಟು ಹಣ ಖರ್ಚುಮಾಡಲಿಕ್ಕೆ ನಾನು ನಿಮಗೆ ಹೇಗೆ ನನ್ನ ಖಜೀನೆಯ ಸರ್ವ ಅಧಿಕಾರಗಳನ್ನು ಕೊಟ್ಟಿರುತ್ತೇನೆಯೋ, ಅದರಂತೆ ಆ ಕೆಲಸಕ್ಕಾಗಿ ನೀವು ನಿಮಗೆ ಯೋಗ್ಯ ತೋರಿದ ಬೇಕಾದ ಶಾಸನ ಪದ್ಧತಿಯನ್ನು ಅಲ್ಲಿ ಅಮಲಿನಲ್ಲಿ ತರಬೇಕೆಂಬ ಅಧಳಿತದ ಅಧಿಕಾರವನ್ನೂ ನಿಮಗೆ ಕೊಡುತ್ತೇನೆ. ಅವಶ್ಯಕಂಡರೆ ನೀವು ನಿಮ್ಮ ದರ್ಪವನ್ನು ಕಾಯ್ದುಕೊಳ್ಳುವದಕ್ಕಾಗಿ ಯಾವನೊಬ್ಬನನ್ನು ಗಲ್ಲಿಗೇರಿಸಿದರೂ ಚಿಂತೆಯಿಲ್ಲ; ಆದರೆ ನಿಮ್ಮ ಆ ನ್ಯಾಯವು ಪರಮೇಶ್ವರನಲ್ಲಿ ಮಾನ್ಯವಾಗಬೇಕು, ಇಷ್ಟೇ ನನ್ನ ಕೋರಿಕೆಯು.

ಡಬ್ಲಿನ್ನಸಾಹೇಬ, ನೀವು ನಿಮ್ಮ ಎಲ್ಲ ಖಾಸಗೀ ಹಾಗು ಸರಕಾರೀ ಖರ್ಚನ್ನು ಸರಕಾರೀ ಖಜೀನೆಯಿಂದಲೇ ಮಾಡಬೇಕಲ್ಲದೆ, ಪ್ರತಿವರ್ಷಕ್ಕೆ ಹದಿನೈದು ಸಾವಿರ ರೂಪಾಯಿಗಳನ್ನು ನಿಮ್ಮ ವೇತನವೆಂದು ತಕ್ಕೊಳ್ಳತಕ್ಕದ್ದು; ಹಾಗು ಆ ಪ್ರಾಂತದಿಂದ ಬರತಕ್ಕ ನಜರಾಣೆಯು ಏನು ಬಂದರೂ ಅದನ್ನು ನೀವೇ ತಕ್ಕೊಳ್ಳತಕ್ಕದ್ದು. ನೀವು ನಿಮ್ಮ ಸ್ವಂತದ ಈಗಿನ ದಂಡಿನ ಹೊರತು ಒಂದು ಕಾಲಾಳುಗಳ ದಂಡನ್ನೂ, ಎರಡು ಸ್ವಾರರ ದಂಡುಗಳನ್ನೂ, ಒಂದು ತೋಫುಖಾನೆಯ ಸರಂಜಾಮುವನ್ನೂ ಇಟ್ಟುಕೊಳ್ಳತಕ್ಕದ್ದು; ಮತ್ತು ಅವುಗಳ ಮೇಲೆ ನಿಮ್ಮ ಅಧಿಕಾರವೇ ಸಂಪೂರ್ಣವಾಗಿ ನಡೆಯತಕ್ಕದ್ದು. ಆ ದಂಡುಗಳ ಶಸ್ತ್ರಾಸ್ತ್ರ, ಪೋಷಾಕು ಮುಂತಾದವುಗಳಲ್ಲಿ ನಿಮ್ಮ ಮನಸ್ಸಿಗೆ ತಕ್ಕಂತೆ ನೀವೇ ಸುಧಾರಣೆಗಳನ್ನು ಮಾಡಿಕೊಳ್ಳತಕ್ಕದ್ದು; ಆದರೆ ಆ ನಿಮ್ಮ ಎಲ್ಲ ದಂಡಾಳುಗಳು ರಣಜಿತ

ಸಿಂಹನ ಶಿಪಾಯಿಗಳಿಂದು ಒಡೆದು ಕಾಣುತ್ತಿರಬೇಕೆಂದನ್ನು ಮಾತ್ರ ಮರೆಯ ಲಾಗದು. ಮೇಲೆ ಹೇಳಿದ ದಂಡಿಗಿಂತ ಹೆಚ್ಚು ದಂಡು ಬೇಕಾದರೂ ನೀವು ಇಟ್ಟುಕೊಳ್ಳಬಹುದು. ಆ ಬಗ್ಗೆ ನನ್ನ ಮಂಜೂರಿಯನ್ನು ಪಡೆಯುವ ಅವಶ್ಯ ಕತೆಯಿಲ್ಲ. ನಿಮ್ಮ ಕೂಡ ನಮ್ಮ ಸರಕಾರೀ ಸವಾರರ ಚಿಕ್ಕದೊಂದು ದಂಡು ಬರುತ್ತದೆ. ಅದರ ಮೇಲೆ ನೀವು ಯಾವ ಪ್ರಕಾರದಿಂದಲೂ ಅಧಿಕಾರ ನಡಿಸ ಕೂಡದು; ಹಾಗು ಅದರ ಖರ್ಚುವೆಚ್ಚದ ವ್ಯವಸ್ಥೆಯೂ ನಿಮ್ಮ ಕಡೆಗಿರಲಾರದು. ಆ ಚಿಕ್ಕದಂಡನ್ನು ಜಮಾದಾರ ಖೋಸಾಲ ಸಿಂಹರವರು ತಯಾರಿಸುತ್ತಿದ್ದು ಅದು ಬೇಗನೆ ಸಿದ್ಧವಾಗಲಿರುವದು. ನೀವೂ ಅತ್ತ ಹೊರಡುವ ನಿಮ್ಮ ಸಿದ್ಧತೆ ಯನ್ನು ಬೇಗನೆ ಮಾಡಿಕೊಳ್ಳಿರಿ. ನಿಮ್ಮ ವಿರುದ್ಧವಾದ ದೂರುಗಳು ಕೋಟ ಕಾಂಗ್ರಾ ಪ್ರಾಂತದಿಂದ ನನ್ನ ಕಿವಿಗೆ ಬಾರದಿರಲೆಂದು ನಮ್ಮ ಗುರುಗಳನ್ನು ಕುರಿತು ಪ್ರಾರ್ಥಿಸುತ್ತೇನೆ; ಆದರೆ ಅಲ್ಲಿಂದ ನಿಮ್ಮ ವಿರುದ್ಧವಾದ ಯಾವದೊಂದು ದೂರು ನನ್ನ ಕಡೆಗೆ ಬಂದರೆ ನಾನು ಆ ಬಗ್ಗೆ ನಿಮ್ಮ ಜವಾಬನ್ನು ಕೇಳದಿರಲಾರೆ ನೆಂಬದನ್ನು ಚೆನ್ನಾಗಿ ನೆನಪಿಟ್ಟುಕೊಳ್ಳಿರಿ. ನಮ್ಮ ಆ ಕೋಟಕಾಂಗ್ರಾದ ಗವ ರ್ನರಿಕೆಯು ಬಹುಮಾನದ್ದಾಗಿರುತ್ತದೆ. ನಿಮ್ಮ ಮೇಲಿನ ನನ್ನ ಅತುಲ ವಿಶ್ವಾ ಸದ ಮೂಲಕವಾಗಿಯೇ ನಾನು ನಿಮಗೆ ಆ ಬಹುಮಾನದ ಸ್ಥಳವನ್ನು ಬೇಕಂತ ಕೊಟ್ಟಿರುತ್ತೇನೆ. ನೀವು ನನ್ನ ಈ ಉದ್ದೇಶ ಹಾಗು ಇಚ್ಛೆಗಳನ್ನು ಚೆನ್ನಾಗಿ ಈಡೇರಿಸಬಹುದೆಂದು ಆಶಿಸಿ, ನಾನು ನನ್ನ ಭಾಷಣವನ್ನು ಮುಗಿಸುತ್ತೇನೆ.

ಹೀಗೆಂದು ನುಡಿದ ರಣಜಿತಸಿಂಹನು ಅರ್ಥಸೂಚಕ ದೃಷ್ಟಿಯಿಂದ ಅಮಾತ್ಯ ಫಕೀರಜಿಯ ಕಡೆಗೆ ನೋಡಲು, ಅವನು ಕಾಗದಗಳ ಮಡಿಕೆಗಳಿಂದ ಪರಿಪುಷ್ಟ ವಾದದ್ದೊಂದು ಥೈಲಿಯನ್ನು ರಣಜಿತನ ಕೈಗಿತ್ತನು. ಕೂಡಲೆ ರಣಜಿತಸಿಂಗನು ತನ್ನ ಸಿಂಹಾಸನದಿಂದ ಎದ್ದು ನಿಂತು ಅದನ್ನು ಡಬ್ಲಿನ್ನನ ಕೈಗಿತ್ತು:—ಡಬ್ಲಿನ್ನ ಸಾಹೇಬ, ಕೋಟಕಾಂಗ್ರಾದಲ್ಲಿ ನೀವು ಹೇಗೆ ವರ್ತಿಸಬೇಕೆಂಬ ಸೂಚನೆಗಳ ಪತ್ರಿ ಕೆಯು ಈ ಥೈಲಿಯಲ್ಲಿರುತ್ತದೆ. ಇದನ್ನು ನೀವು ಲಕ್ಷ್ಯಪೂರ್ವಕವಾಗಿ ಓದಿ, ಇದರಂತೆ ನಡೆದರೆ, ನಿಮ್ಮ ಹಿತವಾಗದಿರದು. ಸಾಹೇಬ, ನೀವು ಅಲ್ಲಿ ಒಳ್ಳೇ ಎಚ್ಚರದಿಂದ ಇರ್ರಿ, ಒಳ್ಳೇ ದಕ್ಷತೆಯಿಂದ ನಡೆಯಿರಿ; ಮತ್ತು ಅದರಿಂದ ರಾಜಪ್ರಜೆಗಳಿಬ್ಬರಿಗೂ ಸಂತೋಷವನ್ನುಂಟುಮಾಡಿರಿ, ಎಂದು ಹೇಳಿ ಆಸನಾ ಧಿಷ್ಠಿತನಾದನು.

ರಣಜಿತನ ಭಾಷಣವು ಮುಗಿಯುವಷ್ಟರಲ್ಲಿ ಸರಕಾರೀ ಪೋಷಾಕಿನ ಹಾಗು ನಜರಾಣೆಯ ತಬಕಗಳು ಡಬ್ಲಿನ್ನನೆದುರಿಗೆ ತಂದು ಇರಿಸಲ್ಪಟ್ಟಿದ್ದವು. ಆ ತಬಕಗಳಲ್ಲಿ ಬಹುಮೂಲ್ಯವಾದ ಪದಾರ್ಥಗಳೆಷ್ಟೋ ಇದ್ದು, ಅವನ್ನು ನೋಡಿ ಪ್ರೇಕ್ಷಕರ ಕಣ್ಣುಗಳು ಮಿಂಚಿಹೋದವು ಆ ನಜರಾಣೆಯನ್ನು ಕಂಡು, ರಣಜಿತನ ಈ ವರೆಗಿನ ಭಾಷಣವನ್ನು ಕೇಳಿ ಡಬ್ಲಿನ್ನನ ಹೃದಯವು ಉಕ್ಕೇರಿ, ಅವನ ಕಣ್ಣುಗಳಿಂದ ಕೆಲ ಆನಂದಾಶ್ರುಗಳೂ ಉದುರಿದವು! ಆಗ ಅವನಿಂದ ಮಾತಾಡುವದಾಗಲಿಲ್ಲ. "ಸರಕಾರದ ಈ ಆಜ್ಞೆಯು ನನಗೆ ಮಾನ್ಯವಾಗಿದೆ'' ಎಂಬದೊಂದೇ ಅರ್ಥಪೂರ್ಣ ವಾಕ್ಯವನ್ನು ಅವನು ಅಸ್ಪಷ್ಟವಾಗಿ ನುಡಿದನು. ಇಷ್ಟರಲ್ಲಿ ರಣಜಿತನು ದರ್ಬಾರವನ್ನು ಬಿಟ್ಟು ಹೊರಟುಹೋದನು.

ರಣಜಿತನು ಹೊರಟುಹೋದ ಬಳಿಕ ದರ್ಬಾರದೊಳಗಿನ ದೊಡ್ಡದೊಡ್ಡ ಅಧಿಕಾರಿಗಳು ಡಬ್ಲಿನ್ನನನ್ನು ಸುತ್ತುಗಟ್ಟಿ, ಅವನನ್ನು ಪರಿಪರಿಯಿಂದ ಹೊಗಳ ಹತ್ತಿದರು. ಯಥೋಚಿತ ವಿನಯೋತ್ತರಗಳಿಂದ ಅವರೆಲ್ಲರ ಸಹಾಯದ ಬಗ್ಗೆ ಆಭಾರ ಮನ್ನಿಸಿ, ಡಬ್ಲಿನ್ನನು ಅವರಿಂದ ಅಪ್ಪಣೆ ಪಡೆದು ತನ್ನ ಬಂಗ್ಲೆಯ ಕಡೆಗೆ ಹೊರಟನು. ಡಬ್ಲಿನ್ನನ ಆ ಉತ್ಕರ್ಷವನ್ನು ಕಂಡು ರಣಜಿತನ ಆ ದರ್ಬಾರದೊಳಗಿನ ಬಹು ಜನರಿಗೆ ಸಂತೋಷವಾಗಿದ್ದರೂ, ಕೆಲ ಅಲ್ಪರು "ಈ ಫಿರಂಗಿಗೆ ನಮ್ಮ ಕೈತೋರಿಸದೆ ಬಿಡುವೆವೇ?'' ಎಂದು ತಮ್ಮ ಮನಸ್ಸಿನಲ್ಲಿಯೇ ನಿಶ್ಚಯಿಸಿಕೊಂಡು, ಒಳಗಿಂದೊಳಗೇ ಡಬ್ಲಿನ್ನನ ಬಗ್ಗೆ ದೊಟ್ಟು ಮುರಿಯ ಹತ್ತಿದರು!



## ೧೧ನೇ ಪ್ರಕರಣ—ಗುಪ್ತಸಂದೇಶ.



ಡಬ್ಲಿನ್ನನಿಗೆ ಗವರ್ನರ ಪದವಿಯು ಪ್ರಾಪ್ತವಾದದ್ದಕ್ಕಾಗಿ ಒನ್ನೂನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಚೈತನ್ಯದಾಸನಂತೂ ತನಗಾದ ಸಂತೋಷದ ಭರದಲ್ಲಿ 'ನಮ್ಮ ಒಡೆಯನು ಗವರ್ನರನು, ನಾನು ಅವರ ದಿವಾಣನು; ಖಾಸಗೀ ಕಾಭಾರಿಯು' ಎಂದೆನ್ನುತ್ತಾ ಕುಣಿದಾಡಹತ್ತಿದನು. ಡಬ್ಲಿನ್ನನು ಬಂಗ್ಲೆಗೆ ಬರುತ್ತಲೆ ಚೈತನ್ಯದಾಸನು ಅವನಿಗೆ ಒಳ್ಳೇ ವಿನಯದಿಂದ ನಮಿಸಿ:-ಹುಜೂರ, ತಾವಿನ್ನು ಸಾದಾ ಸಾಹೇಬರಾಗಿ ಉಳಿದಿಲ್ಲ. ತಾವು ಈಗ ಸುಭೇದಾರ ಸಾಹೇಬರು-ತಾವು ಸಂಸಾರ ಚಂದನ ಆ ಕೋಟಕಾಂಗ್ರಾ ಪ್ರಾಂತದ ಗವರ್ನರರು, ಎಂದು ಹೊಗಳಹತ್ತಿದನು. ಡಬ್ಲಿನ್ನನಿಗೆ ಚೈತನ್ಯದಾಸನ ಆ ವಿಲಕ್ಷಣ ಭಾಷಾಶೈಲಿಯಿಂದ ನಗೆ ಬಂದಿತು; ಆದರೆ ಅವನಿಗೆ ಆಗ ಏಕಾಂತದ ಅವಶ್ಯಕತೆಯಿದ್ದುದರಿಂದ ಅವನು ಹೆಚ್ಚು ಮಾತನಾಡದೆ, ಬನ್ನೂನನ್ನು ಕರೆದು:-ಬನ್ನೂ, ನನ್ನ ಊಟದ ಸಿದ್ಧತೆಯಾಗುವ ವರೆಗೆ ಈ ದಿವಾಣಖಾನೆಯಲ್ಲಿ ಮತ್ತೆ ಯಾರನ್ನೂ ಬರಗೊಡಬೇಡ. ಅಷ್ಟರಲ್ಲಿ ಫಕೀರಜೀಯಾಗಲಿ, ಕಾಲೀಫಜೀಯಾಗಲಿ ಬಂದರೆ ಮಾತ್ರ ಅವರನ್ನಷ್ಟು ಒಳಗೆ ಕಳಿಸಿಕೊಡು; ಮಿಕ್ಕವರಾರು ಬಂದರೂ ಅವರನ್ನು ಬರಗೊಡಬೇಡ, ಎಂದು ಕಟ್ಟಪ್ಪಣೆ ಮಾಡಿ ಒಳಗೆ ಹೊರಟು ಹೋದನು.

ಡಬ್ಲಿನ್ನನು ಒಳಗೆ ಹೋಗಿ ಕೆಲ ಕ್ಷಣಗಳವರೆಗೆ ಸಚಿಂತಮನಸ್ಕನಾಗಿ ಕುಳಿತುಕೊಂಡನು. ಒಳಿಕ ಅವನು ರಣಜಿತನಿಂದ ಕೊಡಲ್ಪಟ್ಟ ಆ ಥೈಲಿಯ ಮೊಹರನ್ನು ಒಡೆದು, ಒಳಗಿನ ಕಾಗದಗಳನ್ನು ತೆಗೆದು ಓದಲಾರಂಭಿಸಿದನು. ಅವುಗಳಲ್ಲಿ ಒಳ್ಳೇ ಮಹತ್ವದ ಯಾವ ದೊಡ್ಡ ಕಾಗದವಿದ್ದಿತೋ, ಅದನ್ನೇ ಅವನು ಮೊದಲು ಓದಲಿಕ್ಕೆ ತಕ್ಕೊಂಡನು; ಆದರೆ ಆ ಕಾಗದದಲ್ಲಿ ಯಾವ ಭಾಷೆಯ ಅಕ್ಷರಗಳೂ ಇರದೆ, ಅಸಂಖ್ಯಗಳಾದ ದುಂಡದುಂಡನ್ನ ಸೊನ್ನೆಗಳು ಮಾತ್ರ ತುಂಬಿದ್ದವು. ಅದರಿಂದ ಆಗ ಅದನ್ನು ಅವನಿಂದ ಓದುವದಾಗಲಿಲ್ಲ. ಆ ಚಿಹ್ನಗಳನ್ನು ಕಂಡು ಅವನು ವಿಸ್ಮಯಭರಿತನಾದನು. ಈ ಚಿಹ್ನಗಳ ಮರ್ಮಗಳನ್ನು ಹೇಗೆ ತಿಳಕೊಳ್ಳಬೇಕೆಂಬ ಗಹನವಾದ ಆಲೋಚನೆಗೆ ಆತನು ಒಳಗಾದನು. ಕೆಲ ಕ್ಷಣಗಳ ನಂತರ ಅವನು ಆ ದೊಡ್ಡಕಾಗದವನ್ನು ತನ್ನ ಮೇಜಿನಮೇಲಿಟ್ಟು, ಆ ಥೈಲಿಯೊಳಗಿನ ಉಳಿದ ಕಾಗದಗಳನ್ನು ತೆಗೆಯ ಹತ್ತಿದನು. ಆ ಥೈಲಿಯಲ್ಲಿ ಆ ದೊಡ್ಡಕಾಗದದ ಹೊರತು ಬೇರೆ ಎರಡು ಪತ್ರ್ಯವು

ತರಗತಿಯ ಅಗಲು ಉದ್ದದ ಕಾಗದಗಳೂ ಒಂದು ಚಿಕ್ಕ ಚೀಟಿಯೂ ಇದ್ದವು. ಆ ಎರಡು ಕಾಗದಗಳಲ್ಲಿ ತನ್ನನ್ನು ಕೋಟಕಾಂಗ್ರಾ ಪ್ರಾಂತದ ಗವರ್ನರನನ್ನಾಗಿ ನೇಮಿಸಿದ ರಣಜಿತಸಿಂಹನ ರಾಜಮುದ್ರಾಂಕಿತವಾದ ಹುಕುಮು ಒಂದಾಗಿದ್ದಿತು; ಇನ್ನೊಂದು ಕೋಟಕಾಂಗ್ರಾ ಕೋಟೆಯೊಳಗಿನ ಸದ್ಯದ ಕಿಲ್ಲೇದಾರನಿಗೆ ಆ ಕಿಲ್ಲೆಯನ್ನು ಡಬ್ಲಿನ್ನನಿಗೆ ವಶಪಡಿಸಬೇಕೆಂಬರ್ಥದ ರಣಜಿತನ ಹುಕುಮು ಇದ್ದಿತು. ಆ ಎರಡು ಹುಕುಮುಗಳನ್ನೂ ನೋಡಿಕೊಂಡು, ಅವನ್ನು ಆ ಥೈಲಿಯಲ್ಲಿರಿಸಿ, ಡಬ್ಲಿನ್ನನು ಆ ಚಿಕ್ಕ ಚೀಟಿಯನ್ನು ತೆರೆದನು.

ಆ ಚೀಟಿಯಲ್ಲಿ ವಿಶೇಷ ಸಂಗತಿಯು ಇರದ್ದರಿಂದ ಅದರಲ್ಲಿ ೮-೧೦ ಸಾಲುಗಳೇ ಬರೆಯಲ್ಪಟ್ಟಿದ್ದವು; ಆದರೆ ಆ ಎಂಟು-ಹತ್ತು ಸಾಲುಗಳ ಚೀಟಿಯನ್ನು ಓದಿದಕೂಡಲೆ ಡಬ್ಲಿನ್ನನ ಈ ವರೆಗಿನ ಗಹನವಾದ ಚಿಂತೆಯು ಒಮ್ಮೆಲೆ ಪರಿಹಾರವಾಯಿತು. ಆ ಚೀಟಿಯನ್ನು ಅಮಾತ್ಯ ಫಕೀರಜಿಯು ಡಬ್ಲಿನ್ನನಿಗಾಗಿ ಬರೆದಿದ್ದು, ಅದರಲ್ಲಿ ಆ ದೊಡ್ಡಕಾಗದದೊಳಗಿನ ಗುರುತುಗಳ(ಸಂಕ್ಷಿಪ್ತ ಲಿಪಿಯ)ನ್ನು ತಿಳಕೊಳ್ಳುವ ವಿವರಣವಿದ್ದಿತು. ಅದರಿಂದ ಅದನ್ನು ಕಂಡು ಡಬ್ಲಿನ್ನನಿಗೆ ಅಷ್ಟು ಸಂತೋಷವಾಯಿತು. ಬಳಿಕ ಅವನು ಆ ಚೀಟಿಯೊಳಗಿನ ಸೂಚನೆಗಳ ಮೇರೆಗೆ ಆ ದೊಡ್ಡಕಾಗದವನ್ನು ಓದತೊಡಗಿದನು. ಅದರಲ್ಲಿ ರಣಜಿತಸಿಂಹನು ಡಬ್ಲಿನ್ನನಿಗೆ ಹೀಗೆಂದು ಬರೆದಿದ್ದನು:—

" ಪ್ರಿಯ ಡಬ್ಲಿನ್ನಸಾಹೇಬ, ಗುರು ನಾನಕಜಿಯೂ ಗುರುಗೋವಿಂದಜಿಯೂ ನಿಮಗೆ ಕಲ್ಯಾಣವನ್ನುಂಟುಮಾಡಲೆಂದು ಆ ಗುರುವರ್ಯರನ್ನು ಮೊದಲು ಪ್ರಾರ್ಥಿಸುತ್ತೇನೆ. ಡಬ್ಲಿನ್ನಸಾಹೇಬ, ಸೇವಾವೃತ್ತಿಯು ಅತ್ಯಂತ ಕಠಿಣವಾದದ್ದೇನೋ ನಿಜವು; ಆದರೆ ಸತ್ಯ ಮತ್ತು ವಿಶ್ವಾಸ ಇವುಗಳ ಸಹಾಯದಿಂದ ಕೆಲಸ ಮಾಡಿದರೆ, ಕಾರ್ಯಕರ್ತನಿಗೆ(ಸೇವಕನಿಗೆ) ಸುಯಶಪ್ರಾಪ್ತವಾಗದೆ ಇರಲಿಕ್ಕಿಲ್ಲ. ಅವಿಶ್ವಾಸವೆಂಬದು ಮನುಷ್ಯನ ಆತ್ಮಘಾತ ಮಾಡತಕ್ಕ ದುಸ್ಸಾಧನವಾಗಿರುತ್ತದೆ. ಅದಕ್ಕಾಗಿ ಮನುಷ್ಯನು ಅದರಿಂದ ಶಕ್ಯವಿದ್ದಷ್ಟು ದೂರ ಇರಲಿಕ್ಕೆ ಪ್ರಯತ್ನಿಸತಕ್ಕದ್ದು. ಇದರಂತೆ ಅಸತ್ಯ ಮಾತನಾಡುವ ನಾಲಿಗೆಯು ಮನುಷ್ಯನ ನಾಲಿಗೆಯಾಗಿರದೆ, ಅದು ಸದಾ ವಿಷವನ್ನು ಕಾರುವ ನಾಗಿಣಿಯಾಗಿರುತ್ತದೆ. ಮನುಷ್ಯನ ನಾಲಿಗೆಯು ಎಷ್ಟು ಉತ್ತಮವೋ ಅಷ್ಟೇ ಕೆಟ್ಟ ಇಂದ್ರಿಯವಾಗಿರುತ್ತದೆ. ಅಂತೇ ಮನೋನಿಗ್ರಹಿಗಳು ತಮ್ಮ ನಾಲಿಗೆಗಳನ್ನು ಸ್ವಾಧೀನ ಪಡಿಸಿಕೊಂಡಿರುತ್ತಾರೆ; ಮತ್ತು ಅವರು ತಮ್ಮ ನಾಲಿಗೆಗೆ ಅಸತ್ಯ

ಮಾಡಲಿಕ್ಕೆ ಅವಸರವೇ ಉಳಿಯಬಾರದೆಂದು ಅದನ್ನು ಸದಾಸರ್ವದಾ ಗುರು-ದೇವತೆಗಳ ಜಪ ಮಾಡುವದಕ್ಕೆ ತೊಡಗಿಸಿ ಬಿಟ್ಟಿರುತ್ತಾರೆ! ನೀವು ಪರಮ ವಿಶ್ವಾಸಿಕರೂ, ಧಾರ್ಮಿಕರೂ, ಸತ್ಯಪರಾಯಣರೂ ಆಗಿರುತ್ತೀರೆಂದು ನನ್ನ ಖಾತ್ರಿಯಾಗಿದೆ; ಮತ್ತು ನಿಮ್ಮ ಉನ್ನತಿಗೆ ಇವೇ ಮೂರು ಉತ್ತಮವಾದ ಸಾಧನಗಳೆಂಬದನ್ನು ನೀವಾದರೂ ಯಾವಾಗಲೂ ನೆನಪಿಡತಕ್ಕದ್ದು. ಡಬ್ಲಿನ್ನ ಸಾಹೇಬ, ನಿಮ್ಮಂಥ ತೀಕ್ಷ್ಣ ಬುದ್ಧಿಯ, ಕಾರ್ಯತತ್ಪರ ತರುಣರಿಗೆ ಇದನ್ನೆಲ್ಲ ಬೋಧಿಸುವ ಕಾರಣವೇ ಇಲ್ಲ. ಆದರೂ ನನಗೆ ಹಾಗೆ ಮಾಡಬೇಕೆಂದು ಅಂತಃಕರಣಪೂರ್ವಕವಾಗಿ ಅನಿಸಿದ್ದರಿಂದ ಮಾಡಿರುತ್ತೇನೆ. ಈ ನನ್ನ ಉಪ ದೇಶವನ್ನು ನೀವೆಂದೂ ಮರೆಯಬೇಡಿರಿ.

೨ ಡಬ್ಲಿನ್ನಸಾಹೇಬ, ನನ್ನ ರಾಜ್ಯವು ಸಣ್ಣದಿಲ್ಲ. ಅದು ಮೊದಲು ಚಿಕ್ಕ ದಿದ್ದಿತು; ಆದರೆ ಈಗ ಅದು ವಿಸ್ತೃತವಾಗಿದೆ. ಪೂರ್ವದಲ್ಲಿ ಪಂಜಾಬದೊಳಗಿನ ಸಣ್ಣ ಪುಟ್ಟ ಸಂಸ್ಥಾನಗಳೆಲ್ಲ ವಿಭಕ್ತವಾಗಿ ಸ್ವತಂತ್ರವಾಗಿದ್ದವು. ಅದರಿಂದ ಪರ ಸ್ಪರರ ರಾಜ್ಯಗಳಲ್ಲಿ ದ್ವೇಷಾಸೂಯೆಗಳು ಹೆಚ್ಚಾಗಿದ್ದವು; ಆದರೆ ನಾನು ಅವನ್ನೆಲ್ಲ ಒಟ್ಟುಗೂಡಿಸಿ ಪಂಜಾಬದ ಏಕಛತ್ರ ರಾಜ್ಯವನ್ನು ಮಾಡಿರುತ್ತೇನೆ. ಇದರಿಂದ ನನ್ನ ಪಂಜಾಬದ ಆತ್ಮಬಲವು ದಿನದಿನಕ್ಕೆ ಬೆಳೆಯುತ್ತ ನಡೆದಿರುತ್ತದೆ. ನಿಮ್ಮಂತಹ ವೀರಪುರುಷರು ನನ್ನ ಪಂಜಾಬದ ಈ ಗೌರವವನ್ನು ಬೆಳಿಸಬಹುದೆಂದು ನನಗ ನಿಸುತ್ತದೆ. ನನ್ನ ರಾಜ್ಯದೊಳಗಿನ ಎಲ್ಲ ಪ್ರಜೆಗಳು ಸುಖಸಮಾಧಾನದಿಂದ ಇರಬೇಕೆಂದೂ ಅವರ ಆ ಸುಖದ ಬಾಳಿಗೆ ನನ್ನ ಅಧಿಕಾರಿಗಳೆಲ್ಲ ಮನಮುಟ್ಟಿ ಸಹಾಯ ಮಾಡಬೇಕೆಂದೂ ನನ್ನ ಇಚ್ಛೆಯಿರುತ್ತದೆ. ಅಧಿಕಾರಿಗಳಲ್ಲಿಯ ಸದ್ಗು ಣಗಳಿಗೆ ಯೋಗ್ಯ ಪುರಸ್ಕಾರವನ್ನು ಕೊಡುವದೂ ಸಾಹಸಿಗಳಿಗೆ ಉನ್ನತಿಯ ನ್ನುಂಟು ಮಾಡುವದೂ ಮತ್ತು ಅಪರಾಧಿಗಳಿಗೆ ತಕ್ಕ ಶಿಕ್ಷೆಯನ್ನು ಕೊಡು ವದೂ ನನ್ನ ಸ್ವಭಾವವಾಗಿದೆ. ಯುದ್ಧಕಾಲದಲ್ಲಿ ನಾನು ನನ್ನ ಕೈಕೆಳಗಿನ ಸಾಮಾನ್ಯಸಿಪಾಯಿಯ ದುಃಖ-ವಿಪತ್ತುಗಳ ಪಾಲುಗಾರನಾಗಿದ್ದೆನೋ ಇಲ್ಲವೋ, ರಣಧುರಂಧರ ವೀರರಿಗೆ ಯೋಗ್ಯ ಬಹುಮಾನವನ್ನು ಮಾಡಿರುವೆನೋ ಇಲ್ಲವೋ ಎಂಬದು ಈ ನನ್ನ ಪಂಜಾಬದವರೆಲ್ಲರಿಗೂ ಗೊತ್ತಿದ್ದ ವಿಷಯವೇ ಆಗಿರುತ್ತದೆ. ನಾನು ನನ್ನ ಸಿಂಹಾಸನದ ಮೇಲೆ ಕುಳಿತಿರಲಿ, ಇಲ್ಲವೆ ರಣಕ್ಷೇತ್ರದಲ್ಲಿ ಹೋರಾ ಡುತ್ತಿರಲಿ ಸ್ವಂತದ ಸುಖದ ಬಗ್ಗೆ ನಾನೆಂದೂ ಚಿಂತಿಸುತ್ತಿರುವದಿಲ್ಲ; ಆದರೆ ನಾನು ಸದಾಸರ್ವದಾ ಚಿಂತಿಸುತ್ತಿರುವದೇನಂದರೆ, ನನ್ನ ಪ್ರಜೆಗಳ ಸುಖ ಸಮಾ

ಧಾನವು ಹೇಗೆ ಹೆಚ್ಚಾದೀತೆಂದು. ನನ್ನ ರಾಜ್ಯದಲ್ಲಿ ಸಂನ್ಯಾಸಿ, ಫಕೀರ ಮುಂತಾದ ಯಾವ ಧರ್ಮದ ಪರಿವ್ರಾಜಕರೇ ಬರಲಿ, ಅವರ ಯೋಗ್ಯ ಸತ್ಕಾರವನ್ನು ಮಾಡಿ, ಅವರ ಆಶೀರ್ವಾದವನ್ನು ಪಡೆಯುವ ವಿಷಯದಲ್ಲಿ ನಾನೆಂದೂ ಮನಸರಿ ಮಾಡುವದಿಲ್ಲ. ಒಳ್ಳೇ ಗುರುತರವಾದ ಅಪರಾಧಿಗೂ ಕೂಡ ನಾನೆಂದೂ ಪ್ರಾಣದಂಡಣದ ಶಿಕ್ಷೆಯನ್ನು ವಿಧಿಸುವದಿಲ್ಲ! ಇಷ್ಟೇ ಅಲ್ಲ, ಯಾರು ಪ್ರತ್ಯಕ್ಷ ನನ್ನ ಮೇಲೆಯೇ ಅಸ್ತ್ರಗಳನ್ನೆತ್ತಿದ್ದರೂ ಅಂಥ ಅಪರಾಧಿಗಳನ್ನು ಕೂಡ ನಾನು ಕ್ಷಮಿಸಿ ಬಿಟ್ಟುಬಿಟ್ಟಿರುತ್ತೇನೆ ಈ ತರದ ಅನೇಕ ಕಾರಣಗಳ ಮೂಲಕವಾಗಿಯೇ ಈ ದೀನದಾಸನ ಮೇಲೆ ಶ್ರೀ ಪರಾಗಜೆಯುವರ ಕೃಪೆಯಾಗಿದ್ದು, ಅವರ ಆ ಕೃಪೆಯು ಪ್ರಭಾವದಿಂದಲೇ ನನ್ನ ರಾಜ್ಯದ ವಿಸ್ತಾರವು ಚೀನ, ಅಫಗಾಣಿಸ್ತಾನ, ಮುಲ್ತಾನ, ದಿಲ್ಲಿಗಳ ವರೆಗೆ ಹಬ್ಬಿರುತ್ತದೆ. ಡಬ್ಲಿನ್ನ ಸಾಹೇಬ, ಇಂಥ ಅತ್ಯಂತ ವಿಸ್ತೃತವಾದ ರಾಜ್ಯದಲ್ಲಿ ನಿಮಗೆ ದೊಡ್ಡ ಅಧಿಕಾರದ ಸ್ಥಳವು ಪ್ರಾಪ್ತವಾಗುವದು ನಿಮ್ಮ ಸಾಮಾನ್ಯ ಸೌಭಾಗ್ಯದ ಸಂಗತಿಯಾಗಿರುವದಿಲ್ಲ.

೩ ಡಬ್ಲಿನ್ನಸಾಹೇಬ, ಇನ್ನು ನಾನು ನಿಮಗೆ ನಿಮ್ಮ ಕರ್ತವ್ಯದ ಬಗ್ಗೆ ಕೆಲ ಸೂಚನೆಗಳನ್ನು ಮಾಡುತ್ತೇನೆ. ಸಾಹೇಬ, ನೀವು ಯಾವಾಗಲೂ ಆ ನನ್ನ ಕೋಟಕಾಂಗ್ರಾದ ದುರ್ಗದಲ್ಲಿಯೇ ವಾಸಿಸತಕ್ಕದ್ದು; ಒಂದು ದಿವಸ ಕೂಡ ನೀವು ಅಲ್ಲಿ ಗೈರಹಾಜರ ಆಗಿರಕೂಡದು. ಯಾಕಂದರೆ ಕೋಟಕಾಂಗ್ರಾ ದುರ್ಗವು ಪಂಜಾಬ ದೇಶದ ಉತ್ತರದಿಕ್ಕಿನ ಮುಖ್ಯ ಬಾಗಿಲವಾಗಿರುತ್ತದೆ. ಅದರಿಂದ ಅದು ಸಂರಕ್ಷಿತವಾಗಿರುವದು ಅತ್ಯವಶ್ಯವಾದದ್ದು. ನೀವು ಆ ದುರ್ಗದಲ್ಲಿ ಬೇರೆ ಯಾವ ಆಗಂತುಕನನ್ನೂ ಬರಗೊಡಲಾಗದೆಂದು ನನ್ನ ಸಕ್ತಹುಕುಮು ಇರುತ್ತದೆ. ಇಷ್ಟೇ ಅಲ್ಲ; ಫಕೀರಜಿಯಾಗಲಿ, ನನ್ನ ಮಕ್ಕಳಾಗಲಿ ಅಥವಾ ಸ್ವತಃ ನಾನೇ ಆಗಲಿ ಅಲ್ಲಿಗೆ ಬಂದರೂ ನೀವು ನಮ್ಮ ಸಲುವಾಗಿ ನಿಮ್ಮ ಆ ಕೋಟಕಾಂಗ್ರಾ ದುರ್ಗದ ಬಾಗಿಲವನ್ನು ತೆರೆಯಕೂಡದು. ಒಂದುವೇಳೆ ನಾನೇ ಅಲ್ಲಿಗೆ ಬರುವದಾದರೆ, ಆ ಕೋಟೆಯು ದಿಡ್ಡೀ ಬಾಗಿಲದೊಳಗಿಂದ ನನ್ನ ತಲೆಯನ್ನು ಒಳಗೆ ಹಾಯಿಸಿ, ನನ್ನ ಮುಖಚರ್ಯೆಯು ನಿಮಗೆ ಚೆನ್ನಾಗಿ ತೋರುವ ಹಾಗೆ ಮೂರುಮೂರುಸಾರೆ ಅಲ್ಲಾಡಿಸುವೆನು. ಆಗ ಮಾತ್ರ ನೀವು ನನಗಾಗಿ ಆ ದುರ್ಗದ ಬಾಗಿಲವನ್ನು ತೆರೆಯಬಹುದು. ಅದರ ಹೊರತು ಬೇರೆಯಾರ ಕಾಲುಗಳೂ ಆ ದುರ್ಗಕ್ಕೆ ಸ್ಪರ್ಶವಾಗದಂತೆ ಎಚ್ಚರಪಡತಕ್ಕದ್ದು. ಕಾಶ್ಮೀರದಿಂದ ಬಿಲಾಸಪೂರದ ವರೆಗಿನ ನಾಡಿನಲ್ಲೆಲ್ಲ ನಿಮ್ಮ ತೀಕ್ಷ್ಣ ದೃಷ್ಟಿ

ಯನ್ನಿಟ್ಟು, ಅಲ್ಲಿಯ ಜನರ ಚಲನವಲನದ ಕಡೆಗೆ ಚೆನ್ನಾಗಿ ಲಕ್ಷ್ಯವಿಡಿರಿ. ಜಂಬೂ, ನೂರಪೂರ ಮತ್ತು ಮಂಡಿ ಮುಂತಾದ ಪ್ರಾಂತಗಳೊಳಗಿನ ಸಂಗತಿಗಳನ್ನು ನಮಗೆ ಆಗಾಗ್ಗೆ ತಿಳಿಸಿ ಆಲೋಚಿಸುತ್ತಿರಬೇಕು. ದರ್ಬಾರಕ್ಕೆ ಸಂಬಂಧಿಸಿದ ಗುಪ್ತ ಸಂಗತಿಗಳೇನಾದರೂ ಇದ್ದರೆ ಅವುಗಳನ್ನು ಗುಪ್ತಲಿಪಿಯಲ್ಲಿ ಬರೆದು ಜಾಸೂದನೊಡನೆ ಫಕೀರಜೆಯುವರ ಕಡೆಗೆ ಕೂಡಲೆ ಕಳಿಸತಕ್ಕದ್ದು. ಮೇಲೆ ವಿವರಿಸಿದ ಪ್ರಾಂತಗಳ ಅರಸರು ನಮ್ಮ ಮಾಂಡಲಿಕರಾಗಿದ್ದರೂ, ಅವರಲ್ಲಿ ಇರತಕ್ಕಷ್ಟು ವಿಶ್ವಾಸವು ಇರುವದಿಲ್ಲ. ನೀವು ಯಾವ ಕೆಲಸವನ್ನೂ ದುಡುಕಿನಿಂದ ಮಾಡ ಹೋಗಬೇಡಿರಿ. ಪ್ರತಿಯೊಂದು ರಾಜಕರಣವನ್ನು ಎಚ್ಚರದಿಂದಲೂ, ಧೈರ್ಯದಿಂದಲೂ, ನಿದಾನದಿಂದಲೂ ಮಾಡತಕ್ಕದ್ದು. ಕೋಟಕಾಂಗ್ರಾದ ಹಾಗೂ ಅದರ ಸಮೀಪದ ನಾಡುಗಳ ಸರದಾರರೂ, ಅಮೀರ-ಉಮರಾವರೂ ಒಳ್ಳೇ ರಾಜನಿಷ್ಠರಿರುತ್ತಾರೆ. ನಿಮ್ಮ ಆಡಳಿತದಲ್ಲಿ ಅವರು ಮೊದಲಿಗಿಂತಲೂ ಹೆಚ್ಚು ರಾಜನಿಷ್ಠರೂ ಸದಾಚಾರಸಂಪನ್ನರೂ ಆಗಬಹುದೆಂದು ನನಗನಿಸುತ್ತದೆ. ನಿಮ್ಮಂತಹ ಕರ್ತೃತ್ವಶಾಲಿ, ದಕ್ಷ ಹಾಗೂ ವಿಜ್ಞರಿಗೆ ವಿಶೇಷವಾಗಿ ಬರೆದುತಿಳಿಸುವದೇನಿದೆ? ನಮ್ಮ ಗುರುಗಳು ನಿಮಗೆ ಅಖಂಡ ಕಲ್ಯಾಣವನ್ನುಂಟುಮಾಡಲಿ!!!

ರಣಜಿತನ ಆ ಗುಪ್ತ ಸಂದೇಶದ ಆ ಪತ್ರವನ್ನು ಓದಿದ ಬಳಿಕ ಡಬ್ಲಿನ್ನನಿಗೆ ಎಷ್ಟು ಆಶ್ಚರ್ಯವೆನಿಸಿತೋ, ಅದಕ್ಕೂ ಹೆಚ್ಚು ಚಿಂತೆಯು ಅದರೊಳಗಿನ ಕಾರ್ಯಭಾರದ ಕಲ್ಪನೆಗಳಿಂದ ಅವನಲ್ಲಿ ತಲೆದೋರಿತು. ಆ ಪತ್ರದ ಬಗ್ಗೆ ಅವನು ಮಹಾರಾಜರಲ್ಲಿ ಕೃತಜ್ಞಭಾವವನ್ನು ತಾಳಿದನು. ಅವನು ತೀರ ಅಜ್ಞಾತ ಪ್ರಾಂತಕ್ಕೆ ಹೋಗಿ ಅಲ್ಲಿಯ ಸಂಪೂರ್ಣ ಜವಾಬದಾರಿಯನ್ನು ವಹಿಸಬೇಕಾದ್ದರಿಂದ ಮಹಾರಾಜರ ಆ ಗುಪ್ತಸಂದೇಶದ ಪತ್ರವು ಅವನಿಗೊಳ್ಳೇ ಮಾರ್ಗದರ್ಶಕವಾಗಿ ತೋರಿತು. ನನಗೆ ಈ ಕೆಲಸದಲ್ಲಿ ನಿಜವಾಗಿ ಯಶಃಪ್ರಾಪ್ತಿಯಾದರಂತೂ ಸರಿಹೋಯಿತು; ಅದಾಗದೆ ನನ್ನಿಂದ ಅಲ್ಲಿಯ ಯಾವ ವ್ಯವಸ್ಥೆಯೂ ಸರಿಯಾಗಿ ಆಗದಿದ್ದರೆ ಮಾತ್ರ ನಾನು ಇಲ್ಲಿಗೆ ಮರಳಿ ಬಂದು ಈ ದರ್ಬಾರದಲ್ಲಿ ನನ್ನಮೋರೆ ತೋರಿಸಲಿಕ್ಕೆ ಕೂಡ ಶಕ್ಯವಿಲ್ಲೆಂದು ಅನಿಸಿದ್ದರಿಂದ ಡಬ್ಲಿನ್ನನು ಅಂದು ಕಡು ಚಿಂತೆಗೊಳಗಾದನು; ಆದರೆ ಅವನಿಗೆ ಸತ್ಯದ ಬೆಂಬಲವು ಚೆನ್ನಾಗಿ ಇದ್ದದರಿಂದ, ಅವನು ಆಗ ಹೆಚ್ಚಾಗಿ ಕಂಗೆಡಲಿಲ್ಲ. ಅಲ್ಪ ವೇಳೆಯಲ್ಲಿಯೇ ಅವನಲ್ಲಿ ಕಾರ್ಯಪ್ರವೃತ್ತಿಯ ಸ್ಫೂರ್ತಿಯುಂಟಾಗಲು, ಅವನ ಮುಖಮಂಡಲವು ಅತುಲವಾದ ತೇಜದಿಂದ ಮಿನುಗಹತ್ತಿತು.

ಬಳಿಕ ಡಬ್ಲಿನ್ನನು ಆ ಎಲ್ಲ ಕಾಗದಪತ್ರಗಳನ್ನು ಆ ಥೈಲಿಯಲ್ಲಿ ಹಾಕಿ, ಅದನ್ನು ಜೋಕೆಯಿಂದ ಇಟ್ಟು, ಊಟಕ್ಕೆ ಎದ್ದನು. ಊಟ-ವಿಶ್ರಾಂತಿಗಳಾದ ನಂತರ ಇಳಿಹೊತ್ತಿನಲ್ಲಿ ಅವನು ಫಕೀರಜಿಯವರ ಭೆಟ್ಟಿಗಾಗಿ ಊರೊಳಗಿನ ಅವನ ಮನೆಗೆ ಹೋದನು. ತನ್ನ ಪೂರ್ವವೃತ್ತವನ್ನು ಇಂದು ಫಕೀರಜಿಗೆ ತಿಳಿಸತಕ್ಕದ್ದೆಂಬದನ್ನು ಅವನು ಮೊದಲೇ ಗೊತ್ತುಮಾಡಿಕೊಂಡಿದ್ದನು. ಆದ್ದರಿಂದ ಅವನು ಫಕೀರಜಿಗೆ ಭೆಟ್ಟಿಯಾದ ಕೆಲ ನಿಮಿಷಗಳಲ್ಲಿ ಶಿಷ್ಟಾಚಾರದ ಪ್ರಕಾರ ಕುಶಲ ಪ್ರಶ್ನೆಮುಂತಾದವುಗಳನ್ನು ಮುಗಿಸಿ, ತನ್ನ ಪೂರ್ವವೃತ್ತವನ್ನೆಲ್ಲ ಅವರಿಗೆ ಸಾದ್ಯಂತವಾಗಿ ತಿಳಿಸಿದನು ಕಡೆಗೆ ಅವನು ಫಕೀರಜಿಗೆ ಹೇಳಿದುದೇನಂದರೆ:— ಯಾವನ ಮೇಲೆ ತಾವು ಇಷ್ಟು ಉಪಕಾರವನ್ನು ಮಾಡಿರುವಿರೋ, ಅವನು ತನ್ನ ಪೂರ್ವವೃತ್ತವನ್ನು ಸುಳ್ಳುಹೇಳಿದ್ದನೆಂದು ಅಂದು ಹಿಂದಿನಿಂದ ನನ್ನಮೇಲೆಆರೋಪ ಹೊರಿಸಲಿಕ್ಕೆ ಆಸ್ಪದ ಉಳಿಯಬಾರದೆಂದೇ ನಾನು ಈ ನನ್ನ ಪೂರ್ವವೃತ್ತವನ್ನು ನಿಮಗೆ ತಿಳಿಸಿರುತ್ತೇನೆ. ಅವಶ್ಯವೆಂದು ಕಂಡರೆ ತಾವು ಇದನ್ನು ರಣಜಿತಸಿಂಹರವರಿಗೆ ತಿಳಿಸಬೇಕೆಂದು ನನ್ನ ಇಚ್ಛೆಯಿರುತ್ತದೆ. ಇದು ಅವರಿಗೆ ತಿಳಿಯುವದರಿಂದ ನಾನು ಅವರ ಕೃಪೆಗೆ ಅಪಾತ್ರನಾದರೂ ಅಡ್ಡಿಯಿಲ್ಲ.

ಫಕೀರಅಜೀಜುದ್ದೀನನಿಗೆ ಡಬ್ಲಿನ್ನನ ಆ ವಿಲಕ್ಷಣವಾದ ಪೂರ್ವವೃತ್ತವನ್ನು ಕೇಳಿ ಬಳ್ಳೇ ಆಶ್ಚರ್ಯವೆನಿಸಿತು. ಕೆಲಹೊತ್ತಿನ ಮೇಲೆ ಅವನು:— ನಿಮ್ಮ ಆ ಫ್ರೆಂಚವಧುವಿನ ತಂದೆಯಂತೆ ನಮ್ಮ ಮಹಾರಾಜರು ಮೂರ್ಖರೂ, ಅವಿಚಾರಿಗಳೂ, ಗರ್ವಾಂಧರೂ, ಜಾತಿದ್ವೇಷಿಗಳೂ ಆಗಿರುವದಿಲ್ಲ. ಅವರಿಗೆ ನಿಮ್ಮ ಈ ಸಂಗತಿಯು ತಿಳಿದರೆ ಅದರಿಂದ ಎಳ್ಳಷ್ಟು ನಿಮ್ಮ ಅನಿಷ್ಟವಾಗುವ ಸಂಭವವಿರುವದಿಲ್ಲ. ನಮ್ಮ ಮಹಾರಾಜರ ದೃಷ್ಟಿಯು ಯಾವನೊಬ್ಬನ ಕುಲಗೋತ್ರಗಳ ಕಡೆಗೆ ಇರುವದಿಲ್ಲ. ಅವರು ಪ್ರತಿಯೊಬ್ಬನ ಸದ್ಗುಣ, ಕಾರ್ಯಕೌಶಲ್ಯ, ಬುದ್ಧಿಮತ್ತೆ ಮುಂತಾದವುಗಳನ್ನು ಪರೀಕ್ಷಿಸಿ, ಅವನನ್ನು ತಮ್ಮ ಚಾಕರಿಗೆ ಇಟ್ಟುಕೊಳ್ಳುತ್ತಿರುತ್ತಾರೆ. ನಮ್ಮ ಮಹಾರಾಜರ ಕೃಪೆ ದೊರಕಿಸಬೇಕೆಂಬ ಇಚ್ಛೆಯಿಂದ ನೀವೇನೂ ಬೇಕಂತ ಈ ಸಾಹೇಬೀ ವೇಷವನ್ನು ಧರಿಸಿದವರಲ್ಲ. ಹಾಗೆ ನೋಡಹೋದರೆ, ನೀವು ಬಾಲ್ಯಾವಸ್ಥೆಯಿಂದಲೇ ಸಾಹೇಬರಾಗಿದ್ದು, ಜನ್ಮತಃ ನೀವೊಬ್ಬ ಹಿಂದುರಾಜಪುತ್ರರೂ ಆಗಿರುತ್ತೀರಿ. ಮತ್ತೇನಂದರೆ, ಯುರೋಪಿಯನ್ನರ ಬಳಿಯಲ್ಲಿ ಕಸ್ತೂರಿ ಮೃಗದಂತೆ ವಿಶೇಷವುಂಟೆಂದು ನಮ್ಮ ಮಹಾರಾಜರದೇ ಏಕೆ, ನಮ್ಮ ದರ್ಬಾರದೊಳಗಿನ ಯಾವನ ತಿಳುವಳಿಕೆಯೂ ಇಗಿಲ್ಲ. ನಮ್ಮ ಮಹಾರಾಜರು ಸಚ್ಚರಿತ್ರನಾದ ವೀರಪುರುಷನಿಗೆ ಅವನು ಯಾವ

ಜಾತಿಯವನಿದ್ದರೂ ಅವನಿಗೆ ಉತ್ತೇಜನ ಕೊಡುತ್ತಿರುತ್ತಾರೆ. ಈ ನಮ್ಮ ಮಹಾರಾಜರ ರಾಜ್ಯದಲ್ಲಿ ಈಗಲೂ ಕೆಲ ಜನ ಕುಟಿಲಮಂತ್ರಿಗಳಿಲ್ಲವೆಂತಿಲ್ಲ; ಆದರೆ ನಮ್ಮ ಮಹಾರಾಜರು, ಗುಣಿಗಳ ಸದ್ಗುಣಗಳನ್ನು ತಿಳಿದು ಹೇಗೆ ಅವರನ್ನು ಉನ್ನತಿಗೇರಿಸುತ್ತಿರುವರೋ ಹಾಗೆಯೇ ಆ ಕುಟಿಲ ಜನರನ್ನು ದಂಡಿಸಲಿಕ್ಕೆ ಎಂದೂ ಹಿಂದೆಮುಂದೆ ನೋಡುವದಿಲ್ಲ. ನಿಮ್ಮ ಈ ನಿಜಸಂಗತಿಯನ್ನು ನನ್ನೆದುರಿಗೆ ತಿಳಿಸಿದ್ದಕ್ಕಾಗಿ ನೀವು ಪ್ರಶಂಶೆಗೆ ಪಾತ್ರರಾಗಿರುತ್ತೀರಿ; ಆದರೆ ನೀವು ನೆನಪಿಟ್ಟುಕೊಳ್ಳುವದೇನಂದರೆ, ಇನ್ನು ಮುಂದೆ ನೀವು ನಿಮ್ಮ ಈ ಗುಪ್ತರಹಸ್ಯವನ್ನು ಗುಪ್ತವಿರಿಸುವದರಿಂದಲೇ ನಿಮ್ಮ ಲಾಭವಾಗುವದು. ನಿಮ್ಮ ಮೇಲೆ ಹೊರಿಸಿರುವ ಆ ಗುರುತರ ಕಾರ್ಯವನ್ನು ನೆರವೇರಿಸಲಿಕ್ಕೆ ಈ ಸಾಹೇಬೀ ವೇಷವೇ ನಿಮಗೆ ಹೆಚ್ಚು ಸಹಾಯಕವಾಗಬಹುದಾಗಿದೆ. ಮಹಾರಾಜರ ಭೇಟಿಯ ಕಾಲಕ್ಕೆ ಸಮಯವರಿತು ನಾನು ಅವರಿಗೆ ನಿಮ್ಮ ಈ ಗುಪ್ತಸಂಗತಿಯನ್ನು ತಿಳಿಸುತ್ತೇನೆ; ಹಾಗು ನಿಮಗೆ ಅವರಿಂದ ಇನ್ನೊಂದು ಪತ್ರ ಬರುವಾಗ ಅವರು ತಮಗೆ ನಿಮ್ಮ ಸಂಗತಿಯು ತಿಳಿದಿದೆಯೆಂಬದನ್ನು ಗುಪ್ತಸಂಕೇತದಿಂದ ತಿಳಿಸುವಂತೆಯೂ ವ್ಯವಸ್ಥೆ ಮಾಡುತ್ತೇನೆ. ನನ್ನಿಂದಲೂ ಮಹಾರಾಜರಿಂದಲೂ ನಿಮ್ಮ ಈ ಗುಪ್ತರಹಸ್ಯವು ಕಡೆಯವರೆಗೂ ಗುಪ್ತವಾಗಿಯೇ ಇರಿಸಲ್ಪಡುವದು. ಆದರಿಂದ ನೀವೂ ಇದನ್ನು ಇನ್ನು ಮುಂದೆ ಯಾರ ಮುಂದೂ ತೆಗೆಯದಂತೆ ಎಚ್ಚರಪಡಿರೆಂದರಾಯಿತು, ಎಂದು ಹೇಳಲು, ಡಬ್ಲಿನ್ನನು ಫಕೀರಜೆಯು ಆ ಹಿತೋಪದೇಶದ ಬಗ್ಗೆ ಅವನನ್ನು ಅಭಿವಂದಿಸಿ, ಅವನಿಂದ ಅಪ್ಪಣೆ ಪಡೆದು ಮನೆಗೆ ಹಿಂದಿರುಗಿದನು.



## ೧೨ನೇ ಪ್ರಕರಣ—ಪ್ರಯಾಣ.

ಕೋಟಕಾಂಗ್ರಾದ ಹೊಸಗವರ್ನರನು ಮಹಾರಾಜನ ಆಜ್ಞೆಯ ಮೇರೆಗೆ ಹೊಸದಂಡನ್ನು ಏರ್ಪಡಿಸುವವನಿದ್ದನೆಂಬ ಸುದ್ದಿಯು ಲಾಹೋರ ಪಟ್ಟಣದಲ್ಲಿ ಹರಡಲು, ಸಾಹಸಿಗರಾದ ಉಮೇದವಾರರು ನಾಮುಂದೆ ನೀಮುಂದೆ ಎಂದು ಅವನನ್ನು ಕಾಣಲಿಕ್ಕೆಂದು ಅವನ ಬಂಗ್ಲೆಗೆ ಎಡತಾಕಲಾರಂಭಿಸಿದರು. ಬಂದವರನ್ನು ಪರೀಕ್ಷಿಸಿ, ಇವರು-ಯೋಗ್ಯರು ಇವರು ಅಯೋಗ್ಯರೆಂಬದನ್ನು ತಿಳಿಸುವ ಕೆಲಸದಲ್ಲಿಯೇ ಡಬ್ಲಿನ್ನನ ಕೆಲ ದಿನಗಳು ಕಳೆದವು. ಚೈತನ್ಯದಾಸ ನಂತೂ ಆಗ ಒಳ್ಳೇ ಗಡಬಿಡಿಯಲ್ಲಿ ಬಿದ್ದಿದ್ದನು ತಾನೇ ಡಬ್ಲಿನ್ನನ ಮುಖ್ಯ ಪ್ರಧಾನನೆಂದು ಆ ದಾಸನು ತಿಳಕೊಂಡಿದ್ದನು. ಯಾಕಂದರೆ ಡಬ್ಲಿನ್ನನ ನೌಕರರಲ್ಲಿಯು ಒಬ್ಬನಿಗೂ ಇಂಗ್ಲಿಷ ಭಾಷೆಯ ಜ್ಞಾನವಿರಲಿಲ್ಲ. ಬನ್ಸೀನಿಗೆ ಕೆಲ ಇಂಗ್ಲಿಷ ಶಬ್ದಗಳ ಪರಿಚಯವಾಗಿತ್ತು; ಆದರೆ ಇವನಿಗಿಂತ ಅವನು ಕೆಳಗಿನವನೇ ಸರಿ. ಚೈತನ್ಯದಾಸನ ಆಕೃತಿ, ಆತನ ಹಾವಭಾವ ಮುಂತಾದವುಗಳನ್ನು ನೋಡಿದವರಿಗೆ ಅವನ ಡಬ್ಲಿನ್ನನ ದಿವಾಣನಾಗಲಿಕ್ಕೆ ಯೋಗ್ಯನೇ ಎಂದು ಎಲ್ಲರೂ ಹೇಳಬಹುದಾಗಿತ್ತು. ಆತನ ಇಂಗ್ಲಿಷ ಹಾಗು ದೇವನಾಗರಿ ಲಿಪಿಯು ಬರಹವು ಅತ್ಯುತ್ತಮವಾಗಿತ್ತು. ಲೆಕ್ಕಪತ್ರಗಳಲ್ಲಂತೂ ಅವನೊಳ್ಳೇ ನುರಿತವನಾಗಿದ್ದನು. ಈ ಚೈತನ್ಯನು ಬರೇ "ಅಚ್ಛಾಸಾಹೇಬ "ಎಂಬ ವ್ಯಕ್ತಿಯಿರಬಹುದೆಂದು ತಿಳಿದಿದ್ದ ಡಬ್ಲಿನ್ನನು ಕೂಡ ಕೆಲದಿನಗಳನಂತರ ಅವನು ಇಟ್ಟ ತನ್ನ ದಂಡಿನ ಲೆಕ್ಕ ಪತ್ರಗಳನ್ನು ನೋಡಿ ಸಂತೋಷಪಟ್ಟು ಅವನನ್ನು ಹೊಗಳಹತ್ತಿದನು ಈತ್ತೀಚೆಗೆ ಡಬ್ಲಿನ್ನನ ಬಂಗ್ಲೆಯಲ್ಲಿ ಅವಾಢವ್ಯವಾಗಿ ಖರ್ಚು ಆಗುತ್ತಿದ್ದರೂ ಅದನ್ನೆಲ್ಲ ಚೈತನ್ಯದಾಸನು ವ್ಯವಸ್ಥಿತವಾಗಿ ಬರೆದಿಡುತ್ತಿದ್ದನು. ಅವನ ಲೆಕ್ಕದಲ್ಲಿ ಒಂದು ದಮ್ಮಡಿಯು ಹೆಚ್ಚು ಕಡಿಮೆಕೂಡ ಆಗುತ್ತಿರಲಿಲ್ಲ. ಅದರಿಂದ ದಿನೇದಿನೆ ಡಬ್ಲಿನ್ನನಲ್ಲಿ ಚೈತನ್ಯದಾಸನ ವಿಷಯದ ವಿಶ್ವಾಸವು ಬೆಳೆಯಹತ್ತಿತು.

ದಂಡಾಳುಗಳನ್ನು ಆರಿಸುವದು, ಅವರನ್ನು ಅವರಿಗೆ ತಕ್ಕಕೆಲಸಗಳಿಗೆ ನೇಮಿಸುವದು ಮುಂತಾದ ಕೆಲಸಗಳನ್ನು ವಿಶೇಷ ದಕ್ಷತೆಯಿಂದ ಮಾಡಬೇಕಾದ್ದರಿಂದ ಡಬ್ಲಿನ್ನನಿಗೆ ಇತ್ತೀಚೆಗೆ ವಿಶ್ರಾಂತಿಯೇ ದೊರೆಯುತ್ತಿರಲಿಲ್ಲ ತನ್ನ ದಂಡಿನಲ್ಲಿ ಅವಿಶ್ವಾಸಿಗರ ಹಾಗು ದುರ್ವರ್ತನಿಗಳ ಭರತಿಯಾಗಬಾರದೆಂದು ಅವನು ಉಮೇದವಾರರನ್ನು ಬೇರೆಬೇರೆ ರೀತಿಗಳಿಂದ ಪರೀಕ್ಷಿಸುತ್ತಿದ್ದನು. ಆ

ವಿಷಯದಲ್ಲಿ ಅವನಿಗೆ ಅಮಾತ್ಯ ಫಕೀರಜಿ ಹಾಗು ಅವನ ತಮ್ಮನಾದ ಕಾಲಿಫಜಿಯರ ನೆರವೂ ಚೆನ್ನಾಗಿ ಆಗುತ್ತಿತ್ತು. ಅವರಿಬ್ಬರೂ ಅವನಿಗೆ ಕೆಲಜನ ಚಲೋ ದಂಡಾಳುಗಳನ್ನು ಒದಗಿಸಿಕೊಟ್ಟರಲ್ಲದೆ, ಬಕ್ಷಿ, ಮುನಸಿ ಮುಂತಾದ ಮುಲಕೀ ಅಧಿಕಾರಿಗಳನ್ನು ಅವರೇ ದೊರಕಿಸಿಕೊಟ್ಟರು. ತುಸ ದಿನಗಳಲ್ಲೇ ಡಬ್ಲಿನ್ನನ ಮನಸ್ಸಿನ ತಕ್ಕಂತಹ ದಂಡುಗಳು ಸಿದ್ಧಾದವು; ಕೂಡಲೆ ಅವರಿಗೆ ಕವಾಯಿತ ಶಿಕ್ಷಣವೂ ಪ್ರಾರಂಭವಾಯಿತು. ಇಷ್ಟೆಲ್ಲ ವ್ಯವಸ್ಥೆಯಾದರೂ ರಣಜಿತಸಿಂಗನ ದರ್ಬಾರದಲ್ಲಿ ತನ್ನ ವತಿಯಿಂದ ವಕೀಲನನ್ನು ನೇಮಿಸುವದೊಂದು ಅತ್ಯಂತ ಮಹತ್ವದ ಸೂಕ್ಷ್ಮಕೆಲಸವು ಉಳಿದೇ ಬಿಟ್ಟಿತ್ತು. ತನ್ನ ಕಡೆಯವನಾವನನ್ನು ಆ ಕೆಲಸಕ್ಕೆ ನೇಮಿಸಬೇಕೆಂಬಬಗ್ಗೆ ಬಹಳ ಹೊತ್ತು ಆಲೋಚಿಸಿದ ನಂತರ, ಚಾಂದಖಾನನನ್ನೇ ತನ್ನ ವಕೀಲನನ್ನಾಗಿ ನೇಮಿಸುವದನ್ನು ಡಬ್ಲಿನ್ನನು ಗೊತ್ತುಮಾಡಿಕೊಂಡನು. ಚಾಂದಖಾನನಿಗೆ ಆ ಬಗ್ಗೆ ಕೇಳಲು, ಅವನು ಅದಕ್ಕೆ ಒಪ್ಪದೆ, ನಾನು ನಿಮ್ಮ ಕೈಕೆಳಗೆ ದಳವಾಯಿಯಾಗುವೆನೆಂದು ಹಟಹಿಡಿದನು. ಚಾಂದಖಾನನು ಒಳ್ಳೇ ವೀರನೂ ಧೀರನೂ ಇದ್ದುದರಿಂದ ಅವನ ಇಚ್ಛೆಯ ಮೇರೆಗೆ ಅವನು ದಳವಾಯಿಯಾಗಲಿಕ್ಕೆ ಎಲ್ಲ ಬಗೆಯಿಂದಲೂ ಅರ್ಹನಾಗಿದ್ದನು; ಆದರೆ ಡಬ್ಲಿನ್ನನು ವಿಚಾರಿಸಿದ್ದೇನಂದರೆ, ತನ್ನ ಬಳಿಯಲ್ಲಿರುವ ಎಲ್ಲ ಜನರಿಗಿಂತ ಚಾಂದಖಾನನೇ ಒಳ್ಳೇ ವಿಶ್ವಾಸುಕನೂ, ತೀಕ್ಷ್ಣಬುದ್ಧಿಯವನೂ ಆಗಿರುವದರಿಂದ ಇವನನ್ನೇ ತನ್ನ ವತಿಯ ವಕೀಲನೆಂದು ರಣಜಿತಸಿಂಹನ ದರ್ಬಾರದಲ್ಲಿಡಬೇಕೆಂದು ನಿಶ್ಚಯಿಸಿಕೊಂಡು, ಚಾಂದಖಾನನನ್ನು ಕುರಿತು:—

ಖಾನಸಾಹೇಬ, ನೀವು ನನ್ನ ದಳವಾಯಿಯಾಗಿ ನನ್ನೊಡನೆ ಕೋಟಕಾಂಗ್ರಾಕ್ಕೆ ಬರುವದಕ್ಕಿಂತ ನನ್ನ ವಕೀಲರಾಗಿ ದರ್ಬಾರದಲ್ಲಿರುವದು ನಮ್ಮಿಬ್ಬರಿಗೂ ಲಾಭದಾಯಕವಾಗಿರುತ್ತದೆ. ಇಷ್ಟು ದಿನಗಳಲ್ಲಿ ನಿಮ್ಮಷ್ಟು ಸರಳಸ್ವಭಾವದ ವಿಶ್ವಾಸಿಗನೊಬ್ಬನೂ ನನಗೆ ದೊರೆತಿಲ್ಲ. ಆದುದರಿಂದ ನೀವು ನನ್ನ ಸೇನಾನಾಯಕರಾಗುವದಕ್ಕಿಂತ ನನ್ನ ವಕೀಲರಾಗುವದೇ ಹೆಚ್ಚು ಶ್ರೇಯಸ್ಕರವಾಗಿರುತ್ತದೆ; ಆದರೆ ಚಾಂದಖಾನ, ನೀವು ನನ್ನ ನೌಕರಿಯನ್ನು ಒಪ್ಪಿಕೊಳ್ಳುವ ಮೊದಲು ನಿಮ್ಮಲ್ಲಿಯ ಜಾತಿದ್ವೇಷವನ್ನು ಬಿಟ್ಟು, ಈ ವರೆಗೆ ನೀವು ಪರರಿಗೆ ಮಾಡಿದ ಕೇಡಿನ ಬಗ್ಗೆ ಮನಃಪೂರ್ವಕವಾಗಿ ದೇವರಲ್ಲಿ ಕ್ಷಮೆ ಬೇಡಿಕೊಳ್ಳಬೇಕು. ಚಾಂದಖಾ, ಎಲ್ಲ ಮನುಷ್ಯರೂ ಒಬ್ಬ ದೇವರ ಮಕ್ಕಳೇ ಅಲ್ಲವೇ? ಅಂದಮೇಲೆ ನಾವೆಲ್ಲರೂ ಬಂಧುಭಾವದಿಂದ ನಡೆದು ಪರಸ್ಪರರ ಕಲ್ಯಾಣವನ್ನು ಬಗೆಯುವದ

ನಮ್ಮಲ್ಲಿಯ ಮನುಷ್ಯತ್ವದ ದ್ಯೋತಕವಾಗಿರುತ್ತದೆ. ಈ ಉಚ್ಚ ಧ್ಯೇಯವನ್ನು ತೊರೆದು, ಪರಸ್ಪರರನ್ನು ದ್ವೇಷಿಸಿ, ಒಬ್ಬರು ಮತ್ತೊಬ್ಬರನ್ನು ಪೀಡಿಸುತ್ತಿರುವದು ಎಲ್ಲಿಯ ನ್ಯಾಯವು? ಆದುದರಿಂದ ಚಾಂದಖಾನ, ನೀವು ಎಲ್ಲರಲ್ಲಿಯೂ ಪ್ರೇಮದಿಂದ ನಡೆಯುಹತ್ತಿರಿ. ಅದರಿಂದ ನಿಮ್ಮ ಮನಸ್ಸಿಗೆ ಸಮಾಧಾನ ದೊರೆದು ಇಹಪರಗಳಲ್ಲಿ ನಿಮ್ಮ ಕಲ್ಯಾಣವಾಗುವದು, ಎಂದು ಬೋಧಿಸಿದನು.

ಅಂದು ಚಾಂದಖಾನನ ಪೂರ್ವ ಸುಕೃತವು ಫಲಿಸಿತೋ ಏನೋ ಎನ್ನುವಂತೆ ಅವನಲ್ಲಿ ಪಶ್ಚಾತ್ತಾಪ ಬುದ್ಧಿಯುಂಟಾಯಿತು. ತಾನು ಇನ್ನು ಎಂದೂ ಯಾಂಗೂ ಕೇಡುಬಗೆಯಲಾರೆನೆಂದೂ ಯಾರನ್ನೂ ದ್ವೇಷಿಸಲಾರೆನೆಂದೂ ಅವನು ಅಲ್ಲಾನ ಆಣೆಯಾಗಿ ಡಬ್ಲಿನ್ನನಿಗೆ ಹೇಳಿದನು; ಹಾಗೂ ನೀವು ಹೇಳಿದ ಕೆಲಸವನ್ನು ಈ ದೇಹದಲ್ಲಿ ಪ್ರಾಣವಿರುವವರೆಗೂ ಕೇವಲ ವಿಶ್ವಾಸದಿಂದ ಮಾಡುತ್ತ ಹೋಗುವೆನೆಂದು ಅಭಿವಚನವನ್ನಿತ್ತನು. ಆಗ ಡಬ್ಲಿನ್ನನು ಮತ್ತೆ:-ಚಾಂದಖಾನ, ನಿಮ್ಮ ಸ್ವಾಭಾವಿಕ ಒಲವು ಲೆಕ್ಕಣಿಕೆಗಿಂತಲೂ ಕತ್ತಿಯ ಕಡೆಗಿದೆಯೆಂಬದು ನನಗೆ ಗೊತ್ತಿರುತ್ತದೆ; ಆದರೆ ವಕೀಲಿಯ ಕೆಲಸಮಾಲಿಡಕ್ಕೆ ಎಂಥ ವಿಶ್ವಾಸದ ಮನುಷ್ಯನ ಅವಶ್ಯಕತೆಯಿದೆಯೋ, ಅಂಥ ವಿಶ್ವಾಸಿಗನು ಇಲ್ಲಿ ನಿಮ್ಮ ಹೊರತು ಅನ್ಯರಾರೂ ಇಲ್ಲವಾದ್ದರಿಂದ ನಾನು ನಿಮ್ಮನ್ನು ನನ ವಕೀಲರೆಂದು ರಣಜಿತನ ದರ್ಬಾರದಲ್ಲಿ ನೇಮಿಸುತ್ತೇನೆ ಈ ನನ್ನ ಕೆಲಸವನ್ನು ನೀವು ಚೆನ್ನಾಗಿ ಮಾಡಿದರೆ ಮಾನ ಮರ್ಯಾದೆಗಳೂ, ಧನ-ದೌಲತ್ತುಗಳೂ ನಿಮಗೆ ಸಹಜವಾಗಿ ಪ್ರಾಪ್ತವಾಗುವ ಸಂಭವವಿರುತ್ತದ.

ಚಾಂದಖಾನನಿಗೆ ಈ ವರೆಗೆ ಲಾಹೋರದಲ್ಲಿ ಹೇಳಿಕೊಳ್ಳುವಂತಹ ಯಾರ ಆಶ್ರಯವೂ ಇರಲಿಲ್ಲ ಒಬ್ಬ ಪ್ರವಾಸಿಗನಿಗಿಂತ ಅವನಿಗೆ ಆ ಊರಲ್ಲಿ ವಿಶೇಷ ಮಹತ್ವವಿರಲಿಲ್ಲ. ಅಂಥ ಚಾಂದಖಾನನಿಗೆ ಅಂದು ಹಾಗೆ ಡಬ್ಲಿನ್ನನ ಆಶ್ರಯವೂ ಬಹುಮಾನದ ನೌಕರಿಯೂ ದೊರೆತ ಬಳಿಕ ಏನೆನಿಸಿರಬೇಕು? ಆಗ ಅವನ ಕಣ್ಣೊಳಗಿಂದ ಆನಂದಾಶ್ರುಗಳು ಸುರಿಯುತ್ತಿರಲು, ಅವನು ತನ್ನ ಗದ್ಗದಿತ ಕಂಠದಿಂದ:-ಹುಜೂರ, ಯಾವ ಸುಮುಹೂರ್ತದಲ್ಲಿ ನನಗೆ ತಮ್ಮ ದರ್ಶನವಾಗಿದೆಯೋ ಏನೋ? ಯಾವ ಚಾಂದಖಾನನಿಗೆ 'ತಮ್ಮಾ ಇತ್ತಬಾ; ಇಲ್ಲಿ ಬಂದು ಕೂಡ್ರು' ಎಂದು ಕೂಡ ಯಾರೂ ಅನ್ನಲಿಕ್ಕಿಲ್ಲವೋ, ಅಂಥ ಆ ದರಪೇಶಿಯಾದ ಈ ಚಾಂದಖಾನನ್ನು ಮಹಾರಾಜಾ ರಣಜಿತಸಿಂಹನ ದರ್ಬಾರದಲ್ಲಿ ತಾವು ತಮ್ಮ ವಕೀಲನೆಂದು ನೇಮಿಸುತ್ತಿರುವದು ಸಾಮಾನ್ಯವೇ? ಯಾವ

ಶೀಖ ಸಮಾಜವು ಈ ಪಠಾಣ ಜಾತಿಯ ಚಾಂದಖಾನನಲ್ಲಿ ಎಳ್ಳಷ್ಟು ವಿಶ್ವಾಸ ವನ್ನಿಡಲಿಕ್ಕೆ ಸಿದ್ಧವಿಲ್ಲವೋ, ಅಂಥ ಚಾಂದಖಾನನು ನಿಮಗೆ ಪರಮ ವಿಶ್ವಾಸಿಕ ನೆಂದು ತೋರುವದು ನನ್ನ ಮಹದ್ಭಾಗ್ಯವಲ್ಲದೆ ಮತ್ತೇನು? ಹುಜೂರ, ನಾನು ಅಲ್ಲಾನ ಸಾವಿರ ಆಣೆ ಮಾಡಿ ನಿಮಗೆ ತಿಳಿಸುವದೇನಂದರೆ, ಈ ಚಾಂದಖಾನನ ಜೀವಹೋದರೂ ಚಿಂತೆಯಿಲ್ಲ; ಆದರೆ ಇವನು ನಿಮಗೆ ಎಂದೂ ತಿರುಗಿ ಬೀಳ ಲಿಕ್ಕಿಲ್ಲ. ಸಾಹೇಬ, ತಾವು ಕೇವಲ ಫಿರಂಗಿಗಳೆಂದು ನಾನು ತಮಗಿಷ್ಟು ಅಧೀನನಾಗುವೆನಂತಲ್ಲ; ತಮ್ಮ ವೀರೋಚಿತವಾದ ಆಚರಣೆಯನ್ನು ಕಂಡು ನಾನು ತಮ್ಮ ಚರಣದಾಸನಾಗಿರುತ್ತೇನೆ ನಾನು ಈ ವರೆಗೆ ಎಷ್ಟೋ ಫಿರಂಗಿ ಗಳನ್ನು ಕಂಡಿದ್ದೇನೆ; ಆದರೆ ನಿಮ್ಮಂಥ ಸದ್ಗುಣಿಗಳು ನೀವೆಯೇಸರಿ! ಹುಜೂರ, ತಮ್ಮ ದಳವಾಯಿಯಾಗಿ ತಮ್ಮೊಡನೆ ಬರುವದರಲ್ಲಿ ನನ್ನದೊಂದು ಉದ್ದೇಶ ವಿತ್ತು. ಹುಜೂರರಿಗೆ ದೊಡ್ಡ ಅಧಿಕಾರದ ಗವರ್ನರ ಪದವಿಯು ಪ್ರಾಪ್ತ ವಾಯಿತೆಂದು ಹುಜೂರರವರು ನಿರಾಪದರಾದರೆಂದು ಯಾರಾದರೂ ಅಂದರೆ ಅದಕ್ಕೆ ಈ ಚಾಂದಖಾನನು ಎಂದೂ ಒಪ್ಪತಕ್ಕವನಲ್ಲ. ಹುಜೂರ, ಈ ಉಚ್ಚ ಅಧಿಕಾರ ಪದದಿಂದ ತಮಗೆ ಶತ್ರುಗಳು ಮಾತ್ರ ಹೆಚ್ಚಾದರು! ಕೆಲವು ನೀಚ ಶೀಖರು ತಮ್ಮ ವಿರುದ್ಧವಾಗಿದ್ದು, ಅವರು ನಿಮ್ಮ ಪ್ರಾಣ ಹೀರುವ ಕಟ್ಟನ್ನೇ ಮಾಡಿಕೊಂಡಿರುತ್ತಾರೆ. ಅಂಥ ಆ ನೀಚರಿಗೆ ಪ್ರಸಂಗದಲ್ಲಿ ನನ್ನ ಅಸಿಯ ಧಾರೆಯನ್ನು ಚೆನ್ನಾಗಿ ತೋರಿ ಅವರನ್ನೆಲ್ಲ ಇಳೆಗೊರಗಿಸುವ ಉದ್ದೇಶವನ್ನಿಟ್ಟು ಕೊಂಡೇ ನಾನು ಹುಜೂರರವರ ಕೂಡ ದಳವಾಯಿಯಾಗಿ ಬರಬೇಕೆಂದಿದ್ದೆನು; ಆದರೆ ಹುಜೂರರವರು ನನ್ನನ್ನು ವಕೀಲನನ್ನಾಗಿ ನೇಮಿಸಿ ಇಲ್ಲಿಯ ದರ್ಬಾರದ ಲ್ಲಿರ ಹೇಳಿದ್ದರಿಂದ ಆ ವಿಷಯದಲ್ಲಿ ನನ್ನ ಆಟವು ನಿಂತು ಹೋಗಿದೆ; ಆದರೂ ಹುಜೂರರವರು ನನ್ನದೊಂದು ವಿನಂತಿಯನ್ನು ಮಾನ್ಯಮಾಡಬೇಕೆಂದು ನಾನು ನಮ್ಮ ಹುಜೂರರವರಿಗೆ ಆಗ್ರಹಪೂರ್ವಕವಾಗಿ ಬೇಡಿಕೊಳ್ಳುತ್ತೇನೆ.

ಲಾಹೋರದೊಳಗಿನ ಡಬ್ಲಿನ್ನನ ಮುಖ್ಯ ಶತ್ರುವೆಂದರೆ ನಂದಸಿಂಹನೇ! ಆತನ ಪ್ರತಿಯೊಂದು ಬಗೆಯ ಚಲನವಲನದ ಮೇಲೆ ಡಬ್ಲಿನ್ನನ ಲಕ್ಷ್ಯವು ಎಷ್ಟು ಇದ್ದಿತೋ ಅಷ್ಟೇ ಚಾಂದಖಾನನ ಲಕ್ಷ್ಯವೂ ಇತ್ತು. ಅದನ್ನು ಕಂಡು ಡಬ್ಲಿನ್ನ ನಿಗೆ ಬಲು ಸಮಾಧಾನವೆನಿಸುತ್ತಿತ್ತು. ಒಂದುದಿನ ಅವನು ಚಾಂದಖಾನನನ್ನು ಕುರಿತು:-ಚಾಂದಖಾ, ಶತ್ರುಗಳಮೇಲೆ ನನ್ನ ಸಂಪೂರ್ಣವಾದ ಲಕ್ಷ್ಯವಿರುತ್ತದೆ. ಅಂತೇ ನಾನು ನಿಮ್ಮನ್ನುನನ್ನ ವಕೀಲರನ್ನಾಗಿ ದರ್ಬಾರದಲ್ಲಿ ನೇಮಿಸಿರುತ್ತೇನೆ.

ನನ್ನ ಕೆಲಜನ ಶತ್ರುಗಳು ನನ್ನೊಡನೆ ಕೋಟಕಾಂಗ್ರಾಕ್ಕೆ ಹೇಗೆ ಬರುವ ಸಂಭವ ವಿದೆಯೋ ಅದರಂತೆ ಕೆಲಜನ ಶತ್ರುಗಳು ಇಲ್ಲಿಯೇ ಉಳಿದು ಮಹಾರಾಜರಿಗೆ ನನ್ನ ವಿಷಯವಾಗಿ ಇಲ್ಲದ್ದೊಂದು ಹೇಳುವ ಸಂಭವವೂ ಇರುತ್ತದೆ. ಅಂಥವರ ಮೇಲೆ ದೃಷ್ಟಿಯನ್ನಿರಿಸುವದಕ್ಕೆಂದೇ ನಾನು ನಿಮ್ಮನ್ನು ಇಲ್ಲಿ ಬಿಟ್ಟು ಹೋಗು ತ್ತೇನೆ. ನೀವು ನನ್ನೊಡನೆ ಬಂದು ಯಾವ ನನ್ನ ಕೆಲಸವನ್ನು ಮಾಡಬೇಕೆಂದಿ ದ್ದಿರೋ, ಅದೇ ನನ್ನ ಕೆಲಸಕ್ಕಾಗಿ ನೀವು ಇಲ್ಲಿ ನಿಲ್ಲಬೇಕಾಗಿದೆಯೆಂಬದು ಚಾಂದ ಖಾನ, ಈಗಲಾದರೂ ನಿಮಗೆ ತಿಳಿಯಿತೇ? ಎಂದು ಹೇಳಲು, ಚಾಂದಖಾನನು ಡಬ್ಲಿನ್ನನ ಆ ಮಾತಿಗೆ ಒಡಂಬಟ್ಟು:-ಹುಜೂರ, ನೀವಂದಂತೆಯೇ ಆಗಲಿ; ಆದರೆ ನನ್ನನ್ನು ತಮ್ಮ ಸಂಗಡ ಒಯ್ಯದಿದ್ದರೂ ನನ್ನ ವಿಶ್ವಾಸದ ನೂರುಜನ ದಂಡಾಳುಗಳನ್ನು ತಾವು ತಮ್ಮ ಸಂಗಡ ಒಯ್ಯಲೇಬೇಕು. ನಿಮ್ಮ ಶತ್ರುಗಳು ನಿಮಗೆ ಬಹಿರಂಗವಾಗಿ ಎದುರಾಗುವ ಸಂಭವವಿಲ್ಲ; ಆದರೆ ರಾತ್ರಿ ಅಪರಾತ್ರಿ ಗಳಲ್ಲಿ ಸಂಧಿ ಸಾಧಿಸಿ ಅವರು ನಿಮಗೇನಾದರೂ ಅಪಾಯಮಾಡುವ ಹವಣಿಕೆ ಯನ್ನು ಮಾಡಿದರೆ, ನಿಮ್ಮ ಸಂಗಡದ ಆ ನನ್ನ ಜನರು ಆ ದುಷ್ಟರ ಬಲೆಯಿಂದ ನಿಮ್ಮನ್ನು ರಕ್ಷಿಸುತ್ತಾರೆ. ನನ್ನ ನೂರು ಜನರಲ್ಲಿ ೫೦ ಜನ ಕಾಲಾಳುಗಳೂ ೫೦ ಜನ ಕುದುರೇ ಸವಾರರೂ ಇರುತ್ತಾರೆ. ಆ ಜನರು ಪರಾಕ್ರಮದಲ್ಲಿ ಸಿಂಹನನ್ನೂ ಸ್ವಾಮಿಭಕ್ತಿಯಲ್ಲಿ ನಾಯಿಯನ್ನೂ ಹೋಲುವಂಥವರಿರುತ್ತಾರೆ. ಅಲಿವರ್ದಿಖಾನನೆಂಬೊಬ್ಬ ನನ್ನ ಮಿತ್ರನಿದ್ದು ಅವನು ಆ ಎಲ್ಲರ ಮುಖ್ಯಸ್ಥನಾಗಿ ರುತ್ತಾನೆ ಅವನು ಒಳ್ಳೇ ಶೂರನೂ ವಿಶ್ವಾಸಿಗನೂ ಆಗಿರುವನಲ್ಲದೆ, ಅವನ ದೃಷ್ಟಿಯೂ ಬುದ್ಧಿಯೂ ಅತಿ ತೀಕ್ಷ್ಣವಾಗಿರುವದರಿಂದ ಯಾವನೊಬ್ಬನ ಮೈಮೇಲೆ ಹಾಯ್ದು ಬರುವ ಗಾಳಿಯ ಮೇಲಿಂದ ಅವನು ಆ ಮನುಷ್ಯನ ಸ್ವಭಾವವನ್ನು ತಿಳಿಯುವ ಸಾಮರ್ಥ್ಯವುಳ್ಳವನಾಗಿರುತ್ತಾನೆ. ಒಡೆಯರೇ, ಈ ಬಗ್ಗೆ ನಾನು ಹೆಚ್ಚಿಗಿನ್ನೇನು ಹೇಳಲಿ? ಆ ನನ್ನ ನೂರು ಜನರೆಂದರೆ, ನಿಮ್ಮ ೧೦೦ ಜನ ಬನ್ನೂ-ಧನ್ನೂರೆಂದೇ ಹೇಳಬಹುದು.

ಡಬ್ಲಿನ್ನನು ಚಾಂದಖಾನನ ಆ ಬಿನ್ನಹವನ್ನು ಮನ್ನಿಸಿದನು. ಮುಂದೆ ಒಂದೆರಡು ದಿನಗಳಲ್ಲೇ ಚಾಂದಖಾನನು ತನ್ನ ಆ ನೂರುಜನ ದಂಡಾಳುಗಳನ್ನು ಡಬ್ಲಿನ್ನನ ವಶಪಡಿಸಿದನು; ಹಾಗು ಅವನಿಗೆ ಅಲಿವರ್ದಿಖಾನನ ಗುರುತು-ಪರಿ ಚಯಗಳನ್ನು ಮಾಡಿಕೊಟ್ಟನು. ಆ ದಂಡಾಳುಗಳ ತೇಜವನ್ನೂ ಅಲಿವರ್ದಿ ಖಾನನ ಚಾಣಾಕ್ಷತನವನ್ನೂ ಕಂಡು ಡಬ್ಲಿನ್ನನು ಸಂತೋಷಭರಿತನಾಗಿ:—

ಅಲಿವರ್ದಿಖಾ, ನೀವು ತೀಕ್ಷ್ಣ ಬುದ್ಧಿಯುವರೂ ವಿಶ್ವಾಸಿಕರೂ ಇರುವಿರೆಂಬ ದನ್ನು ತಿಳಿದಿರುತ್ತೇನೆ; ಅದರಿಂದ ನಾನು ನಿಮ್ಮನ್ನು ನನ್ನ ಶರೀರ ರಕ್ಷಕರನ್ನಾಗಿ ನೇಮಿಸುತ್ತೇನೆ; ಅರ್ಥಾತ್ ನನ್ನ ಪ್ರಾಣವನ್ನು ನಿಮ್ಮ ಸ್ವಾಧೀನಪಡಿಸಿರು ತ್ತೇನೆ. ಇನ್ನು ನನ್ನ ಎಲ್ಲ ಉನ್ನತಿ-ಅವನತಿಗಳು ನಿಮ್ಮ ಹಾಗು ಚಾಂದಖಾನ ಇವರ ಕರ್ತವ್ಯದಕ್ಷತೆಯುನ್ನವಲಂಬಿಸಿರುತ್ತವೆ! ಎಂದು ಹೇಳಿದನು

ಡಬ್ಲಿನ್ನನ ಆ ಹೃದ್ಗತವನ್ನು ತಿಳಿದು ಅವರಿಬ್ಬರಿಗೂ ಅತ್ಯಂತ ಸಂತೋಷ ವಾಗಲು, ಅವರ ಕಣ್ಣೊಳಗಿಂದ ಆನಂದಬಾಷ್ಪಗಳುದುರಿದವು! ಅವನಿಗೆ ಅವರು ಯಾವ ಉತ್ತರವನ್ನೂ ಕೊಡಲಿಕ್ಕೆ ಸಮರ್ಥರಾಗಲಿಲ್ಲ. ತುಸಹೊತ್ತಿನ ವರೆಗೆ ಅವರು ಮೂವರೂ ಒಬ್ಬರನ್ನೊಬ್ಬರು ಮಿಕಿಮಿಕಿಯೆಂದು ನೋಡಿದ ಮೇಲೆ ಅಲಿವರ್ದಿಖಾನನೂ ಚಾಂದಖಾನನೂ ತಮ್ಮ ತಮ್ಮ ಕೆಲಸಗಳಿಗಾಗಿ ಹೊರಟುಹೋದರು. ಡಬ್ಲಿನ್ನನು ಆ ಇಬ್ಬರು ದಾರಿಬಡಿಯುವವರಿಗೆ ಆಶ್ರಯ ಕೊಟ್ಟ ಬಗ್ಗೆ ಲಾಹೋರ ಪಟ್ಟಣದೊಳಗಿನ ಜನರು ತಮ್ಮ ತಮ್ಮೊಳಗೆ ಗುಣು ಗುಟ್ಟಲಾರಂಭಿಸದರು; ಆದರೆ ಡಬ್ಲಿನ್ನನು ಅತ್ತ ಬೇಕಂತ ಮನಸರಿಮಾಡಿದನು. ಯಾಕಂದರೆ ಯಾವದೊಂದು ಶಕ್ತಿಯು ಉಪಯೋಗಮಾಡಿಕೊಳ್ಳುವಂತೆ ಅದು ಚಲೋ ಇಲ್ಲವೆ ಕೆಟ್ಟ ಕೆಲಸಗಳಿಗೆ ಹೇಗೆ ಸರಿಯಾಗಿ ಸಹಾಯಕಾರಿಯಾಗು ವದೋ, ಅಸ್ತ್ರವನ್ನು ಚಲೋ ಕೆಲಸಗಳಿಗೂ ಕೆಟ್ಟ ಕೆಲಸಗಳಿಗೂ ಹೇಗೆ ಸಮ ನಾಗಿ ಉಪಯೋಗಿಸಬಹುದೋ, ಅದರಂತೆ ಮನುಷ್ಯನ ಸ್ವಭಾವವನ್ನರಿತು ತಕ್ಕ ಕೆಲಸಕ್ಕೆ ಅವನನ್ನು ಯೋಜಿಸಿದರೆ, ಅಪೇಕ್ಷಿಸಲ್ಪಟ್ಟ ಕೆಲಸವು ಅವನಿಂದ ಖಂಡಿತ ವಾಗಿ ಆಗುವದೆಂದು ಆತನ ವಿಶ್ವಾಸವಿತ್ತಾದ್ದರಿಂದ, ಚಾಂದಖಾನ-ಅಲಿ ವರ್ದಿಖಾನರ ವಿರುದ್ಧವಾಗಿ ಜನರಾಡುವ ಮಾತಿನ ಕಡೆಗೆ ಆತನು ದುರ್ಲಕ್ಷಿ ಸಿದ್ದನು; ಆದರೆ ಅಲಿವರ್ದಿಖಾನನು ತನ್ನೊಡನೆಯೇ ಬರುತ್ತಿರುವದರಿಂದ ಅವನ ಬಗ್ಗೆ ಚಿಂತಿಸುವ ಕಾರಣವಿಲ್ಲ;. ಚಾಂದಖಾನನು ಲಾಹೋರದಲ್ಲಿ ಉಳಿ ಯುತ್ತಿರುವದರಿಂದ ಮತ್ತಾರ ಸಹವಾಸದಿಂದಾದರೂ ಆತನ ಸ್ವಭಾವವು ಬದ ಲಾಗಿ, ಆತನಿಂದ ತನಗೆ ಕೇಡು ಉಂಟಾಗಬಾರದೆಂದು ಡಬ್ಲಿನ್ನನು ಫಕೀರಜಿಯ ಸಲಹೆಯುಮೇರೆಗೆ ಬಾಪ್ಪಾಜಿರಾವ ಎಂಬ ಮರಾಟನನ್ನು ಚಾಂದಖಾನನ ಮೇಲೆ ನಜರಿಡುವದಕ್ಕೆಂದು ಗುಪ್ತವಾಗಿ ನೇಮಿಸಿದನು.

ಒಂದು ದಿನ ಡಬ್ಲಿನ್ನನು ಚಾಂದಖಾನನನ್ನು ಏಕಾಂತದಲ್ಲಿ ಕರೆದು:—

ಚಾಂದಖಾನ, ನೀವು ದಿನಾಲು ರಣಜಿತನ ದರ್ಬಾರದಲ್ಲಿ ಹಾಜರಿರಲಿಕ್ಕೆ ತಪ್ಪ

ಲಾಗದು. ದಿನಾಲು ನನ್ನ ಕಡೆಯ ಪತ್ರವು ನಿಮಗೆ ಮುಟ್ಟಲಿ-ಮುಟ್ಟದಿರಲಿ, ನನ್ನ ಪತ್ರ ಬಂದಿದೆಯೆಂದೇ ಮಹಾರಾಜರಿಗೂ ಮುಖ್ಯ ಮಂತ್ರಿಗಳಿಗೂ ಹೇಳಿ ಅವರಿಗೆ ನನ್ನ ಸಲಾಮುಗಳನ್ನು ತಿಳಿಸತಕ್ಕದ್ದು. ದರ್ಬಾರದಲ್ಲಿ ಇದಕ್ಕೂ ಹೆಚ್ಚು ನೀವೆಂದೂ ಏನನ್ನೂ ಮಾತಾಡಕೂಡದು. ದರ್ಬಾರದೊಳಗೆ ಚರ್ಚಿಸಲ್ಪಡುತ್ತಿರುವ ಬಗೆಬಗೆಯ ವಿಷಯುಗಳನ್ನು ನೀವು ಬರೇ ಕೇಳಿಕೊಳ್ಳತಕ್ಕದ್ದು; ಆ ಬಗ್ಗೆ ನಿಮ್ಮ ಮತವನ್ನು ತಿಳಿಸಲಿಕ್ಕಾಗಲಿ ಅಥವಾ ವಿರುದ್ಧವಾದ ಪ್ರಶ್ನೆಗಳನ್ನು ಮಾಡಲಿಕ್ಕಾಗಲಿ ನಿಮಗೆ ಅಲ್ಲಿ ಅಧಿಕಾರವಿರುವದಿಲ್ಲ. ನನ್ನ ವಕೀಲರಾದ ನಿಮ್ಮಿಂದ ದರ್ಬಾರದ ರಿವಾಜಿಗೆ ವಿರುದ್ಧವಾದ ಹಾಗು ನನಗೆ ಅಹಿತವಾದ ಯಾವ ಆಚರಣೆಯೂ ಆಗಲಾಗದು. ಹಾಗೆ ಯತ್ಕಿಂಚಿತ್ತಾದರೂ ಆದರೆ, ನಾನು ಯಾವಜ್ಜನ್ಮದಲ್ಲಿ ನಿಮ್ಮ ಕೂಡ ಮಾತು ಸಹ ಆಡಲಿಕ್ಕಿಲ್ಲ. ನನ್ನ ಕೆಲಸದಲ್ಲಿ ನನಗೆ ಸಮಾಧಾನವನ್ನುಂಟು ಮಾಡಿದರೆ ನಿಮಗೆ ನಿಮ್ಮ ಸಂಬಳದ ಹೊರತು ಕಾಲಕಾಲಕ್ಕೆ ಪಾರಿತೋಷಕವೂ ದೊರೆಯುವದು. ನಿಮಗೆ ಯಾವುದೊಂದು ಮಹತ್ವದ ಸಂಗತಿಯು ದರ್ಬಾರದಲ್ಲಿಯೇ ಆಗಲಿ, ಅನ್ಯತ್ರದಲ್ಲಿಯೇ ಆದರೆ ತಿಳಿದ ಒಡನೆಯೇ ಅದನ್ನು ಪತ್ರದಲ್ಲಿ ಬರೆದು ಜಾಸೂದನ ಮುಖಾಂತರ ನನಗೆ ಕಳಿಸತಕ್ಕದ್ದು. ಆ ಬಗ್ಗೆ ನಿಮಗೆ ಕೆಲ ಹೆಚ್ಚು ಖರ್ಚು ಹತ್ತಿದರೂ ನಾನು ಅದನ್ನು ನಿಮಗೆ ಕೊಡುತ್ತೇನೆ. ಲಾಹೋರದಿಂದ ಕೋಟಕಾಂಗ್ರಾದವರೆಗೆ ಐದೈದು ಹರದಾರಿಗಳ ಅಂತರದ ಮೇಲೆ ಇಬ್ಬಿಬ್ಬರು ಕುದುರೆಯ ಸವಾರರನ್ನು ನನ್ನ ಟಪಾಲಿನ ವ್ಯವಸ್ಥೆಗಾಗಿ ನಾನು ಇಡತಕ್ಕವನಿರುತ್ತೇನೆ. ನೀವು ಅವರೊಡನೆ ಮಹತ್ವದ ಮಾಹಿತಿಯ ಮೊಹರಬಂದ ಥೈಲಿಗಳನ್ನು ಕಳಿಸುತ್ತಿರತಕ್ಕದ್ದು. ಚಾಂದಖಾ, ಈ ಬಗ್ಗೆ ಹೆಚ್ಚಿಗಿನ್ನೇನು ಹೇಳಲಿ? ಈ ಡಬ್ಲಿನ್ನನ ಉನ್ನತಿಯೇ ನಿಮ್ಮ ಉನ್ನತಿಯೆಂದೂ, ಈತನ ಅವನತಿಯೇ ನಿಮ್ಮ ಅವನತಿಯೆಂದೂ ತಿಳ ಕೊಳ್ಳಿರಿ, ಅಂದರಾಯಿತು. ಕೂಡಲೆ ಚಾಂದಖಾನನು ಅದಕ್ಕೆ ಮನಃಪೂರ್ವಕವಾಗಿ ಒಪ್ಪಿದನು.

ಡಬ್ಲಿನ್ನನ ಎಲ್ಲ ಸಿದ್ಧತೆಯಾದರೂ ಜಮಾದಾರಖೋಸಾಲಸಿಂಹನ ಸ್ವಾರರ ದಂಡು ಇನ್ನೂ ಸಿದ್ಧವಾಗಿರಲಿಲ್ಲ. ಅಲ್ಲದೆ ಆ ಚಿಕ್ಕ ದಂಡಿನ ಸೇನಾಪತಿತ್ವವನ್ನು ಯಾರಿಗೆ ಕೊಡಬೇಕೆಂಬದೂ ನಿರ್ಧಾರವಾಗಿರಲಿಲ್ಲ. ತನ್ನ ವಿರುದ್ಧವಾಗಿರುವ ಯಾವನೊಬ್ಬನ ನೇಮಣೂಕು ಆ ಸರಕಾರೀ ದಂಡಿನಮೇಲೆ ಆಗುವದೆಂದೂ, ತನ್ನ ಏಕಛತ್ರ ಪದಕ್ಕೆ ಅದರಿಂದ ಅಡ್ಡಿಯನ್ನುಂಟುಮಾಡುವದಕ್ಕೇ ಆ ದಂಡು

ತನ್ನೊಡನೆ ರವಾನಿಸಲ್ಪಡುತ್ತಿರುವದೆಂದು ಡಬ್ಲಿನ್ನನು ಮೊದಲೇ ಕಲ್ಪಿಸಿದ್ದನು. ಅದರಂತೆಯೇ ಕಡೆಗೆ ಆಯಿತು. ನಂದಸಿಂಹನೇ ಆ ಸರಕಾರೀ ದಂಡಿನ ದಳವಾಯಿಯಾದನು. ಆದರೆ ಆ ದಂಡಿನ ದಳವಾಯಿತ್ವವನ್ನು ನಂದಸಿಂಹನಿಗೆ ಕೊಡಬಹುದೆಂದು ಡಬ್ಲಿನ್ನನು ತನ್ನ ಕನಸುಮನಸಿನಲ್ಲಿಯೂ ಕಲ್ಪಿಸಿರಲಿಲ್ಲ. ಡಬ್ಲಿನ್ನನ ಸಹಕಾರಿ ಸೇನಾಪತಿಯೆಂದು ರಣಜಿತಸಿಂಹನಿಂದ ನಿಯಮಿಸಲ್ಪಟ್ಟ ಆ ನೀಚ ನಂದಸಿಂಹನು ಮೀಸೆಗಳನ್ನು ಹುರಿಮಾಡಲಾರಂಭಿಸಿದನು. ಆದರೆ ಎಷ್ಟಾದರೂ ಅವನು ಡಬ್ಲಿನ್ನನ ಕೈಕೆಳಗಿನವನೇ. ಅದರಿಂದ ಅವನು ಡಬ್ಲಿನ್ನನ ಮಯಾ೯ದಿತ ಹುಕುಮುಗಳನ್ನು ತನ್ನ ಬಾಯಿ-ಮೂಗುಗಳನ್ನು ಮುಚ್ಚಿಕೊಂಡು ಪಾಲಿಸಲೇಬೇಕಾಗುತ್ತಿತ್ತು; ಮೇಲಾಗಿ ಜನನ್ನೂ, ಧನನ್ನೂ, ಹಾಗು ಅಲಿವರ್ದಿಖಾನ ಈ ಮೂವರ ದೃಷ್ಟಿಯೂ ಅವನ ಮೇಲೆ ಇದ್ದಿತು. ನಂದಸಿಂಹನ ಆ "ಲ್ಯಾನ್ಸರ" ದಂಡಿನಲ್ಲಿ ೭೦೦ ಸವಾರರಿದ್ದರು. ಆದರೆ ಡಬ್ಲಿನ್ನನ ದಂಡಿನಲ್ಲಿ ಸವಾರರ ಹಾಗು ಕಾಲಾಳುಗಳ ಸಂಖ್ಯೆಯು ಒಟ್ಟಿಗೆ ೫ ಸಾವಿರಕ್ಕೆ ಮೀರಿತ್ತು. ಹೀಗೆ ಎಲ್ಲ ಸಿದ್ಧತೆಯಾದ ನಂತರ ಡಬ್ಲಿನ್ನನು ಆ ದಂಡಿನ ತಳವನ್ನು ಕಿತ್ತಿ ಲಾಹೋರ ಪಟ್ಟಣದ ಉತ್ತರದಿಕ್ಕಿಗೆ ಮೂರು ಮೈಲುಗಳ ಮೇಲಿನ ಒಂದು ವಿಸ್ತಾರವಾದ ಬೈಲಿನಲ್ಲಿ ಬೀಡು ಬಿಡಿಸಿದನು. ನಂತರ ಡಬ್ಲಿನ್ನನು ಮಹಾರಾಜರನ್ನು ಕರೆಯಿಸಿ ಅವರಿಗೆ ತನ್ನ ದಂಡಿನ ಕವಾಯತನ್ನು ತೋರಿಸಿದನು; ಹಾಗು ಇನ್ನು ತನಗೆ ಹೊರಡಲಿಕ್ಕೆ ಅಪ್ಪಣೆ ದೊರೆಯಬೇಕೆಂದು ಕೇಳಿಕೊಂಡನು. ಆದರೆ ರಣಜಿತಸಿಂಹನು ಡಬ್ಲಿನ್ನನ ಆ ವಿನಂತಿಯನ್ನು ಕೇಳಿಯೂ ಕೇಳದವನಂತೆ ನಟಿಸಿ, ಅನ್ಯೋನ್ಯ ಪಚಾರಗಳಲ್ಲಿ ಆ ದಿನವನ್ನು ಕಳೆದನು

ಮುಂದೆ ಮೂರು ನಾಲ್ಕು ದಿನಗಳಾದರೂ ರಣಜಿತನು ಡಬ್ಲಿನ್ನನಿಗೆ ಹೊರಡಲಿಕ್ಕೆ ಅಪ್ಪಣೆಕೊಡಲಿಲ್ಲ. ಒಂದು ದಿನ ಡಬ್ಲಿನ್ನನು ದರ್ಬಾರಕ್ಕೆ ಹೋಗಿರಲು, ರಣಜಿತನು ತನ್ನ ಭಾಂಡಾರದೊಳಗಿನ "ಕೊಹಿನೂರ" ಎಂಬ ಸುಪ್ರಸಿದ್ಧ ರತ್ನವನ್ನು ಇವನಿಗೆ ತೋರಿಸಿ;—ಡಬ್ಲಿನ್ನಸಾಹೇಬ, ನೀವು ಎಷ್ಟೋದೇಶಗಳನ್ನು ಸಂಚರಿಸಿ ಬಂದವರಿರುತ್ತೀರಿ; ಆದುದರಿಂದ ನೀವು ಇಂಥ ರತ್ನವನ್ನೆಲ್ಲಿಯಾದರೂ ನೋಡಿದ್ದಿರಾ? ಎಂದು ಪ್ರಶ್ನೆಮಾಡಿದನು.

ಡಬ್ಲಿನ್ನನು ಆ ರತ್ನವನ್ನು ಎಷ್ಟೋ ಹೊತ್ತಿನ ವರೆಗೆ ಹೊರಳಿಸಿ ಹೊರಳಿಸಿ ನೋಡಿ:—ಮಹಾರಾಜ, ದೇವರ ದಯದಿಂದ ಎಷ್ಟೋ ರತ್ನಗಳನ್ನು ನೋಡುವ ಸುಸಂಧಿಯು ನನಗೆ ಪ್ರಾಪ್ತವಾಗಿತ್ತು; ಆದರೆ ಇಂಥ ಸುಂದರವಾದ

ಅಮೂಲ್ಯ ರತ್ನವು ಈ ಪೃಥ್ವೀತಲದಲ್ಲಿ ಇದೊಂದೇ ಎಂದು ನನ್ನ ಪ್ರಾಮಾಣಿಕ ವಾದ ಅಭಿಪ್ರಾಯವಾಗಿರುತ್ತದೆ.

ಆತನ ಅಭಿಪ್ರಾಯವನ್ನು ತಿಳಿದು ರಣಜಿತಸಿಂಗನಿಗೆ ಬಲು ಸಮಾಧಾನವೆನಿಸಿತು. ಕೂಡಲೆ ಅವನು ಫಕೀರಜಿಯು ಕಡೆಗೆ ಹೊರಳಿ ನೋಡಲು, ಅವನು ಆ ರತ್ನದ ಪೂರ್ವ ವೃತ್ತವನ್ನು ಸಾದ್ಯಂತವಾಗಿ ಡಬ್ಲಿನ್ನಗೆನಿ ತಿಳಿಸಿದನು. ಬಳಿಕ ಕೆಲ ಹೊತ್ತಿನ ಮೇಲೆ ರಣಜಿತನು ಡಬ್ಲಿನ್ನನ ಕಡೆಗೆ ಟಕಮಕವಾಗಿ ನೋಡಿ:— ಸಾಹೇಬ, ನೀವು ಬಂದ ಉದ್ದೇಶವು ತಿಳಿಯಿತು; ಹಾಗು ನಿಮ್ಮ ಕಲ್ಪನೆಯ ಮೇರೆಗೆ ನಾನು ನಿಮ್ಮ ಸಂಗತಿಯನ್ನು ತಿಳಿದು ನಿಮ್ಮ ಮೇಲೆ ಅವಿಶ್ವಾಸವನ್ನು ಇಲ್ಲವೆ ಅಸಡ್ಡೆಯನ್ನು ತಾಳಿಲ್ಲ. ಆದರೆ ಸಾಹೇಬ, ಇಂದು ನಿಮ್ಮ ಮುಖದ ಮೇಲೆ ಉತ್ಸಾಹಕ್ಕಿಂತ ಚಿಂತೆಯು ಕಳೆಯೇ ಹೆಚ್ಚಾಗಿ ತೋರುವ ಕಾರಣವೇನು? ಆ ಹೊಸ ಅಧಿಕಾರವು ನಿಮಗೊಂದು ಸಂಕಟವೇ ಅನಿಸಿತೇನು? ಎಂದು ನುಡಿದು, ತನಗೆ ಡಬ್ಲಿನ್ನನ ವೃತ್ತವು ತಿಳಿದಿದೆಯೆಂಬದನ್ನು ಅವನಿಗೆ ಸೂಕ್ಷ್ಮ ವಾಗಿ ತಿಳಿಸಿದನು.

ಡಬ್ಲಿನ್ನನು ನಸುನಕ್ಕು:—ಮಹಾರಾಜ, ಹಾಗೇನೂ ಇಲ್ಲ. ನನ್ನ ಉತ್ಸಾಹವು ಸಂಕಟ ಸಮಯದಲ್ಲಿ ದ್ವಿಗುಣಿತವಾಗುತ್ತದೆ; ಮೇಲಾಗಿ ತಮ್ಮ ಹಾಗು ಪರಮೇಶ್ವರನ ದಯೆಯಿರಲಿಕ್ಕೆ ನನಗೇತರ ಚಿಂತೆಯು? ಆದರೆ ಯಾವ ಡಬ್ಲಿನ್ನನ ಮೇಲೆ ಕೆಲ ದಿನಗಳ ಮೊದಲು ಒಂದೇ ಕುದುರೆ ಹಾಗು ಒಂದೇ ಖಡ್ಗ ಇವುಗಳ ಮಟ್ಟಿಗೆ ಜವಾಬುದಾರಿಯಿದ್ದಿತೋ ಅದೇ ಆತನ ಮೇಲೆ ಇಂದಿಗೆ ೩-೪ಸಾವಿರ ಕುದುರೆಗಳ ಹಾಗು ೫-೬ಸಾವಿರ ಖಡ್ಗಗಳ ಜವಾಬುದಾರಿಯು ಬಿದ್ದಿರುತ್ತದೆ; ಮತ್ತು ಅವುಗಳಲ್ಲಿ ಅಸಚ್ಚರಿತ್ರ ಜನರ ಖಡ್ಗಗಳು ಎಷ್ಟಿವೆಯೋ ಎಂಬ ಚಿಂತೆಯು ನನ್ನನ್ನು ಆವರಿಸಿರುತ್ತದೆ. ಈ ಪ್ರಕಾರದ ಸಂಭಾಷಣವು ನಡೆದಿರುವಾಗ ಡಬ್ಲಿನ್ನನ ವಿರುದ್ಧ ಪಕ್ಷದ ಜನರು ದರ್ಬಾರದಲ್ಲಿ ಹಾಜರಿದ್ದರು. ಆಗ ನಂದಸಿಂಹನೂ, ಆತನ ಕೆಲ ಜನ ಅನುಯಾಯಿಗಳೂ ಡಬ್ಲಿನ್ನನಿಗೆ ಚೇಷ್ಟೆ ಮಾಡಿದರು ಆ ವಿರುದ್ಧ ಪಕ್ಷದವರ ಆಗರ್ಹ್ಯವಾದ ಆ ಚರಣೆಯು ಮಹಾ ರಾಜಾ ರಣಜಿತಸಿಂಹನಿಗೂ ಗೊತ್ತಾಯಿತು; ಡಬ್ಲಿನ್ನನಿಗೂ ತಿಳಿಯಿತು. ಅಂತೇ ಅವನು ಬೇಕಂತ ಆ ಅಸಚ್ಚರಿತ್ರ ಖಡ್ಗಗಳ ವಿಧಾನವನ್ನು ಸೂಚಿಸಿದ್ದನು.

ಮಹಾರಾಜಾ ರಣಜಿತಸಿಂಹನು ತುಸ ಹೆಚ್ಚು ಕಡಿಮೆ ಇಂಗ್ಲಿಷ ಮುತ್ಸದ್ದಿಗಳಂತಹ ಸ್ವಭಾವದವನೇ ಆಗಿದ್ದನು. "DIvide and Rule" ಎಂಬ

ಇಂಗ್ಲಿಷ ಮುತ್ಸದ್ದಿಗಿರಿಯು ಅವನಿಗೆ ಮನವುಟ್ಟ ಮಾನ್ಯವಾಗಿತ್ತು. ಅಂತೇ ಅವನು ತನ್ನ ದರ್ಬಾರದೊಳಗಿನ ಜನರಲ್ಲಿ ಒಬ್ಬರಿಗೊಬ್ಬರಲ್ಲಿ ವೈಮನಸ್ಸುಂಟಾದರೆ ಅದನ್ನು ತನ್ನ ಅಧಿಕಾರ ವಾಣಿಯಿಂದ ಒಮ್ಮೆಲೆ ನಂದಿಸುವ ಪ್ರಯತ್ನ ಮಾಡದೆ, ಆ ದ್ವೇಷಾಗ್ನಿಯಲ್ಲಿ ತುಪ್ಪವನ್ನು ಸುರುವುವ ಉದ್ಯೋಗವನ್ನು ಕೈಕೊಳ್ಳು ತ್ತಿದ್ದನು. ಅದರಿಂದ ಆ ದರ್ಬಾರಿಗಳ ಒಳಜಗಳವು ಬೆಳೆದರೂ, ಅವರ ಆ ವೈರತ್ವ ದಿಂದ ತನ್ನ ರಾಜ್ಯಕ್ಕೆ ಅನಿಷ್ಟವಾಗದ ಉಪಾಯುಗಳನ್ನು ಅವನು ಕಂಡುಕೊಳ್ಳು ತ್ತಿದ್ದನು. ಈ ಪದ್ಧತಿಯಂತೆ ರಣಜಿತನು ಆಗ ಡಬ್ಲಿನ್ನನ ವಿರುದ್ಧ ಪಕ್ಷದವ ರನ್ನು ಅಷ್ಟಕ್ಕೇ ಬೊಗ್ಗು ಬಡಿಯದೆ, ಅವರನ್ನು ಎಬ್ಬಿಸಿ ಹಿಡಿಯುವದಕ್ಕಾಗಿ:- ಡಬ್ಲಿನ್ನ ಸಾಹೇಬ, ತಾವು ಅನ್ನುವದೇನೋ ನಿಜವು. ಆ ಪ್ರಕಾರದ ಚಿಂತೆ ಗೊಳಗಾಗುವ ಪ್ರಸಂಗವೊದಗಲಿಕ್ಕೆ ಇನ್ನೂ ಬಹಳ ಅವಕಾಶವಿದೆ ಆದರೆ ತಾವು ಈಗಿನಿಂದಲೇ ಆ ಆಗಾಮಿ ಪ್ರಸಂಗದ ಬಗ್ಗೆ ಚಿಂತಿಸುವದನ್ನು ಕಂಡು ನನಗೊಳ್ಳೇ ಸಂತೋಷವೆನಿಸುತ್ತದೆ. ಯಾಕಂದರೆ ನಾನು ನನ್ನ ಅಧಿ ಕಾರ ಸೂತ್ರಗಳನ್ನು ಯೋಗ್ಯ ಮನುಷ್ಯನ ಕೈಗೆ ಕೊಟ್ಟಿರುತ್ತೇನೆಂಬದು ನನ್ನ ನಿದರ್ಶನಕ್ಕೆ ಬಂದಂತಾಯಿತು.

ಮಹಾರಾಜರ ಈ ಶಬ್ದಗಳು ಕಿವಿಗೆ ಬಿದ್ದ ಕೂಡಲೆ ಡಬ್ಲಿನ್ನನ ವಿರುದ್ಧ ಪಕ್ಷದವರ ನಿಂದಾಪ್ರಚುರವಾದ ಶಬ್ದಗಳು ಡಬ್ಲಿನ್ನನ ಕಿವಿಗೆ ಸ್ಪಷ್ಟವಾಗಿ ಕೇಳಿ ಸಲಾರಂಭಿಸಿದವು. ಅವುಗಳನ್ನು ಕೇಳಿ ಡಬ್ಲಿನ್ನನು ತುಸ ಉತ್ತೇಜಿತದನಿಯಿಂದ:— ಮಹಾರಾಜರ ಈ ಭವಿಷ್ಯವು ದಿಟವಾಗಲೆಂದರೆ ತೀರಿತು. ಆದರೆ ಇದೇ ದರ್ಬಾರ ದಲ್ಲಿ ನನ್ನಲ್ಲಿ ಉತ್ಸಾಹವನ್ನು ತುಂಬುವ ತಮ್ಮಂತಹ ಅದ್ವಿತೀಯ ಗರುಡರಿರು ವಂತೆ, ನನಗೆ ಅತ್ಯಂತ ಉದ್ವೇಗವನ್ನುಂಟುಮಾಡುವಂತಹ ಕೆಲವು ಕರ್ಕಶ ಕಾಗೆ ಗಳೂ ಇಲ್ಲಿ ಕಲೆತಿರುತ್ತವೆಂಬದನ್ನು ಮಹಾರಾಜರು ಮರೆಯತಕ್ಕದ್ದಲ್ಲ.

ಆಗ ರಣಜಿತನು ಆಶ್ಚರ್ಯದ ನೋಟವನ್ನು ತೋರಿಸುತ್ತ:—ಇಲ್ಲ; ಡಬ್ಲಿನ್ನ ಸಾಹೇಬ, ನಮ್ಮ ದರ್ಬಾರದಲ್ಲಿ ಬರೇ ಗರುಡಗಳೇ ಇರುತ್ತವೆಯೇ ಹೊರತು, ಕಾಗೆಗಳಿಗೆಲ್ಲಿಯೂ ಪ್ರವೇಶವಿರುವದಿಲ್ಲ.

ಮಹಾರಾಜನ ಈ ನುಡಿಯು ಕಿವಿಗೆ ಬಿದ್ದ ಕೂಡಲೆ ಡಬ್ಲಿನ್ನನ ವಿರುದ್ಧ ಪಕ್ಷದವರ ಮೈಯುಬ್ಬಿದಂತಾಗಲು, ಅವರು ಖೊ-ಖೊಕ್ಕೆಂದು ನಗಲಾರಂ ಭಿಸಿದರು; ಅಮಾತ್ಯ ಖೋಸಾಲಸಿಂಹನ ಅಣ್ಣನ ಮಗನಾದ ತೇಜಸಿಂಗನೆಂಬ ಅತ್ಯಂತ ಸ್ಥೂಲ ಕಾಯದ ಅಗಡಬಂಬನಂತೂ ತನ್ನ ವಾಕ್ಪಾಂಡಿತ್ಯವನ್ನು

ಪ್ರದರ್ಶಿಸುವದಕ್ಕೆಂದು:—ನಮ್ಮ ಮಹಾರಾಜರ ದರ್ಬಾರದಲ್ಲಿಯು ಎಲ್ಲರೂ ಜೆಲೋ ಜನರೇ ಆಗಿರುತ್ತಾರೆ. ಯಾರಿಗೆ ತಮ್ಮ ದೇಶದಲ್ಲಿ ಕತ್ತೆಯ ಮೇಲೆ ಸಹ ಕೂಡ್ರಲಿಕ್ಕೆ ದೊರೆಯುವದಿಲ್ಲವೋ, ಅಂಥ ಜನರು ಇಲ್ಲಿಗೆ ಬಂದು ಸೇನಾ ಪತಿಗಳಾದರೂ ಅವರನ್ನು ಅವರ ಮೂಲಸ್ಥಿತಿಗೆ ಮುಟ್ಟಿಸುವ ಬಹು ಜನರು ಮಹಾರಾಜರ ಈ ದರ್ಬಾರದಲ್ಲಿರುತ್ತಾರೆ; ಎಂದು ನುಡಿದು ನಕ್ಕನು.

ತೇಜಸಿಂಹನ ಆ ನುಡಿಗಳ ತೇಜದಿಂದ ಡಬ್ಲಿನ್ನನ ವಿರುದ್ಧ ಪಕ್ಷದ ಜನರಿಗೆ ಮತ್ತಿಷ್ಟು ಹುರುಪು ಬಂದಂತಾಗಿ ಅವರು ಗಟ್ಟಿಗಟ್ಟಿಯಾಗಿ ನಕ್ಕು ಅಸಭ್ಯತನ ದಿಂದ ಡಬ್ಲಿನ್ನನಿಗೆ ಚೇಷ್ಟೆ ಮಾಡಹೊಡಗಿದರು. ಅವರ ಮಂಗಾಟವನ್ನು ಕಂಡು ಡಬ್ಲಿನ್ನನು:—ಆದರೆ ಒಂದು ಮೂಲೆಯಲ್ಲಿ ಕುಳಿತು ಬಾಯಿಬಡಾಯಿ ಹೊಡೆಯುವ ಈ ವೀರಾಗ್ರಣಿಗಳನ್ನು ನಮ್ಮ ದೇಶದೊಳಗಿನ ಕತ್ತೆಗಳು ಸಹ ತಮ್ಮ ಮೇಲೆ ಹತ್ತಿಸಿಕೊಳ್ಳಲಿಕ್ಕಿಲ್ಲ ಯಾಕಂದರೆ ಅವಕ್ಕಾದರೂ ತಮ್ಮ ಮೇಲೆ ಯಾರು ಹತ್ತಲಿಕ್ಕೆ ಯೋಗ್ಯರು, ಯಾರು ಅಯೋಗ್ಯರು ಎಂಬದರ ಮರ್ಮ ವಾದರೂ ಗೊತ್ತಿರುತ್ತದೆ. ಆದರಿಂದ ಅವುಗಳಿಗೂ ಒಂದು ಬಗೆಯ ಮಾನೀ ಸ್ವಭಾವವುಂಟಾಗಿರುತ್ತದೆ. ಮತ್ತು ಅದರಿಂದಲೇ ಇಂಥ ಮಾನಗೇಡಿಗಳಾದ ಆನೆಯ ಮರಿಗಳನ್ನು ಯಾವುದೊಂದು ಅತ್ಯುತ್ಕೃಷ್ಟ ಕುದುರೆಯ ಮೇಲೆ ಒಯ್ದು ಕೂಡ್ರಿಸಿದರೂ ಅದು ಕತ್ತೆಯಂತೆ ತೋರದೆ ಇರದು.

ಡಬ್ಲಿನ್ನನ ಈ ನುಡಿಗಳನ್ನು ಕೇಳಿ ತೇಜಸಿಂಹನು ಸಂತಪ್ತನಾದನು. ಅವನು ಸಿಟ್ಟಿನ ಆವೇಶದಲ್ಲಿ ಇನ್ನು ಎದ್ದು ನಿಂತು ಏನನ್ನೋ ನುಡಿಯಬೇಕೆಂದನು. ಅಷ್ಟರಲ್ಲಿ ಲೇನಸಿಂಹನೆಂಬ ಹೆಸರಿನ ಅಮಾತ್ಯನು ತನ್ನ ಕಣ್ಣು ಸನ್ನೆಯಿಂದಲೇ ತೇಜಸಿಂಹನನ್ನು ಕುಕ್ಕರು ಬಡಿದನು. ಲೇನಸಿಂಹನು ತೇಜಸಿಂಹನ ಕಡೆಗೆ ಹಾಗೆ ಕಿಡಿಗಣ್ಣಿನಿಂದ ನೋಡಿದ ಕೂಡಲೆ ಆ ದರ್ಬಾರದೊಳಗಿನ ಡಬ್ಲಿನ್ನನ ವಿರುದ್ಧ ಪಕ್ಷದ ಜನರೆಲ್ಲರೂ ಸ್ತಂಭಿತರಾದರು. ಅತರಸಿಂಹನೆಂಬ ಅಮಾತ್ಯ ನತೂ ಈ ದುರ್ವಾದವನ್ನು ಬೆಳೆಯಗೊಟ್ಟದ್ದಕ್ಕಾಗಿ ಸ್ವತಃ ರಣಜಿತಸಿಂಹಮಹಾ ರಾಜನಿಗೇ ದೋಷಕೊಟ್ಟನು. ಲೇನಸಿಂಹ ಹಾಗೂ ಅತರಸಿಂಹ ಈ ಇಬ್ಬರೂ ರಣಜಿತನ ಅಮಾತ್ಯರೆಂದು ದರ್ಬಾರದಲ್ಲಿ ಹೆಚ್ಚಾಗಿ ಪ್ರಸಿದ್ಧರಾಗಿರದಿದ್ದರೂ, ಸದಾ ಚಾರಿಗಳಾದ ಸದ್ಗೃಹಸ್ಥರೆಂದು ಪ್ರಖ್ಯಾತರಾಗಿದ್ದರು. ಮತ್ತು ಆ ದೃಷ್ಟಿ ಯಿಂದ ದರ್ಬಾರದಲ್ಲಿ ಅವರನ್ನು ಎಲ್ಲರೂ ಸನ್ಮಾನಿಸುತ್ತಿದ್ದರು. ಲೇನಸಿಂಹನು ಜೋತಿಷಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರಗಳನ್ನು ಚೆನ್ನಾಗಿ ಅಭ್ಯಾಸಮಾಡಿದ್ದವ

ನಾಗಿದ್ದನು. ಅತರಸಿಂಹನು ರಣಜಿತನ ಕಕ್ಕನ ಮಗನು; ಆದರೆ ಅವನು ಮಹಾರಾಜನ ಕಕ್ಕನ ಮಗನೆಂದೇ ಪ್ರಸಿದ್ಧನಾಗಿರದೆ, ಅವನು ಒಳ್ಳೇ ವಿದ್ವಾಂಸನೂ ಸದಾಚರಣೆಯುೂ ಆಗಿದ್ದನು.

ಲೇನಸಿಂಹನು ಆ ಬಗೆಯಾಗಿ ಆ ವಾದವನ್ನು ಮುಗಿಸಲು, ಮಹಾರಾಜನು ಬೇರೆ ವಿಷಯವಾಗಿ ಮಾತುಗಳನ್ನು ಪ್ರಾರಂಭಿಸಿದನು; ಹಾಗು ನಾಳೆ ಬೆಳಿಗ್ಗೆ ನಿಮಗೆ ಇಲ್ಲಿಂದ ಹೊರಡಲಿಕ್ಕೆ ಅಪ್ಪಣೆಕೊಡುವೆನೆಂದು ಡಬ್ಲಿನ್ನನಿಗೆ ತಿಳಿಸಿ, ದರ್ಬಾರವನ್ನು ಮುಗಿಸಿದನು.

ಲೇನಸಿಂಹನು ಡಬ್ಲಿನ್ನನನ್ನು ಮೊದಲನೇ ದಿನದಿಂದಲೇ ಪ್ರೀತಿಸಹತ್ತಿದ್ದನು. ಆದರೆ ಅವನು ಆ ತನ್ನ ವರ್ತನವನ್ನು ಇಂದಿನ ವರೆಗೆ ತೋರಗೊಟ್ಟಿರಲಿಲ್ಲ. ಅಂದಿನ ದರ್ಬಾರದೊಳಗಿನ ಡಬ್ಲಿನ್ನನ ಸಮಯೋಚಿತ ಭಾಷಣ-ವರ್ತನಗಳನ್ನು ಕಂಡು ಅವನು ಡಬ್ಲಿನ್ನನ ವಿಷಯವಾಗಿ ಹೆಚ್ಚಾಗಿ ಆದರವುಳ್ಳವನಾಗಿ, ಚಾಂದಖಾನನ ಮುಖಾಂತರ ಅವನಿಗೊಂದು ಪತ್ರ ಕಳಿಸಿದನು. ಆ ಪತ್ರದಲ್ಲಿ ಲೇನಸಿಂಹನು:—ಡಬ್ಲಿನ್ನಸಾಹೇಬ, ಕೋಟಕಾಂಗ್ರಾಪ್ರಾಂತದ ಅಧಿಕಾರಸೂತ್ರಗಳನ್ನು ವಶಪಡಿಸಿಕೊಳ್ಳುವದು ದುಸ್ತರವಾಗಿದೆ ಆ ಕೆಲಸದಲ್ಲಿ ಅನೇಕ ವಿಘ್ನಗಳು ಬರಬಹುದಾಗಿವೆ. ಆ ಕಾಲಕ್ಕೆ ಈ ಲೇನಸಿಂಹನು ನಿಮಗೊಬ್ಬ ಹಿತಕರ್ತೃವಿರುವನೆಂಬದು ನಿಮ್ಮ ಅನುಭವಕ್ಕೆಬಂದೀತು, ಎಂಬರ್ಥದ ಸಂಗತಿಯನ್ನು ಬರೆದಿದ್ದನು. ಡಬ್ಲಿನ್ನನಿಗೆ ಲೇನಸಿಂಹನ ಆ ಪತ್ರದಿಂದ ಒಂದು ಬಗೆಯ ಧೈರ್ಯವುಂಟಾಯಿತು. ಅವನು ಅವನಿಗೆ ಅಭಾರಪ್ರದರ್ಶನದ ಉತ್ತರವನ್ನು ಕಳಿಸಿಕೊಟ್ಟನು. ಹಾಗು ಚಾಂದಖಾನನಿಗೂ ಕೆಲ ಗುಪ್ತ ಸಂದೇಶವನ್ನು ತಿಳಿಸಿದನು.

ಮರುದಿನ ಬೆಳಗಾಗುವಷ್ಟರಲ್ಲಿ ಡಬ್ಲಿನ್ನನ ಸೈನ್ಯವು ಸಜ್ಜಾಗಿ ನಿಂತಿತು. ಅಷ್ಟರಲ್ಲಿ ರಣಜಿತಸಿಂಹಮಹಾರಾಜರು ತಮ್ಮ ಸರದಾರರೊಡನೆ ಅಲ್ಲಿಗೆ ಬಂದರು. ಸ್ವಲ್ಪ ಹೊತ್ತಿನ ವರೆಗೆ ದಂಡಾಳುಗಳ ಕವಾಯತನ್ನು ಮಾಡಿಸಿ, ಡಬ್ಲಿನ್ನನಿಗೆ ಹೊರಡಲಿಕ್ಕೆ ಅಪ್ಪಣೆಯಿತ್ತನು. ಅಪ್ಪಣೆಕೊಡುವಾಗ ಯಾವ ಕಾರಣದಿಂದಲೋ ಮಹಾರಾಜರ ಕಣ್ಣಲ್ಲಿ ಅಶ್ರುಬಿಂದುಗಳು ಕಾಣಿಸಿಕೊಂಡವು! ಚಾದಖಾ, ಪಕೀರಜೀ, ಕಾಲೀಫಜೀ, ಲೇನಸಿಂಹ ಮುಂತಾದವರಂತೂ ಡಬ್ಲಿನ್ನನನ್ನು ಆಲಿಂಗಿಸಿ ಆಲಿಂಗಿಸಿ, ಕಣ್ಣೀರು ಸುರಿಸುತ್ತ ಅವನಿಗೆ ಹೊರಡಲಿಕ್ಕೆ ಅಪ್ಪಣೆಯನ್ನಿತ್ತರು. ತನ್ನ ಆ ಹಿತಚಿಂತಕರ ಕಡೆಗೆ ಆಗಾಗ್ಗೆ ಹೊರಳಿ ನೋಡುತ್ತ ನೋಡುತ್ತ ಡಬ್ಲಿನ್ನನು ಆ ಲಾಹೋರಪಟ್ಟಣದಿಂದ ಕೋಟಕಾಂಗ್ರಾದ ಮಾರ್ಗಕ್ಕೆ ಹತ್ತಿದನು.

## ೧೩ನೆಯ ಪ್ರಕರಣ:—ನಂದಸಿಂಹನ ನೀಚತನ.

ತನ್ನ ಸೈನ್ಯದ ರಚನೆಯನ್ನು ವಿಶೇಷ ಪ್ರಕಾರದಿಂದ ಮಾಡಿ, ಅದರಿಂದ ತನ್ನ ವೈರಿಯಾದ ನಂದಸಿಂಹನನ್ನು ಡಬ್ಲಿನ್ನನು ಚೆನ್ನಾಗಿ ಪ್ರತಿಬಂಧಿಸಿದ್ದನು. ಮಹಾರಾಜರು ನಂದಸಿಂಹನನ್ನು ಯಾವ ಉದ್ದೇಶದಿಂದಲೇ ತನ್ನೊಡನೆ ಕಳಿಸಿರಲಿ, ನಂದಸಿಂಹನಾದರೂ ಯಾವ ಉದ್ದೇಶದಿಂದಲೇ ತನ್ನೊಡನೆ ಬಂದಿರಲಿ, ಅವನು ತನ್ನ ಸಹಕಾರಿ ಸೇನಾಪತಿಯೆಂದಿದ್ದದರಿಂದ ಡಬ್ಲಿನ್ನನು ತನ್ನ ಪ್ರತಿಯೊಂದು ಹುಕುಮುಗಳನ್ನು ಅವನ ಮುಖಾಂತರವಾಗಿಯೇ ಅಮಲಿನಲ್ಲಿ ತರುವ ಏರ್ಪಾಡು ಮಾಡಿದ್ದನು. ಇದರಿಂದ ನಂದಸಿಂಹನಿಗೆ ಒಂದು ಬಗೆಯ ದೊಡ್ಡಿಸ್ತಿಕೆಯನ್ನು ಕೊಟ್ಟಂತಾಗಿ, ತನ್ನ ಹುಕುಮಿನ ಅಳವಿನೊಳಗೆ ಅವನನ್ನು ಇರಿಸದಂತಾಗುತ್ತಿತ್ತು. ತನ್ನ ಹುಕುಮುಗಳ ಅಮಲನ್ನು ನಂದಸಿಂಹನು ಸರಿಯಾಗಿ ನಡಿಸುವನೋ ಇಲ್ಲವೋ ಎಂಬುವದನ್ನು ತಿಳಿಯುವದಕ್ಕಾಗಿ ಡಬ್ಲಿನ್ನನು ಕೆಲಜನ ಗುಪ್ತ ಹೇರರನ್ನು ಅವನ ಮೇಲೆ ನಜರಿಡುವ ಸಲುವಾಗಿ ನೇಮಿಸಿದ್ದನು. ಅವರು ನಂದಸಿಂಹನ ಪ್ರತಿಯೊಂದು ದಿನದ ದಿನಚರ್ಯೆಯನ್ನು ಇವನಿಗೆ ತಿಳಿಸುತ್ತಿದ್ದರು. ಇವನಾದರೂ ಅವುಗಳೊಳಗಿನ ಮಹತ್ವದ ಸಂಗತಿಗಳನ್ನು ತನ್ನ ರೋಜನಿಶಿಯಲ್ಲಿ ಟಿಪ್ಪಣಿ ಮಾಡಿಕೊಳ್ಳುತ್ತಿದ್ದನು. ಡಬ್ಲಿನ್ನನು ತನ್ನ ದಂಡಿನೊಳಗಿನ ಅತ್ಯಂತ ವಿಶ್ವಾಸುಕರಾದ ೨೦೦ ಜನರ ಒಂದು ಟೋಳಿಯನ್ನು ಎಲ್ಲಕ್ಕೂ ಮುಂದೆ ಕಳಿಸುತ್ತಿದ್ದನು. ಅದರ ಹಿಂದೆ ಖೋಸಾಲಸಿಂಹನು ಕಳಿಸಿದ್ದ ಕಾಲಾಳುಗಳು. ಅವರ ಹಿಂದೆ ಆರು ತೋಫುಗಳುಳ್ಳ ತೋಫಖಾನೆಯ ಸರಂಜಾಮು. ಅದರ ಹಿಂದೆ ತನ್ನ ಸ್ವಂತದ ಕುದುರೆಯ ಸ್ವಾರರ ದಂಡು. ಆ ಸ್ವಾರರ ಹಿಂದೆ ನಂದಸಿಂಹನ ಸರಕಾರೀ ದಂಡು. ಅದರ ಹಿಂದೆ ತನ್ನ ಕಾಲಾಳುಗಳು. ಆ ಕಾಲಾಳಿನ ಹಿಂದೆ ಮತ್ತೆ ತನ್ನ ಅತ್ಯಂತ ವಿಶ್ವಾಸದ ೨೦೦ ಜನ ಕುದುರೆಯ ಸವಾರರ ದಂಡು. ಅದರ ಹಿಂದೆ ಬನ್ನೂ, ಧನ್ನೂ, ಅಲಿವರ್ದಿಖಾನ ಮುಂತಾದ ಶರೀರ ರಕ್ಷಕರಿಂದೊಡಗೂಡಿದ ತಾನು. ಈ ಪ್ರಕಾರದ ಶಿಸ್ತಿನಿಂದ ಡಬ್ಲಿನ್ನನ ದಂಡು ಮಜಲಿನ ಮೇಲೆ ಮಜಲುಗಳನ್ನು ಮಾಡುತ್ತ ನಡೆದಿತ್ತು. ಈ ದಂಡಿನ ವ್ಯವಸ್ಥೆಯನ್ನು ಕಂಡು ನಂದಸಿಂಹನು ಚಕಿತನಾದನು. ೫-೬ ಮುಕ್ಕಾಮುಗಳಾದರೂ ದಂಡಿನಲ್ಲಿ ಹೊಸ ಸಂಗತಿಯೇನೂ ಸಂಭವಿಸಲಿಲ್ಲವು. ಇಲ್ಲಿನ್ನಲಿಕ್ಕೆ ಯಾವ ಕೆಲ ಜನ ದಂಡಾಳುಗಳು ಡಬ್ಲಿನ್ನನ ವಿಷಯವಾಗಿ ಉದಾಸೀನವೃತ್ತಿಯುಳ್ಳವ

ರಾಗಿದ್ದರೋ ಅವರೆಲ್ಲರೂ ಆತನ ದಯಾದಾಕ್ಷಿಣ್ಯಯುಕ್ತವಾದ ಉದಾರ ಆಚರಣೆಯನ್ನು ಕಂಡು ಅವನಲ್ಲಿ ಪ್ರೇಮಭಾವವುಳ್ಳವರಾಗಹತ್ತಿದರು. ದಾರಿಯಲ್ಲಿ ಯಾವನೊಬ್ಬ ಸೈನಿಕನು ದೇನೆಯಿಂದ ಬೀಳಲು, ಸ್ವತಃ ಡಬ್ಲಿನ್ನನು ದಂಡಿನ ವೈದ್ಯನೊಡನೆ ಅವನೆಡೆಗೆ ಹೋಗಿ, ಅವನಿಗೆ ಔಷಧೋಪಚಾರಗಳನ್ನು ಕೊಡಿಸಿ, ಪ್ರಸಂಗ ಬಿದ್ದರೆ ತಾನು ಸ್ವತಃ ಆ ದಂಡಾಳಿನ ಶುಶ್ರೂಷೆ ಮಾಡುತ್ತಿದ್ದನು ಈ ಬಗೆಯ ಪ್ರೇಮಲ ವರ್ತನ ಹಾಗು ಸೈನ್ಯದ ವಿಲಕ್ಷಣ ಶಿಸ್ತು ಇವುಗಳ ಮೂಲಕ ದಂಡಿನೊಳಗಿನ ಪ್ರತಿಯೊಬ್ಬ ಶಿಪಾಯಿಯೂ ಡಬ್ಲಿನ್ನನ ವಿಷಯವಾಗಿ ಎಷ್ಟು ಅಂಜಿನಡೆಯುತ್ತಿದ್ದನೋ, ಅಷ್ಟೇ ಅವನನ್ನು ಪ್ರೀತಿಸುತ್ತಿದ್ದನು.

ಈ ಬಗೆಯಾಗಿ ದಿನದಿನಕ್ಕೆ ಡಬ್ಲಿನ್ನನ ಉತ್ಕರ್ಷವಾಗುವದನ್ನು ಕಂಡು ನಂದಸಿಂಹನ ದ್ವೇಷಾನಲವು ಪ್ರಜ್ವಲಿಸಿತು. ನಂದಸಿಂಹನ ವೃತ್ತಿಯ ಜನರು ಅವನ ಕಡೆಯ ದಂಡಿನಲ್ಲಿ ಅತ್ಯಲ್ಪ ಜನರಿದ್ದರು; ಮತ್ತು ಹಾಗೆ ಇದ್ದ ಆ ಅಲ್ಪ ಜನರಾದರೂ ಯೋಗ್ಯತಾಹೀನರಾಗಿದ್ದರು. ಯಾವುದೊಂದು ನೀಚ ಕೆಲಸ ಮಾಡಲಿಕ್ಕೆ ಸಬಲ ಜನರಿಗಿಂತ ದುರ್ಬಲರೇ ಹೆಚ್ಚು ಉಪಯುಕ್ತರೆಂಬದನ್ನು ಡಬ್ಲಿನ್ನನು ಚೆನ್ನಾಗಿ ಅರಿತವನಾದುದರಿಂದ, ಅವನು ನಂದಸಿಂಹನ ಹಾಗು ಆತನ ಆ ಸಂಗಡಿಗರ ಮೇಲೆ ಚೆನ್ನಾಗಿ ದೃಷ್ಟಿಯನ್ನಿರಿಸಿದ್ದನು. ನಂದಸಿಂಹನು ಡಬ್ಲಿನ್ನನ ದಂಡಿನ ವ್ಯವಸ್ಥೆಯ ಮೂಲಕ ಕೈಕಾಲು ಬಿಗಿದಂತವನಾಗಿದ್ದರೂ, ಅವನು ಡಬ್ಲಿನ್ನನ ಅನಿಷ್ಟ ಚಿಂತನೆಗಾಗಿ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕುಳಿತಿದ್ದನು. ಕ್ಷಿಪ್ರದಲ್ಲಿಯೇ ನಂದಸಿಂಹನಿಗೆ ಅನುಕೂಲವಾದದ್ದೊಂದು ಸಂಧಿಯು ಪ್ರಾಪ್ತವಾಯಿತು.

ಡಬ್ಲಿನ್ನನು ತನ್ನ ದಂಡಿನಲ್ಲಿ ಡಂಗುರಹೊಡಿಸಿ ಸಾರಿದ್ದೇನಂದರೆ:—ನನ್ನ ದಂಡಾಳುಗಳಲ್ಲಿ ಯಾರಿಗೆ ಯಾವ ಜೇನಸು ಬೇಕಾಗಿದ್ದರೂ ಅವರು ಅದನ್ನು ಪೇಟೆಯಲ್ಲಿ ದುಡ್ಡು ಕೊಟ್ಟೇ ಕೊಂಡುಕೊಳ್ಳತಕ್ಕದ್ದು. ಬಲಾತ್ಕಾರದಿಂದ ಯಾವನೂ ಮಂಡಿಯ ಯಾವ ವಸ್ತುವನ್ನೂ ಅಪಹರಿಸತಕ್ಕದ್ದಲ್ಲ. ಹಾಗೆ ಯಾರಾದರೂ ಮಾಡಿದ್ದು ನಮ್ಮ ನಜರಿಗೆ ಬಿದ್ದರೆ, ಅವರಿಗೆ ಕಠಿಣವಾದ ಶಿಕ್ಷೆಯು ವಿಧಿಸಲ್ಪಡುವದು. ಆ ಅಂದಾದುಂದಿಯ ಕಾಲದಲ್ಲಿ ಡಬ್ಲಿನ್ನನ ಆ ಹುಕುಮು ಆತನ ದಂಡಾಳುಗಳಿಗೆ ವಿಲಕ್ಷಣವಾಗಿ ತೋರಿತು; ಯಾಕಂದರೆ ದಂಡಾಳುಗಳು ತಮಗೆ ಬೇಕಾದ ಪ್ರತಿಯೊಂದು ಜೇನಸನ್ನು ಹಾಗೆ ಲೂಟಿಮಾಡಿ ತಂದುಕೊಳ್ಳುವ ಪರಿಪಾಠವೇ ಆಕಾಲದಲ್ಲಿ ಪ್ರಚಾರದಲ್ಲಿದ್ದಿತು. ಅದರಿಂದ ಡಬ್ಲಿನ್ನನ ಆ ಹುಕುಮು

ತಮ್ಮ ಬಹು ದಿನಗಳ ಹಕ್ಕು-ಬಾಧ್ಯತೆಯು ವಿರುದ್ಧವಾದುದೆಂದು ಬಹು ಜನ ಶಿಪಾಯಿಗಳಿಗೆ ಅನಿಸಿದ್ದರಲ್ಲಿ ಆಶ್ಚರ್ಯವೇನು? ದಂಡಾಳುಗಳ ಆ ಮನಶ್ಚಾಂಚಲ್ಯವನ್ನು ಅರಿತ ನಂದಸಿಂಹನು ಆಗ ಸುಮ್ಮನಿರುವನೋ? ಅವನು ಆ ಸಂಧಿಯನ್ನು ಸಾಧಿಸಿ ದಂಡಾಳುಗಳನ್ನು ಡಬ್ಲಿನ್ನನ ವಿಷಯವಾಗಿ ಕಲುಷಿತವಾಗ ಮಾಡಲಾರಂಭಿಸಿದನು. ಆದರೆ ಡಬ್ಲಿನ್ನನನ್ನು ಮನಮುಟ್ಟಿ ಪ್ರೀತಿಸುತ್ತಿದ್ದಂಥ ಆ ದಂಡಾಳುಗಳನ್ನು ಅವನ ವಿರುದ್ಧ ಕಲುಷಿತಗೊಳಿಸುವದು ಅಷ್ಟೊಂದು ಸುಲಭ ಸಾಧ್ಯವಾದ ಹೋರೆಯಾಗಿರಲಿಲ್ಲ.

ಎಷ್ಟೋ ಜನ ಶಿಪಾಯಿಗಳು ನಂದಸಿಂಹನನ್ನು ಕುರಿತು:--ಏನರೀ, ಯಾವ ನಮ್ಮ ದಯಾಳು ಡಬ್ಲಿನ್ನ ಸಾಹೇಬರು ನಮ್ಮೆಲ್ಲರ ಹಿತವನ್ನು ಬಗೆಬಗೆಯಿಂದ ಮಾಡುತ್ತಿರುವರೋ, ನಾವು ಬೇನೆ ಬಿದ್ದರೆ ನಮ್ಮ ಸೇವಾ-ಶುಶ್ರೂಷೆಗಳನ್ನು ಕೈಮುಟ್ಟ ಮಾಡುತ್ತಿರುವರೋ, ದಾರಿಯಲ್ಲಿ ಹೋಗುವ ಕುರುಡರು, ಕುಂಟರು, ಅನಾಥರು ಮುಂತಾದವರಿಗೆ ಎಷ್ಟು ಮನಮುಟ್ಟಿ ಸಹಾಯಮಾಡುವರೋ ಆ ನಮ್ಮ ಪ್ರಿಯ ಡಬ್ಲಿನ್ನಸಾಹೇಬರು ನಮ್ಮನ್ನು ಕುರಿತು ಮಾಡಿರುವ ಈ ಹುಕುಮಿನಲ್ಲಾದರೂ ಏನಾದರೊಂದು ನಮ್ಮ ಹಿತವೇ ಇರಲಾರದೆಂದು ನಾವು ಅದೆಂತು ತಿಳಿಯಬೇಕು? ಮೇಲಾಗಿ ನಮ್ಮ ಸಾಹೇಬರು ನಮ್ಮೆಲ್ಲರಿಗೆ ತಿಳಿಸಿರುವದೇನಂದರೆ, ಕೋಟಕಾಂಗ್ರಾಕ್ಕೆ ಹೋದಬಳಿಕ, ದಾರಿಯಲ್ಲಿ ಕೊಲೆ-ಸುಲಿಗೆ ಮಾಡದಿದ್ದ ತಮ್ಮ ದಂಡಾಳುಗಳಿಗೆ ಇನಾಮುಗಳನ್ನೂ ಹೆಚ್ಚಿನ ಸಂಬಳವನ್ನೂ ಕೊಡುವರಂತೆ. ಅಂದಬಳಿಕ ನಾವು ಅವರ ಅಪ್ಪಣೆಯು ವಿರುದ್ಧವಾಗಿ ನಡೆದು, ನಮ್ಮ ನಿಂದ್ಯವಾದ ಪುರಾತನದ ಹಕ್ಕಿಗಾಗಿ ಆ ಬಡ ಪ್ರಜೆಗಳನ್ನೇಕೆ ಸುಲಿಯಬೇಕು? ಎಂದು ಕಟ್ಟುನಿಟ್ಟಾಗಿ ಕೇಳಿದರು.

ಆ ದಂಡಾಳುಗಳ ಈ ಉತ್ತರದಿಂದ ನಂದಸಿಂಹನು ಸುಮ್ಮನೆ ಕೂಡ್ರುವ ವೃತ್ತಿಯವನಾಗಿರಲಿಲ್ಲ ಅವನು ಮಹಾ ಉಪದ್ವ್ಯಾಪಿಯು. ಆದರಿಂದ ಅವನು ಆ ತನ್ನ ಗರ್ಹ್ಯವಾದ ಉದ್ಯೋಗವನ್ನು ಒಳಗಿಂದೊಳಗೆ ನಡಿಸಿಯೇ ನಡಿಸಿದ್ದನು. ಕೆಲ ಹೀನ ವೃತ್ತಿಯ ಮನೋದೌರ್ಬಲ್ಯದ ದಂಡಾಳುಗಳು ಅವನ ಜಾಲಕ್ಕೆ ಬಲಿಬಿದ್ದರು. ಆ ಸಾಂಸರ್ಗಿಕ ರೋಗವು ದಂಡಿನಲ್ಲಿ ಹಬ್ಬಹತ್ತಿತು ಡಬ್ಲಿನ್ನನಾದರೂ ಆ ಬಗ್ಗೆ ಕೇವಲ ಅಸಾವಧನಾಗಿರಲಿಲ್ಲ. ಅವನಿಗೆ ತಮ್ಮ ದಂಡಿನೊಳಗಿನ ಆ ಅಸಂತೋಷದ ಪ್ರಕಾರವು ತಿಳಿಯಿತು. ಯಾವ ಉಪಾಯದಿಂದ ಈ ಬೇಗೆಯನ್ನು ಕೂಡಲೆ ನಂದಿಸಬೇಕೆಂದು ಅವನು ಯೋಚಿಸಹತ್ತಿದನು.

ಕಠಿಣವಾದ ಶಿಕ್ಷೆಯನ್ನು ಕೆಲ ಜನರಿಗೆ ಕೊಟ್ಟರೆ ಅದರಿಂದ ಉಳಿದ ದಂಡಾಳು ಗಳು ಎಚ್ಚತ್ತಾರೆಂದು ಅವನಿಗೆ ಒಮ್ಮೆ ಅನಿಸಿತು; ಹಾಗು ಹಾಗೆ ಮಾಡುವ ದನ್ನು ಅವನು ಯೋಚಿಸಿದನು. ಆದರೆ ಹಾಗೆ ಒಮ್ಮೆಲೆ ಶಿಕ್ಷಿಸುವದಕ್ಕಿಂತ ಮೊದಲು ಒಮ್ಮೆ ತನ್ನ ಎಲ್ಲ ದಂಡಾಳುಗಳಿಗೆ ಚನ್ನಾಗಿ ತಿಳಿಹೇಳಬೇಕೆಂದು ನಿರ್ಧ ರಿಸಿ, ಒಂದುದಿನ ಬೆಳಗಿನ ಕವಾಯತು ಆದನಂತರ ಅವನು ತನ್ನ ಎಲ್ಲ ದಂಡಾಳು ಗಳನ್ನು ಒತ್ತಟ್ಟಿಗೆ ಕೂಡಿಸಿ:--ನನ್ನ ಪ್ರಿಯ ಸೈನಿಕರೇ, ನನ್ನ ಕಿವಿಗೆ ಬಿದ್ದಿರುವದೇ ನಂದರೆ, ಪ್ರಜೆಗಳನ್ನು ಸುಲಿಯುವ ನಿಮ್ಮ ಪೂರ್ವಾಪರ ಹಕ್ಕನ್ನು ನಾನು ನಷ್ಟ ಗೊಳಿಸಿದ ಮೂಲಕ ನೀವೆಲ್ಲರೂ ನನ್ನ ಬಗ್ಗೆ ಅಸಂತುಷ್ಟರಾಗಿರುವಿರೆಂದೂ, ನಿಮ್ಮಲ್ಲಿಯ ಕೆಲವರಂತೂ ಅಲ್ಪಾವಧಿಯಲ್ಲೇ ನನ್ನ ಹುಕುಮಿನ ವಿರುದ್ಧವಾಗಿ ನಡೆದು ಕೊಲೆ-ಸುಲಿಗೆಗಳಿಗೆ ಪ್ರವೃತ್ತರಾಗುವವರಿರುವಿರೆಂದೂ ಕೇಳಿದ್ದೇನೆ; ಆದರೆ ದಂಡಾಳುಗಳೇ, ಈ ಡಬ್ಲಿನ್ನನ ಹುಕುಮೆಂದರೆ ಬ್ರಹ್ಮದೇವರ ಅಪ್ಪಣೆ ಯೆಂದೇ ತಿಳಿಯಿರಿ ಅದು ಎಂದಿಗೂ ವಿಮುಖವಾಗಲರಿಯದು. ನಾನು ನಿಮ್ಮನ್ನು ಈ ಕೊಲೆ-ಸುಲಿಗೆಗಳಿಂದ ಪರಾವೃತ್ತವಾಗ ಮಾಡಿದ ಬಗ್ಗೆ ನೀವು ನನಗೆ ಋಣಿಯಾಗತಕ್ಕದ್ದು. ನಿಮಗೆ ಈಗಲೂ ಆ ಕೊಲೆ-ಸುಲಿಗೆಗಳ ಸಲಹೆ ಯನ್ನು ಕೊಡುವವರು ನಿಜವಾದ ವೀರರಲ್ಲ; ನೀಚರೆಂಬದನ್ನು ತಿಳಿದು, ನೀವು ಅವರ ಮಾತಿನಲ್ಲಿ ವಿಶ್ವಾಸವಿಡಬಾರದೆಂದು ನಾನು ನಿಮಗೆ ಹಿತಬುದ್ಧಿಯಿಂದ ತಿಳಿಸುತ್ತೇನೆ. ನಿಮ್ಮ ಆ ಕೊಲೆ-ಸುಲಿಗೆಯ ಪೂರ್ವಾಪರ ಹಕ್ಕು ನಷ್ಟವಾಗು ತ್ತಿರುವ ಬಗ್ಗೆ ನೀವು ದುಃಖಿಸದೆ ಸಂತೋಷವನ್ನೇ ತಾಳಬೇಕು. ಎಲೈ ದಂಡಾ ಳುಗಳೇ, ನಮ್ಮಲ್ಲಿಯ ಯಾವನೊಬ್ಬನ ತಂದೆಯು ಕೊಲೆ-ಸುಲಿಗೆಗಳಂಥಹ ನೀಚವೃತ್ತಿಯನ್ನು ಕೈಕೊಂಡಿದ್ದರೆ ಅವನ ಮಕ್ಕಳಾದ ನಾವೂ ಅದೇ ವೃತ್ತಿ ಯನ್ನು ಧರಿಸಬೇಕೇನು? ನೀವು ಯಾರಿರುವಿರೆಂಬದರ ಕಲ್ಪನೆಯಾದರೂ ನಿಮ ಗಿದೆಯೊ? ನೀವು ರಣಜಿತಸಿಂಹನ ದಂಡಾಳುಗಳಿದ್ದು, ಆತನ ಪ್ರಜೆಗಳ ರಕ್ಷಕ ರಾಗಿರುತ್ತೀರಿ. ರಕ್ಷಕರಾದ ನೀವೇ ಆ ಪಾಪ! ಬಡಪ್ರಜೆಗಳನ್ನು ಭಕ್ಷಿಸಲಾ ರಂಭಿಸಿದರೆ, ನಿಮಗೂ ರಕ್ಕಸರಿಗೂ ಭೇದವೆಲ್ಲಿ ಉಳಿಯುವದು? ಕೊಲೆ ಸುಲಿಗೆ ಗಾರರ ಉಪದ್ರವವು ಪ್ರಜೆಗಳಿಗಾಗದಂತೆ ಅವರನ್ನು ಸಂರಕ್ಷಿಸುವ ಭಾರವು ನಿಮ್ಮೆಲ್ಲರ ಮೇಲೆಯೂ ಇರುತ್ತದೆ. ಆ ಪವಿತ್ರವಾದ ಕರ್ತವ್ಯವನ್ನು ಮರೆತು ನೀವೇ ಅವರನ್ನು ಸುಲಿಯ ತೊಡಗಿದರೆ "ನಮ್ಮನ್ನು ಸಂರಕ್ಷಿಸಿರೆ"ಂದು ಪ್ರಜೆ ಗಳು ಯಾರನ್ನು ಮೊರೆಹೊಗಬೇಕು? ಪ್ರಜೆಗಳ ಸಂರಕ್ಷಣದ ಭಾರವು ಹೇಗೆ

ನಿಮ್ಮ ಮೇಲೆ ಇದೆಯೋ, ಅದರಂತೆಯೇ ನಿಮ್ಮನ್ನು ಸಂರಕ್ಷಿಸುವ ಭಾರವಾದರೂ ಆ ಪ್ರಜೆಗಳ ಮೇಲೆ ಇದ್ದೇ ಇದೆ. ಆ ಪ್ರಜೆಗಳಿಂದ ವಸೂಲಾದ ಕರ ಭಾರದಿಂದಲೇ ನಿಮ್ಮೆಲ್ಲರ ಸಂಬಳಗಳು ಕೊಡಲ್ಪಡುತ್ತವೆ. ಅಂದರೆ ನಮ್ಮ ಮಹಾರಾಜರಿಗಿಂತ ಆ ಪ್ರಜೆಗಳೇ ನಿಮ್ಮ ನಿಜವಾದ ಅನ್ನದಾತೃಗಳು! ನಿಮ್ಮ ಅನ್ನದಾತೃಗಳನ್ನು ಸುಲಿಯುವದೆಂದರೆ ಎಂಥ ಘೋರತರವಾದ ಕರ್ಮವೆಂಬದನ್ನು ನೀವೆಲ್ಲರೂ ಚೆನ್ನಾಗಿ ಆಲೋಚಿಸಿರಿ.

ಸೈನಿಕರೇ, ನೀವೂ ಪ್ರಜೆಗಳೂ ಬೇರೆ ಬೇರೆಯೆಂದು ತಿಳಿದಿರುವಿರೇನು? ನಿಮ್ಮ ಶಿಪಾಯಿಗಳ ಕುಲ-ಗೋತ್ರಗಳು ಬೇರೆ; ಪ್ರಜೆಗಳ ಕುಲ-ಗೋತ್ರಗಳು ಬೇರೆ, ಎಂದು ನಿಮ್ಮ ತಿಳುವಳಿಕೆಯುಂಟೇನು? ನೀವಾದರೂ ಆ ಪ್ರಜೆಗಳಲ್ಲಿಯ ಕೆಲವು ಜನರಿರುತ್ತೀರೆಂಬದನ್ನು ಮರೆಯುವದೆಂದರೆ, ನಿಮ್ಮಲ್ಲಿಯ ಮನುಷ್ಯತ್ವಕ್ಕೇ ಕಲಂಕ ಹಚ್ಚಿದಂತಾಗಿರುತ್ತದೆ. ನೀವು ಮಹಾರಾಜರ ದಂಡಿನಲ್ಲಿ ನೇಪ್ರಡೆ ಹೊಂದುವ ಮೊದಲು ಯಾರಾಗಿದ್ದಿರಿ? ಪ್ರಜೆಗಳೇ ಆಗಿರಲಿಲ್ಲವೇ? ಈ ದಂಡಿನೊಳಗಿನ ನೌಕರಿಯನ್ನು ಕಳಕೊಂಡ ಬಳಿಕ ಇಲ್ಲವೆ ವೃದ್ಧರಾಗಿ ಪೆನ್‌ಶನ್ ಪಡೆದ ಬಳಿಕ ನೀವು ಆಗುವದಾದರೂ ಯಾರು? ಆದ್ದರಿಂದ ನನ್ನ ಪ್ರಿಯ ಸೈನಿಕರೇ, ನೀವೂ ಪ್ರಜೆಗಳೂ ಭಿನ್ನ ಭಿನ್ನರೆಂದು ತಿಳಕೊಳ್ಳಬೇಡಿರಿ. ನಾಲ್ಕು ದಿನಗಳ ವುಟ್ಟಿಗೆ ನೀವು ದಂಡಾಳುಗಳಾದ ಮಾತ್ರಕ್ಕೆ ನಿಮ್ಮ ಬಂಧು ಭಗಿನಿಗಳಾದ ಆ ಪ್ರಜೆಗಳನ್ನು ಸುಲಿಯುವ ಹಕ್ಕು ನಿಮಗೆ ಎಲ್ಲಿಂದ ಹಾಗು ಹೇಗೆ ಪ್ರಾಪ್ತವಾಯಿತು? ಇಂಥ ನಿಮ್ಮ ವೀರತ್ವಕ್ಕೆ ಧಿಕ್ಕಾರವಿರಲಿ! ಯುರೋಪಾದಿ ಪಾಶ್ಚಾತ್ಯ ದೇಶಗಳಲ್ಲಿ ಈ ರೂಢಿಯಿರುವದಿಲ್ಲ. ಯಾವನೊಬ್ಬ ದೊಡ್ಡ ಅಧಿಕಾರಿಗೆ ಅದೇಕೆ, ಅಲ್ಲಿಯ ಪ್ರತ್ಯಕ್ಷ ಸಾರ್ವಭೌಮನಿಗೆ ಕೂಡ ತನ್ನ ಪ್ರಜೆಗಳಿಂದ ಒಂದು ಪೆಂಡೆ ಹುಲ್ಲನ್ನೂ ಪುಕ್ಕಟೆಯಾಗಿ ತಕ್ಕೊಳ್ಳುವ ಅಧಿಕಾರವಿರುವದಿಲ್ಲ. ಆದರಿಂದ ಅಲ್ಲಿಯ ದಂಡಿನ ಶಿಸ್ತು ಚೆನ್ನಾಗಿ ಉಳಿಯುತ್ತದೆ. ಅಲ್ಲಿಯ ದಂಡು ಯಾವುದೊಂದು ಊರ ಹತ್ತರ ಬೀಡು ಬಿಟ್ಟೊಡನೆ ನಾನಾ ಬಗೆಯ ಪದಾರ್ಥಗಳು ಅವರ ಆ ಛಾವಣಿಯಲ್ಲಿ ಮಾರಲಿಕ್ಕೆ ಬರುತ್ತವೆ; ಆದರೆ ಇಲ್ಲಿ-ಈ ಹಿಂದುಸ್ಥಾನದಲ್ಲಿ ಯಾವುದೊಂದು ಊರ ಹತ್ತರ ದಂಡು ಬೀಡು ಬಿಟ್ಟಿತೆಂದರೆ ತೀರಿತು; ಆ ಊರ ವ್ಯಾಪಾರಸ್ಥರು ತಮ್ಮ ಅಂಗಡಿಗಳನ್ನು ಮುಚ್ಚಿಕೊಂಡು ಎತ್ತಕಡೆಗೋ ಮಾಯವಾಗಿ ಬಿಡುತ್ತಾರೆ! ಸೈನಿಕರೇ, ಇದೇ ಏನು, ನಿಮ್ಮ ಹಾಗು ನಿಮ್ಮದೇಶದ ಪ್ರಜೆಗಳ ಪ್ರೇಮದ ದ್ಯೋತಕವು? ಈ ಸಂಗತಿಯು ನಿದರ್ಶನವು

ನಿಮಗೂ ಈಗ ಬರಲಾರಂಭಿಸಿದೆ. ಮೊದಲು ನಮ್ಮ ಭಾವನೆಯಲ್ಲಿ ಯಾವು ದೊಂದು ಜೀನಸೂ ಮಾರಲಿಕ್ಕೆ ದೊರೆಯುತ್ತಿರಲಿಲ್ಲ; ಆದರೆ ನಿಮ್ಮ ಈ ಕೊಲೆ ಸುಲಿಗೆಗಳ ಉಚ್ಚಾಟಣದಿಂದ ನಿಮ್ಮೆದುರಿಗೆ ಈಗ ಬೇಕಾದಂತಹ ಜೀನಸು ಬೇಕಾ ದಷ್ಟು ಮಾರಲಿಕ್ಕೆ ಬರುತ್ತದೆ. ಈ ಪ್ರಾಂತದ ಜನರಿಗೆ ದಂಡಿನ ಶಿಪಾಯಿ ಗಳೆಂದರೆ ಕಳ್ಳರಲ್ಲರೆಂದೂ ಅವರು ಪ್ರಜೆಗಳ ನಿಜವಾದ ಸಂರಕ್ಷಕರೆಂದೂ ಈಗೀಗ ಗೊತ್ತಾಗಹತ್ತಿದೆ. ಆದ್ದರಿಂದ ನನ್ನ ಪ್ರಿಯ ದಂಡಾಳುಗಳೇ, ನಿಮಗೆ ಕಳ್ಳ ರೆಂದೆನಿಸಿಕೊಳ್ಳುವದು ರುಚಿಸುವದೋ—ಪ್ರಜೆಗಳ ಸಂರಕ್ಷಕರೆಂದೆನಿಸಿಕೊಳ್ಳು ವದು ರುಚಿಸುವದೋ ಹೇಳಿರಿ, ಬೇಗನೆ.

ಹೀಗೆ ಡಬ್ಲಿನ್ನನು ಸವಾಲು ಮಾಡುತ್ತಲೇ-"ಸಂರಕ್ಷಕ-ಸಂರಕ್ಷಕ" ಎಂಬ ಶಬ್ದವು ಮೇಘಗರ್ಜನೆಯಂತೆ ಆ ದಂಡಿನಲ್ಲಿ ಪ್ರತಿಧ್ವನಿಗೊಡಹತ್ತಿತು; ಕೂಡಲೆ ಡಬ್ಲಿನ್ನನು:—ಶಾಬಾಸ! ನನ್ನ ದಂಡಾಳುಗಳೇ ಶಾಬಾಸ! ಪ್ರಜೆಗಳೆಂ ದರೆ ನಿಮ್ಮ ಅಣ್ಣ, ಅಪ್ಪ, ಕಕ್ಕ, ಮಾವ ಮುಂತಾದ ಬಂಧು-ಬಾಂಧವರೇ ಆಗಿ ರುತ್ತಾರೆ. ಅವರನ್ನು ಸುಲಿಯುವದರಿಂದ ನಿಮಗೆ ಅದಾವ ಪುರುಷಾರ್ಥವು ಲಭಿಸತಕ್ಕದ್ದಿದೆ? ಸೈನಿಕರೇ, ನಾನು ಇದುವರೆಗೆ ನಿಮಗೆ ಹೇಳತಕ್ಕದ್ದನ್ನು ಹೇಳಿ ಬಿಟ್ಟಿರುತ್ತೇನೆ. ನಿಮ್ಮ ಕಲ್ಯಾಣಕ್ಕಾಗಿ ಏನು ಮಾಡಬೇಕಾಗಿರುವದೋ ಅದನ್ನು ನಾನು ತ್ರಿಕಾಲಗಳಲ್ಲಿಯೂ ತ್ರಿಕರ್ಣಪೂರ್ವಕವಾಗಿಯೂ ಮಾಡುತ್ತೇನೆ. ಇದರಮೇಲೆ ನಿಮ್ಮಲ್ಲಿಯ ಯಾರಾದರೂ ದುಷ್ಟಸಲಹೆಗಾರರಸಲಹೆಗೆ ಕಿವಿಗೊಟ್ಟು ಪ್ರಜೆಗಳ ಒಂದಿಷ್ಟು ಜೀನಸನ್ನೂ ಸುಲಿದರೆ, ಅವರಿಗೆ ಪ್ರಾಣ ದಂಡಣೆಯ ಶಿಕ್ಷೆಯು ತಪ್ಪಲಿಕಿಲ್ಲೆಂಬದನ್ನು ಚೆನ್ನಾಗಿ ನೆನಪಿಟ್ಟುಕೊಳ್ಳಿರಿ.

ಡಬ್ಲಿನ್ನನ ಭಾಷಣದ ಪರಿಣಾಮವು ದಂಡಾಳುಗಳ ಮೇಲೆ ಬಹು ಚೆನ್ನಾಗಿ ಆಯಿತು. ದಂಡಾಳುಗಳಲ್ಲಿಯ ಸುಲಿಗೆಯ ವಿಚಾರವು ಲುಪ್ತವಾಗಿ, ಪ್ರಜಾ ಸಂರಕ್ಷಣದ ಪವಿತ್ರ ಕರ್ತವ್ಯವು ನೆಲೆಯೂರಿತು. ಅದರಿಂದ ಅವರೆಲ್ಲರಲ್ಲಿ ಸ್ವದೇಶಪ್ರೇಮವು ಜಾಗೃತವಾಯಿತು.

ಸೈನಿಕರಿಗೆ ಅನ್ನಸಾಮಗ್ರಿಯ ಹಾಗು ಉಳಿದ ಜೀನಸುಗಳ ಕೊರತೆ ಯುಂಟಾಗಬಾರದೆಂದು ಡಬ್ಲಿನ್ನನು ಕೋಟಕಾಂಗ್ರಾಕ್ಕೆ ಹೋಗುವ ದಾರಿಯೊ ಳಗೆ ತನ್ನ ದಂಡು ಬೀಡುಬಿಡಬಹುದಾದ ಊರ ಗ್ರಾಮಸ್ಥರಿಗೆ ಮೊದಲೇ ಪತ್ರ ಕಳಿಸಿ ತಿಳಿಸಿದ್ದೇನಂದರೆ:—ನಮ್ಮ ದಂಡು ಎಲ್ಲೆಲ್ಲಿ ಬೀಡು ಬಿಡುವದೋ ಅಲ್ಲಲ್ಲಿ ಆಊರ ವ್ಯಾಪಾರಸ್ಥರೆಲ್ಲರೂ ತಮ್ಮತಮ್ಮ ಅಂಗಡಿಗಳನ್ನು ಹೂಡಿ ಸಜ್ಜಾಗಿರಬೇಕು,

ವ್ಯಾಪಾರಸ್ಥರು ದಂಡಾಳುಗಳಿಂದ ಯೋಗ್ಯ ಬೆಲೆ ಇಸಕೊಂಡು ಅವರಿಗೆ ಬೇಕಾದ ಪ್ರತಿಯೊಂದು ಜೀನಸನ್ನು ಮಾರತಕ್ಕದ್ದು. ಯಾವನು ಬೆಲೆ ಕೊಡದೆ ಜೀನಸನ್ನೊಯ್ಯುವನೋ, ಅವನ ಮಾಹಿತಿಯನ್ನು ನಮಗೆ ಕೊಡತಕ್ಕದ್ದು. ಅಂದರೆ ಅವನು ಒಯ್ದ ಸಾಮಾನಿನ ಬೆಲೆಯು ನಮ್ಮ ಸರಕಾರೀ ಖಜೀನೆಯಿಂದ ಕೊಡಲಾಗುವದು. ಇದಕ್ಕೆ ವಿರುದ್ಧವಾಗಿ ಯಾವ ಊರ ವ್ಯಾಪಾರಸ್ಥರಾದರೂ ಅಂಗಡಿಗಳನ್ನು ಹೂಡದಿದ್ದರೆ, ನಮ್ಮ ಶಿಪಾಯಿಗಳ ಉದರನಿರ್ವಾಹಕ್ಕೆಂದು ನಿರುಪಾಯದಿಂದ ಆ ಊರ ಅಂಗಡಿಗಳನ್ನು ಸುಲಿಯಬೇಕಾದೀತು.

ಡಬ್ಲಿನ್ನನ ಈ ವಿಚಿತ್ರ ಅಂದರೆ ಆ ಕಾಲಕ್ಕೆ ಪ್ರಚಾರದಲ್ಲಿರದ ಹುಕುಮನ್ನು ಕಂಡು ಮೊದಮೊದಲಿಗೆ ಒಂದೆರಡು ಊರುಗಳಲ್ಲಿಯ ವ್ಯಾಪಾರಸ್ಥರು ನಿರುಪಾಯದಿಂದ ಅಂಜುತ್ತಲೆ ತಮ್ಮ ಅಂಗಡಿಗಳನ್ನು ಹೂಡಿದರು. ಆ ಡಬ್ಲಿನ್ನನ ದಂಡಿನ ಶಿಸ್ತನ್ನು ಕಂಡು ಬರಬರುತ್ತ ಆ ಮುಂದಿನ ಊರ ವ್ಯಾಪಾರಸ್ಥರು ನಿರ್ಧಾಸ್ತರಾಗಿ ಅಂಗಡಿಗಳನ್ನು ತೆರೆದು ದಂಡಿನ ಜನರೊಡನೆ ವ್ಯಾಪಾರ ಮಾಡಲಾರಂಭಿಸಿದರು. ಆ ಹೊಸಪದ್ಧತಿಯು ಮೂಲಕ ಅತ್ತಕಡೆಯ ಜನರೆಲ್ಲರೂ ಡಬ್ಲಿನ್ನನ ಕೀತಿಯನ್ನು ಹಾಡಿಹರಸಹತ್ತಿದರು. ಆ ಸುದ್ದಿಯು ಕರ್ಣೋಪಕರ್ಣವಾಗಿ ಅತ್ತ ಉತ್ತರದಲ್ಲಿ ಕೋಟಕಾಂಗ್ರಾದ ವರೆಗೂ, ಇತ್ತ ದಕ್ಷಿಣದಲ್ಲಿ ಲಾಹೋರದ ವರೆಗೂ ಹಬ್ಬಿತು. ಅದು ರಣಜಿತಸಿಂಹನಿಗೆ ತಿಳಿಯಲು, ಅವನು ಮನಸ್ಸಿನಲ್ಲಿ ಅತ್ಯಂತ ಆಹ್ಲಾದಗೊಂಡನು!

ಡಬ್ಲಿನ್ನನ ಸನ್ಮಾನದಿಂದ ಅವನ ಹಿತಚಿಂತಕರಿಗೆ ಎಷ್ಟು ಸಮಾಧಾನವಾಗುತಿತ್ತೋ ಅದಕ್ಕೂ ಹೆಚ್ಚು ಅಸಮಾಧಾನವು ಅವನ ವೈರಿಗಳಿಗೆ ಆಗಲಾರಂಭಿಸಿತು. ಡಬ್ಲಿನ್ನನ ಮುಖ್ಯವಾದ ವೈರಿಯೆಂದರೆ ನಂದಸಿಂಹನೇ ಆಗಿದ್ದು, ಅವನು ಡಬ್ಲಿನ್ನನ ದಂಡಿನಲ್ಲಿಯೇ ಸೇರ್ಪಡೆಹೊಂದಿ, ಆತನ ನಾಶದ ಸಮಯವನ್ನು ನಿರೀಕ್ಷಿಸುತ್ತಿದ್ದನು. ಡಬ್ಲಿನ್ನನ ಸೈನ್ಯವು ಮಜಲಿನ ಮೇಲೆ ಮಜಲು ಮಾಡುತ್ತ ಕೋಟಕಾಂಗ್ರಾದ ಸಮೀಪಕ್ಕೆ ಹೋಯಿತು. ಇನ್ನು ಮೂರು ದಿನಗಳಲ್ಲೇ ಅವರು ಆ ಕೋಟಕಾಂಗ್ರಾದ ದುರ್ಗವನ್ನು ಸೇರತಕ್ಕವರು. ತನ್ನ ತಂತ್ರವು ದಾರಿಯಲ್ಲಿ ಸಾಧಿಸಿದರೇ ಸಾಧಿಸಬೇಕು; ದುರ್ಗಕ್ಕೆ ಹೋದ ಬಳಿಕ ಸಾಧಿಸದೆಂಬದನ್ನು ಅರಿತ ನಂದಸಿಂಹನು ಮನಸ್ಸಿನಲ್ಲಿ ಬಹಳ ಚಡಪಡಿಸಲಾರಂಭಿಸಿದನು. ಆಗ ಬೇಸಿಗೆಯ ಕಾಲವು. ಅದರಿಂದ ಡಬ್ಲಿನ್ನನು ತನ್ನ ದಂಡನ್ನು ಬೆಳಗಿನ ನಾಲ್ಕಕ್ಕೆ ಛಾವಣಿಯಿಂದ ಬಿಡಿಸಿ ಮಾರ್ಗಕ್ರಮಣಕ್ಕೆ ಹಚ್ಚಿ, ಮಧ್ಯಾಹ್ನದ ಹನ್ನೆ

ರಡಕ್ಕೆ ಯಾವುದೊಂದು ಪ್ರಶಸ್ತ್ರಾದ ಸ್ಥಳದಲ್ಲಿ ಬೀಡುಬಿಡಿಸುವ ಪರಿಪಾಠವನ್ನಿಟ್ಟಿದ್ದನು. ಮಧ್ಯಾಹ್ನದಲ್ಲಿ ದಾರಿ ನಡೆಯುವ ತೊಂದರೆಯನ್ನು ದಂಡಾಳುಗಳಿಗೆ ಕೊಡುತ್ತಿರಲಿಲ್ಲ. ಸಂಜೆಯು ಐದರಿಂದ ಆರರ ವರೆಗೆ ಕವಾಯತು ಮಾಡಿದರೆಂದರೆ ದಂಡಾಳುಗಳ ಕೆಲಸವು ತೀರಿಹೋಗುತ್ತಿತ್ತು. ಉಳಿದ ವೇಳೆಯನ್ನು ಅವರು ತಮ್ಮ ಅಡಿಗೆ-ಊಟ-ವಿಶ್ರಾಂತಿ-ಆಟ-ನೋಟ ಮುಂತಾದವುಗಳಿಗೆ ಬೇಕಾದ ಹಾಗೆ ವಿನಿಯೋಗಿಸಿಕೊಳ್ಳಬಹುದಾಗಿತ್ತು.

ಡಬ್ಲಿನ್ನನು ಪ್ರತಿನಿತ್ಯ ಸಂಜೆಯು ಆರುಗಂಟೆಗೆ ಬೇಟೆಗಾಗಿ ಸುತ್ತಲಿನ ಸಮೀಪದ ಕಾಡಿಗೆ ಹೋಗುತ್ತಿದ್ದನು. ಡಬ್ಲಿನ್ನನ ಆ ಪರಿಪಾಠವನ್ನರಿತ ನಂದಸಿಂಹನು ಇದೇ ಸಮಯವು ತನ್ನ ಸ್ವೀಕೃತಕಾರ್ಯಕ್ಕೆ ತಕ್ಕದ್ದೆಂದು ಗೊತ್ತುಮಾಡಿಕೊಂಡನು. ನಂದಸಿಂಹನು ಇತ್ತೀಚೆಗೆ ಮಾಯಾವಿನಮ್ರಭಾವದಿಂದ ಡಬ್ಲಿನ್ನನೊಡನೆ ನಡೆಕೊಳ್ಳುತ್ತಿದ್ದುದರಿಂದ ಒಮ್ಮೊಮ್ಮೆ ಡಬ್ಲಿನ್ನನಿಗೆ ಇವನು ತನ್ನ ಪೂರ್ವಕೃತ ದೋಷದ ಪಶ್ಚಾತ್ತಾಪದಿಂದಲೇ ಹೀಗೆ ಮೆತ್ತಗಾಗಿರುವನೆಂದು ತಿಳಕೊಳ್ಳುತ್ತಿದ್ದನು; ಆದರೆ ಸರಳ ಪ್ರಕೃತಿಯ ಡಬ್ಲಿನ್ನನ ಆ ಭ್ರಮವನ್ನು ಅವನ ಅತ್ಯಂತ ವಿಶ್ವಾಸುಕರಾದ ಒಬ್ಬಿಬ್ಬ ಶರೀರ ಸಂರಕ್ಷಕರು ಆಗಾಗ್ಗೆ ನಿವಾರಿಸುತ್ತಿದ್ದರು. ಭುಕನನೆಂಬ ಹೆಸರಿನ ಕೀಳುಜಾತಿಯ ಆತನ ಶರೀರ ರಕ್ಷಕನು ಹಗಲಿರುಳು ಕಣ್ಣಲ್ಲಿ ಎಣ್ಣೆಹಾಕಿಕೊಂಡು ನಂದಸಿಂಹನ ಉಪಟಳವು ಅವನಿಗಾಗದಂತೆ ನೋಡಿಕೊಳ್ಳುತ್ತಿದ್ದನು. ಭುಕನನು ಹೀನಜಾತಿಯವನಾಗಿದ್ದರೂ, ನಿರಕ್ಷರಕುಕ್ಷಿಯಾಗಿದ್ದರೂ, ಯಾವನೊಬ್ಬನ ಮೋರೆ ನೋಡುತ್ತಲೆ ಇವನು ಎಂಥ ಸ್ವಭಾವದವನೆಂಬದನ್ನು ಕೂಡಲೆ ತಿಳಕೊಳ್ಳುವ ಕಲೆಯು ಅವನಲ್ಲಿ ಹುಟ್ಟಾ ಪ್ರಾಪ್ತವಾಗಿದ್ದಿತು. ಆದರಿಂದಲೇ ನಂದಸಿಂಹನು ಇತ್ತೀಚೆಗೆ ತೋರಿಕೆಯಲ್ಲಿ ಎಷ್ಟು ಸೌಮ್ಯನಾಗಿ ತೋರಹತ್ತಿದ್ದರೂ ಇವನು ಮಹಾನೀಚನೆಂದು ಭುಕನನು ನಿಶ್ಚಯಿಸಿಕೊಂಡಿದ್ದನು. ಡಬ್ಲಿನ್ನನು ಭುಕನನ ನುಡಿಗಳನ್ನು ಕೇಳಿ ನಗುತ್ತಿದ್ದನೇ ಹೊರತು, ನಂದಸಿಂಹನಲ್ಲಿ ಅಷ್ಟೊಂದು ಅವಿಶ್ವಾಸವನ್ನು ತಾಳುತ್ತಿರಲಿಲ್ಲ.

ಒಂದು ದಿನ ಸಾಯಂಕಾಲದಲ್ಲಿ ಡಬ್ಲಿನ್ನನು ತನ್ನ ಪರಿಪಾಠದಂತೆ ತಾನೊಬ್ಬನೇ ಬೇಟೆಗೆ ಹೊರಟನು. ಇಲ್ಲಿನ್ನಲಿಕ್ಕೆ ಅವನೊಡನೆ ಒಂದು ಡಬಲ್ ಬಾರಿನ ಬಂದೂಕು, ಕೆಲ ಕಾಡತೂಸುಗಳು ಹಾಗು ಒಂದು ನಿಲುವಿಕೆಯುಳ್ಳ ಭೀಕರವಾದ ನಾಯಿ ಇಷ್ಟು ಸರಂಜಾಮುಗಳು ಅವನೊಡನೆ ಇದ್ದವು. ಇಷ್ಟು

ಸರಂಜಾಮವು ತನ್ನ ಬೇಟೆಗೆ ಸಾಕೆಂದು ಅವನಿಗೆ ಅನಿಸುತ್ತಿದ್ದದರಿಂದ ಅವನು ತನ್ನೊಡನೆ ಬೇರೆ ಯಾರನ್ನೂ ಬರಗೊಡುತ್ತಿರಲಿಲ್ಲ. ಆ ದಿನ ಬನ್ನೂ, ಧನ್ನೂ, ಅಲಿವರ್ದಿಖಾನ ಹಾಗು ಭುಕನ ಇವರು ಆತನ ಡೇರೆಯ ಹೊರಗಡೆಗೆ ನಿಂತು ಅವನಿಗೆ ಸಲಾಮು ಮಾಡಿ, ಸುಮ್ಮನೆ ನಿಂತುಕೊಂಡರು. ಆಗ ಅವನು:—ನೀವು ಏನನ್ನೋ ತಿಳಿಸುವ ಸಲುವಾಗಿ ನನ್ನೆಡೆಗೆ ಬಂದಂತೆ ತೋರುತ್ತದೆ. ಆದರೆ ನಾನು ಈಗ ಬೇಟೆಗೆ ಹೊರಟಿರುವೆನಾದ್ದರಿಂದ ಸಮಯವಿಲ್ಲ. ಬೇಟೆಯಿಂದ ಮರಳಿ ಬಂದ ಬಳಿಕ ರಾತ್ರಿ ನಿಮ್ಮ ಸಂಗತಿಯನ್ನು ಕೇಳಿಕೊಳ್ಳುವೆನೆಂದನು.

ಆಗ ಅಲಿವರ್ದಿಖಾನನು ಮುಂದೆ ಬಂದು:—ಹುಜೂರ, ನಾವು ತಿಳಿಸತಕ್ಕ ಸಂಗತಿಯು ಹೆಚ್ಚಾಗಿರುವದಿಲ್ಲ. ಅದನ್ನು ಈಗಲೇ ತಿಳಿಸುವದು ಅತ್ಯವಶ್ಯವಿದೆ. ಮೇಲಾಗಿ ಅದನ್ನು ಕೇಳಿಕೊಳ್ಳಲಿಕ್ಕೆ ಹುಜೂರರವರಿಗೆ ಹೆಚ್ಚು ಅವಕಾಶವೂ ಹಿಡಿಯಲಾರದು.

ಬನ್ನೂ ಎಂಬ ತೀರ ವಿಶ್ವಾಸದ ಸೇವಕನು ತನ್ನ ಕಣ್ಣಲ್ಲಿ ನೀರುತಂದು:—ಹುಜೂರ, ತಮ್ಮ ಹೊರತು ನಮ್ಮನ್ನು ಪ್ರೇಮದಿಂದ ಸಲಹುವವರಾರಿದ್ದಾರೆ? ತಾವೇ ನಮ್ಮ ತಾಯಿ-ತಂದೆಗಳು. ಆದುದರಿಂದ ತಮ್ಮ ವಿಷಯವಾಗಿ ಕೇಳಿದ ಯಾವುದೊಂದು ಅಮಂಗಲ ಸಂಗತಿಯನ್ನು ತಮಗೆ ಸಕಾಲಕ್ಕೆ ತಿಳಿಸದಿದ್ದರೆ ನಮಗೆ ಸಮಾಧಾನವಾದರೂ ಹೇಗಾಗಬೇಕು?

ಆಗ ಡಬ್ಲಿನ್ನನು ಆ ನಾಲ್ಕು ಜನ ತನ್ನ ಶರೀರರಕ್ಷಕರ ಕಡೆಗೂ ಸಾಶಂಕಿತನಾಗಿ ನೋಡಿದನು; ಹಾಗು ನೀವು ಏನನ್ನು ತಿಳಿಸಬೇಕೆಂದಿರುವಿರೋ ಅದನ್ನು ಬೇಗನೆ ತಿಳಿಸಿರೆಂದು ಅಂದನು.

ಕೂಡಲೆ ಅಲಿವರ್ದಿಖಾನನು ಡಬ್ಲಿನ್ನನಿಗೆ ಮೆಲ್ಲ ಮೆಲ್ಲನೆ ಏನನ್ನೋ ತಿಳಿಸಿದನು. ಅದನ್ನು ಕೇಳಿ ಡಬ್ಲಿನ್ನನು ಮುಗುಳು ನಗೆ ನಗುತ್ತ:—ನೀವು ಸುಮ್ಮ ಸುಮ್ಮನೆ ಸಂಶಯಕ್ಕೊಳಗಾದಂತೆ ತೋರುತ್ತದೆ. ನನ್ನ ಈ ತುಪಾಕಿ, ಕುದುರೆ ಹಾಗು ಈ ನಾಯಿ ಇವುಗಳು ನನ್ನ ಬಳಿಯಲ್ಲಿರುವ ವರೆಗೆ ನನ್ನ ಅಹಿತವನ್ನು ಬಯಸಲಿಕ್ಕೆ ಆದಾರು ಸಮರ್ಥರಾದಾರು? ನಮ್ಮ ಭಾವನೆಯಲ್ಲಿ ನಿಮ್ಮ ಅಂಬೋಣದಂತೆ ಯಾವ ಅಲ್ಪ ಜನ ನೀಚರಿರುವರೋ, ಅವರಿಗಿಂತ ನೂರಾರು ಪಾಲು ಹೆಚ್ಚು ಛಲೋ ಜನರಿರುತ್ತಾರೆ. ಅದರಿಂದ ಇಲ್ಲಿ ಅಂಥ ಫಿತೂರಿ-ಗಿತೂರಿಗಳೇನಾದರೂ ಆದರೆ ಈ ಜನರೆಲ್ಲರೂ ಸುಮ್ಮನೆ ಕೂಡ್ರುವರೇನು? ನನಗಂತೂ ಹೀಗೆ ಖಾತ್ರಿಯಿದೆ, ಬಹು ಜನರು ನನ್ನ ಪಕ್ಷವನ್ನು ವಹಿಸಿ ಶತ್ರು

ಗಳನ್ನು ಸಂಹರಿಸಿಬಿಟ್ಟಾರು.

ಹುಜೂರ, ತಮ್ಮ ತಿಳುವಳಿಕೆಯು ಯಥಾರ್ಥವಾದದ್ದು. ಪ್ರತ್ಯಕ್ಷ ಯುದ್ಧದ ಪ್ರಸಂಗವೇ ಬಂದರೆ, ಹುಜೂರರ ಅನುಮಾನವು ದಿಟವಾಗಬಹುದು. ಆದರೆ ಹುಜೂರ, ತಮ್ಮ ಶತ್ರುಗಳು ಹಾಗೆ ಬಹಿರಂಗದ ಯುದ್ಧಕ್ಕೆ ನಿಲ್ಲುವಷ್ಟು ಮೂರ್ಖರಿರುವರೇನು? ಅವರು ಯಾವಾಗಲೂ ತಮ್ಮ ಅನಿಷ್ಟವನ್ನು ಗುಪ್ತ ಮಾರ್ಗದಿಂದಲೇ ಮಾಡತಕ್ಕವರು. ತಾವು ಬೇಟೆಯಿಂದ ಮರಳಿ ಬರುವಾಗ ಸಾಯಂಕಾಲದ ಕತ್ತಲೆ ಗವಿಯುವದು ಸ್ವಾಭಾವಿಕವಾಗಿದೆ; ಹಾಗು ಅಂಥ ಸುಸಂಧಿಯೋ ಶತ್ರುಗಳ ಗುಪ್ತ ಕಾರ್ಯಕ್ಕೆ ತಕ್ಕದ್ದಾಗಿರುತ್ತದೆ. ಆದುದರಿಂದ ನಮ್ಮ ಹುಜೂರರವರು ಇಂದು ಬೇಟೆಗೆ ಹೋಗಬಾರದು; ಹೋದರೂ ನಮ್ಮೆಲ್ಲರನ್ನು ಸಂಗಡ ಕರಕೊಂಡೇ ಹೋಗಬೇಕು. ಅಂದರೆ ನಮ್ಮ ಈಗಿನ ಮಾತಿನ ಅನುಭವವು ನಮ್ಮ ಹುಜೂರರವರಿಗೆ ಬಾರದೆ ಇರದು.

ನಿರುಪಾಯನಾಗಿ ಡಬ್ಲಿನ್ನನು ಅವರ ಮಾತಿಗೆ ತಲೆದೂಗಿದನು. ಅಂದಿನ ಅವನ ದಂಡಿನ ಬೀಡು ಒಳ್ಳೇ ಗುಡ್ಡಗಾಡುಪ್ರದೇಶದಲ್ಲಿ ಬಿಟ್ಟಿತ್ತಾದ್ದರಿಂದ ಸುತ್ತಲು ನಾಲ್ಕಾರು ಹರದಾರಿಗಳ ವರೆಗೆ ಗುಡ್ಡಗಳೂ, ಗಿರಿ-ಗಂಹ್ವರಗಳೂ, ದರಿ-ಕಂದರಗಳೂ, ಗಿಡ-ಗಂಟಿಗಳೂ ಹಬ್ಬಿದ್ದವು. ಡಬ್ಲಿನ್ನನಿಗೆ ಅಂಥ ಗುಡ್ಡಗಾಡು ಪ್ರದೇಶದಲ್ಲಿ ತಿರುಗಾಡುವ ಹಂಬಲವು ಬಹಳವಿತ್ತು. ಆದರಿಂದ ಅವನು ಅಂದು ತನ್ನ ಸಂಗಡಿಗರೊಡನೆ ದಂಡಿನ ಛಾವಣಿಯಿಂದ ೩-೪ ಹರದಾರಿಗಳ ಮೇಲೆ ಬೇಟೆಗಾಗಿ ಹೋದನು. ಅಂದು ಅವರಿಗೆ ಸಾಕಷ್ಟು ಬೇಟೆಗಳೂ ದೊರೆತವು. ಮರಳಿ ಬರುವಾಗ್ಗೆ ದಿನಕ್ಕಿಂತ ಹೆಚ್ಚು ಮಬ್ಬುಗವಿದದ್ದರಿಂದ ಮಾರ್ಗವು ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ಡಬ್ಲಿನ್ನನು ಎಲ್ಲರಕ್ಕೂ ಮುಂದೆ ನಡೆದಿದ್ದು, ಅವನ ಹಿಂದೆ ಬನ್ನೂ ಹಾಗು ಅಲಿವರ್ದಿಖಾನರು ಸಾಗಿದ್ದರು. ಇಷ್ಟರಲ್ಲಿ ಆ ಅರಣ್ಯದ ಮಧ್ಯದೊಳಗಿನ ಒಂದು ವಿಶಾಲವಾದ ಗಿಡದ ಹೊದರಿನೊಳಗೆ ಈ ವರೆಗೆ ಅಡಗಿಕೊಂಡು ಕುಳಿತಿದ್ದ ಒಬ್ಬ ವ್ಯಕ್ತಿಯು ತಟ್ಟನೆ ಮುಂದೆ ಡಬ್ಲಿನ್ನನ ಕುದುರೆಯನ್ನು ಅಡ್ಡಗಟ್ಟಿಕೊಂಡು ನಿಂತನು; ಹಾಗು ಡಬ್ಲಿನ್ನನಿಗೆ ಬೊಗ್ಗಿ ಬೊಗ್ಗಿ ಮುಜುರೆ ಮಾಡಿದನು. ಆಗ ತೀರ ಕತ್ತಲೆಗವಿದಿದ್ದರೂ ಡಬ್ಲಿನ್ನನಿಗೆ ಅವನ ಗುರುತು ಹತ್ತಿದಂತಾಗಲು, ಅವನು:—ಎಲೇ, ನಿನ್ನನ್ನು ಈ ಮೊದಲೆಂದೋ ಎಲ್ಲಿಯೋ ನೋಡಿದಂತಾಗಿರುತ್ತದೆ. ಎಲ್ಲಿ, ಯಾವಾಗ, ಎಂಬದು ಮಾತ್ರ ನೆನಪಿಗೆ ಬರಲೊಲ್ಲದು; ಎಂದೆನ್ನಲು,

ಬನ್ನೂನು ತುಸ ಮುಂದೆ ಒಂದು:—ಹುಜೂರ, ಇವನಲ್ಲವೇ? ಇವನು ಲಾಹೋರದ ಆ ಮಾವಿನ ತೋಪಿನೊಳಗಿಂದ ತಮ್ಮ ಮೇಲೆ ಬಾಣವನ್ನು ಬಿಟ್ಟಿದ್ದಂಥ ಜಹರಸಿಂಹನು.

ಜಹರಸಿಂಹನು ಡಬ್ಲಿನ್ನನಿಗೆ ಮತ್ತೆ ವಿನಯದಿಂದ ಮುಜುರೆ ಮಾಡುತ್ತ:- ಹುಜೂರ, ಅಹುದು ನಾನೇ ಆ ಜಹರಸಿಂಹನು. ನನ್ನ ಪ್ರಾಣದಾತೃವಿಗೆ ಸಹಾಯ ಮಾಡಬೇಕೆಂದು ನಾನು ಬೇಕಂತಲೇ ಆ ನೀಚ ನಂದಸಿಂಹನ ದಂಡಿನಲ್ಲಿ ಸೇರ್ಪಡೆ ಹೊಂದಿರುತ್ತೇನೆ. ಹುಜೂರ, ಇಂದು ತಾವು ಒಳ್ಳೇ ದಕ್ಷತೆಯಿಂದ ಛಾವಣಿಗೆ ಹೋಗತಕ್ಕದ್ದು. ಪ್ರತಿಯೊಂದು ಹೆಜ್ಜೆಯನ್ನೂ ಒಳ್ಳೇ ವಿಚಾರ ಪೂರ್ವಕವಾಗಿ ಕಿತ್ತಿಡತಕ್ಕದ್ದು. ಯಾಕಂದರೆ, ಇಂದು ನಮ್ಮ ಹುಜೂರರವರ ಮೇಲೆ ಯಾವುದೊಂದು ಬಗೆಯ ಪ್ರಾಣಸಂಕಟವು ಒದಗಬಹುದಾಗಿರುತ್ತದೆ. ಅದನ್ನು ಮುಂಗಡ ಹುಜೂರರವರಿಗೆ ಸೂಚಿಸುವದಕ್ಕಾಗಿಯೇ ನಾನು ಛಾವಣಿಯಿಂದ ಈಗ ಇಷ್ಟು ದೂರ ಇಲ್ಲಿಗೆ ಬಂದಿರುತ್ತೇನೆ. ನಾನು ಇನ್ನು ಇಲ್ಲಿ ನಿಲ್ಲುವದರಿಂದ ನಮ್ಮ ಹುಜೂರರವರಿಗೆ ವಿಶೇಷ ಪ್ರಯೋಜನವಾಗದು. ನಾನಿನ್ನು ಬೇರೆ ಮಾರ್ಗದಿಂದ ತೆರಳುತ್ತೇನೆ, ಎಂದವನೇ ಆ ಜಹರಸಿಂಹನು ಆ ಕಾಡಿನಲ್ಲಿ ಮಾಯವಾದನು.

ಬಳಿಕ ಬನ್ನೂ ಹಾಗು ಅಲಿವರ್ದಿಖಾನ ಇವರ ಆಗ್ರಹದ ಮೇರೆಗೆ ಈ ವರೆಗೆ ಎಲ್ಲಕ್ಕೂ ಮುಂದಿದ್ದ ಡಬ್ಲಿನ್ನನು ನಡುವೆ ಆದನು. ಅವರಿಗೆ ಅಂದು ಹೆಚ್ಚಾಗಿ ಬೇಟೆಗಳು ಲಭಿಸಿದ್ದದರಿಂದ ಆ ಬೇಟೆಯ ಒಜ್ಜೆಗಳನ್ನು ಹೊತ್ತ ಅವರೆಲ್ಲರ ಕುದುರೆಗಳು ದಣಿದು ಸಾವಕಾಶವಾಗಿ ನಡೆಯುತ್ತಿದ್ದವು. ಆ ದಾರಿಯು ಅಪರಿಚಯದ್ದಾಗಿತ್ತಲ್ಲದೆ, ಆಕುಂಚಿತವೂ ಆಗಿತ್ತು. ದಾರಿಯ ಒಂದು ಮಗ್ಗಲಿಗೆ ಬಹು ಎತ್ತರವಾದ ಗುಡ್ಡವಿದ್ದು, ಇನ್ನೊಂದು ಮಗ್ಗಲಿಗೆ ಆಳವಾದ ದರಿಯಿದ್ದಿತು. ಅಂಥ ಇಕ್ಕಟ್ಟಿನ ದಾರಿಯಲ್ಲಿ ಕುದುರೆಗಳನ್ನು ವೇಗದಿಂದ ನಡಿಸುವದು ಶಕ್ಯವಿರಲಿಲ್ಲ. ಅದರಿಂದ ಅವರು ಆಗ ಸಾವಕಾಶವಾಗಿಯೇ ಸಾಗಿದ್ದರು.

ಆದರೆ ಆಗಿನ ಆ ಭಾವೀ ಸಂಕಟದ ಸೂಚನೆಯ ಮೂಲಕ ಡಬ್ಲಿನ್ನನ ಹೊರತು ಮಿಕ್ಕವರೆಲ್ಲರೂ ಭೀತಿಗ್ರಸ್ತರಾಗಿದ್ದರು. ಡಬ್ಲಿನ್ನನು ಮಾತ್ರ ನಿರ್ಭೀತಿಯಿಂದಲೂ ತನ್ನ ಸ್ವಾಭಾವಿಕವಾದ ಮನೋಲ್ಲಾಸದಿಂದಲೂ ದಾರಿ ಕ್ರಮಿಸುತ್ತಿದ್ದನು. ತಾವು ಎಲ್ಲಿಯ ವರೆಗೆ ಸನ್ಮಾರ್ಗದಿಂದ ನಡೆಯುವೆವೋ ಅಲ್ಲಿಯ ವರೆಗೆ ತನ್ನ ಮೇಲೆ ಬರಬಹುದಾದ ಎಲ್ಲ ಸಂಕಟಗಳನ್ನು ದೇವರು ಸಹಜವಾಗಿ

ಪರಿಹರಿಸುವನೆಂದು ಡಬ್ಲಿನ್ನನ ವಿಶ್ವಾಸವಿದ್ದಿತು. ಅಂತೇ ಅವನು ಎಲ್ಲರಿಗಿಂತಲೂ ಅಷ್ಟು ನಿಷ್ಕಾಳಜಿಯಿಂದ ನಡೆದಿದ್ದನು. ಅವರು ನಡೆದಿದ್ದ ಆ ದಾರಿಯಲ್ಲಿ ಎರಡು ಹಳ್ಳಗಳು ಹತ್ತಿದವು. ಅವುಗಳಲ್ಲಿ ಹೆಚ್ಚಾಗಿ ನೀರಿರಲಿಲ್ಲ; ಆದರೆ ಅವು ಗುಡ್ಡದ ಮೇಲಿಂದ ಹರಿದು ಬಂದಿದ್ದವಾದ್ದರಿಂದ ಅವುಗಳಲ್ಲಿ ಹೆಚ್ಚಾಗಿ ನೆಳವಿದ್ದಿತು. ಮೊದಲನೇ ಸಾಧಾರಣವಾದ ಹಳ್ಳವನ್ನು ಎಲ್ಲರೂ ನಿರಾತಂಕವಾಗಿ ದಾಟಿದರು. ಅದನ್ನು ದಾಟಿದ ಬಳಿಕ ತಾವು ಇಂದಿನ ಒಂದು ಕುತ್ತಿನೊಳಗಿಂದಂತೂ ಪಾರಾದೆವೆಂದು ಡಬ್ಲಿನ್ನನ ಸಂಗಡಿಗರಿಗೆ ಅನಿಸಿತು. ಇನ್ನು ತಮ್ಮ ಮೇಲೆ ಏನಾದರೂ ಸಂಕಟವು ಪ್ರಾಪ್ತವಾದರೆ, ಆ ಎರಡನೇ ಹಳ್ಳದಲ್ಲಿಯೇ ಬರಬಹುದಾಗಿದೆಯೆಂದು ತರ್ಕಿಸುತ್ತ ಅವರು ನಡೆದಿರಲು, ಆ ಎರಡನೇ ಹಳ್ಳವೂ ಬಂತು. ಆ ಹಳ್ಳದ ಎರಡೂ ಬದಿಗಳಲ್ಲಿ ಬಹು ಎತ್ತರವಾದ ದಿನ್ನೆಗಳಿದ್ದು, ನೀರೂ ತುಸ ಆಳವಾಗಿತ್ತು. ಮೇಲಾಗಿ ಎದುರಿಗಿನ ಸುಗ್ಗಲಿನ ಏರು ಕಡಿದಾಗಿತ್ತಾದ್ದರಿಂದ ಕುದುರೆಯು ಮೇಲಿಂದ ಇಳಿದೇ ಹೋಗಬೇಕಾಗುತ್ತಿತ್ತು. ಅದರಿಂದ ಹಳ್ಳದ ಹತ್ತರ ಬಂದ ಕೂಡಲೆ ಎಲ್ಲರೂ ಸೂಕ್ಷ್ಮದೃಷ್ಟಿಯಿಂದ ಸುತ್ತಲೂ ನೋಡಿದರು. ಆದರೆ ಆಗ ಅಲ್ಲಿ ಯಾರಿಗೂ ಯಾವ ಸಂಶಯಾಸ್ಪದವಾದ ದೃಶ್ಯವೂ ಕಾಣಿಸಲಿಲ್ಲ. ಆದರೂ ತಮ್ಮ ವೈರಿಗಳು ಈ ಭೀಕರವಾದ ಕಾರ್ಗತ್ತಲೆ, ಅರಣ್ಯ ಹಾಗು ಈ ಇಕ್ಕಟ್ಟಿನ ಸ್ಥಳ ಇವುಗಳ ಲಾಭವನ್ನು ಮಾಡಿಕೊಳ್ಳದಿರಲಾರರೆಂದು ಅವರಲ್ಲಿಯ ಪ್ರತಿಯೊಬ್ಬನ ಮನಸ್ಸಿನಲ್ಲಿಯೂ ಕಟಿಯುತ್ತಿತ್ತು. ಆ ಅಸಮಾಧಾನದ ಸ್ಥಿತಿಯಲ್ಲೇ ಅವರು ಆ ಎರಡನೇ ಹಳ್ಳವನ್ನು ಮೆಲ್ಲಮೆಲ್ಲನೆ ಇಳಿಯುತ್ತಿರಲು, ಡಬ್ಲಿನ್ನನಿಗೆ ಅಲ್ಲಿ ಏನೋ ಸಂಶಯವು ಬರಲು, ಅವನು ಅಲಿವರ್ದಿಖಾನನನ್ನು ಕುರಿತು:—ಖಾನ, ಈ ಹಳ್ಳವನ್ನಿಳಿದು ಹೋಗುವ ಬೇರೆ ಮಾರ್ಗವಿದ್ದರೆ ನೋಡು. ಅತ್ತ ಕಡೆಯಿಂದಲೇ ದಾಟೋಣ, ಇಲ್ಲಿಂದ ಬೇಡ, ಎಂದು ಅಂದನು.

ಡಬ್ಲಿನ್ನನು ಆ ಬಗೆಯ ಅಪ್ಪಣೆ ಮಾಡಲು, ಅವನ ಸಂಗಡಿಗರು ಮತ್ತೆ ಮೇಲಕ್ಕೆ ಬಂದು ಅಲ್ಲಿಂದ ಕೆಳಗಡೆಗೆ ತುಸ ಅಂತರದ ಮೇಲಿನ ಒಂದು ದಾರಿಯನ್ನು ಹಿಡಿದು ಆ ಹಳ್ಳವನ್ನು ದಾಟಲುಪಕ್ರಮಿಸಿದರು. ಅವರೆಲ್ಲರ ಕುದುರೆಗಳೂ ಒಳ್ಳೇ ಚಾಣಾಕ್ಷಗಳಾದುದರಿಂದ ನೆಲದ ಮೇಲೆ ನಡೆಯುವವರೆಗೆ ಅವು ತಮ್ಮ ಖುರಪುಟಗಳ ಸಪ್ಪಳವಾಗದಂತೆ ಬಹು ಎಚ್ಚರದಿಂದ ಸಾಗಿದ್ದವು; ಆದರೆ ನೀರೊಳಗೆ ನಡೆಯುವಾಗ ಅವು ತಮ್ಮ ಸ್ವಭಾವಧರ್ಮದಂತೆ 'ಘುರ್-ಘುರ'

ಎಂದು ಧ್ವನಿಗೆಯ್ಯಲಾರಂಭಿಸಿದವು. ಅಷ್ಟರಲ್ಲಿ ಇವರು ಇಳಿದು ಬರುತ್ತಿರುವ ಕಡೆಯಿಂದ 'ಢಮ್-ಢಮ್' ಎಂದು ಬಂದೂಕಿನ ಗುಂಡುಗಳ ೨೦-೨೫ಸಾರೆ ಸಪ್ಪಳವಾಯಿತು. ಆ ಕೂಡಲೆ ಡಬ್ಲಿನ್ನನ ಸಂಗಡಿಗರ ಮನಸ್ಸಿನೊಳಗಿನ ಈ ವರೆಗಿನ ಸಂಕಟದ ಕಲ್ಪನೆಯು ಮಾಯವಾಗಿ, ಆ ಭೀಕರವಾದ ಸಂಕಟದ ಪ್ರತ್ಯಕ್ಷ ದೃಶ್ಯವು ಅವರೆದುರಿಗೆ ಕುಣಿಯಲಾರಂಭಿಸಿತು. ಆಗ ಅವರಲ್ಲಿಯ ಪ್ರತಿಯೊಬ್ಬರೂ ಡಬ್ಲಿನ್ನನ ಹುಕುಮಿನ ದಾರಿ ಕಾಯುತ್ತಿದ್ದರು. ಸಮೀಪದ ಕಟ್ಟಡವಿಯಲ್ಲಿ ಶತ್ರುಗಳಿರುವರೆಂಬದನ್ನು ತಿಳಿದ ಡಬ್ಲಿನ್ನನು, ವೈರಿಗಳು ಇನ್ನೊಮ್ಮೆ ತಮ್ಮ ಬಂದೂಕುಗಳನ್ನು ಹಾರಿಸುವಷ್ಟರಲ್ಲಿ ತಾವೆಲ್ಲರೂ ಈ ಹಳ್ಳವನ್ನು ದಾಟಿ ಹೋಗಬೇಕೆಂದು ನಿರ್ಧರಿಸಿ ಅದರಂತೆ ಹುಕುಮು ಮಾಡಿದನು. ಡಬ್ಲಿನ್ನನ ಬಾಯಿಂದ ಹುಕುಮು ಹೊರಡುವದೊಂದೇ ತಡವಾಯಿತು. ಎಲ್ಲರೂ ತೀರ ಗತಿಯಿಂದ ಹಳ್ಳವನ್ನು ದಾಟಿ ಇತ್ತೀಚೆಗೆ ಬಂದು ನಿಂತರು. ಅಲ್ಲಿಂದ ಅವರ ಛಾವಣಿಯು ವಿಶೇಷ ದೂರವಾಗಿರಲಿಲ್ಲ.

ಹಳ್ಳವನ್ನು ದಾಟಿ ಬಂದ ಬಳಿಕ ಡಬ್ಲಿನ್ನನು ತನ್ನ ಸಂಗಡಿಗರನ್ನೆಲ್ಲ ಒತ್ತಟ್ಟಿಗೆ ನಿಲ್ಲಿಸಿ, ಎಲ್ಲರೂ ಸುಖರೂಪವಾಗಿ ಬಂದರೋ ಹೇಗೆಂಬ ಬಗ್ಗೆ ವಿಚಾರಿಸಿದನು. ಸಂಗಡಿಗರಲ್ಲಿಯ ಇಬ್ಬರು ಸವಾರರ ಪತ್ತೆ ಹತ್ತಲಿಲ್ಲ. ಆಗ ಸ್ವತಃ ಡಬ್ಲಿನ್ನನು ಪುನಃ ಆ ಹಳ್ಳಕ್ಕೆ ಹೋಗಲನುವಾಗಲು, ಬನ್ನೂ ಹಾಗು ಅಲಿವರ್ದಿ ಖಾನರು ಅವನನ್ನು ಹೋಗಗೊಡದೆ, ತಾವೇ ಹೋಗಿ ನೋಡುತ್ತಾರೆ; ಒಬ್ಬ ಸ್ವಾರನಿಗೆ ಶತ್ರುಗಳ ಗುಂಡು ಬಡಿದು ಅವನು ತನ್ನ ಕುದುರೆಯ ಮೇಲಿಂದ ಬಿದ್ದು ಸತ್ತಿದ್ದನು. ಇನ್ನೊಬ್ಬನ ಕುದುರೆಗೆ ಗುಂಡು ತಾಕಿದ್ದರಿಂದ ಅದು ಸತ್ತು ಬೀಳುವಾಗ ಅದರ ಮೇಲೆ ಕುಳಿತಿದ್ದ ಸವಾರನು ಅರೆಹುಷಾರಿಯಿದ್ದದರಿಂದ ಅವನು ಆ ಕುದರೆಯ ಮೈ ಕೆಳಗೆ ಸಿಕ್ಕು ವಿಲಿ-ವಿಲಿ ಒದ್ದಾಡುತ್ತಿದ್ದನು. ಬನ್ನೂನು ಅವನನ್ನು ಆ ಕುದುರೆಯ ಕೆಳಗಿಂದ ಜಗ್ಗಿ ತೆಗೆದು, ತನ್ನ ಕುದುರೆಯ ಮೇಲೆ ಕೂಡ್ರಿಸಿಕೊಂಡು ಬಂದು ಡಬ್ಲಿನ್ನನಿಗೆ ಎಲ್ಲ ಸಂಗತಿಯನ್ನು ತಿಳಿಸಿದನು. ಡಬ್ಲಿನ್ನನು ಸತ್ತವನ ಬಗ್ಗೆ ಹೆಚ್ಚಾಗಿ ಮಿಡುಕಿ, ಅವನನ್ನು ಮಣ್ಣುಗೊಳಿಸುವ ವ್ಯವಸ್ಥೆ ಮಾಡಿ, ಉಳಿದ ಜನರೊಡನೆ ಛಾವಣಿಯ ಕಡೆಗೆ ಸಾಗಿದನು.

ಅವರೆಲ್ಲರು ತುಸ ದಾರಿ ಸಾಗಿಬರುತ್ತಿರಲು, ಅವರಿಗೆ ಅವರ ಛಾವಣಿಯೊಳಗಿನ ದೀಪಗಳು ಕಾಣಲಾರಂಭಿಸಿದವು. ಅವರು ಹಾಗೆಯೇ ಇನ್ನೂ ಕೆಲ ದಾರಿ ಕ್ರಮಿಸಿ ಬರುತ್ತಿರಲು, ಛಾವಣಿಯೊಳಗಿಂದ ನೂರಿನ್ನೂರು ಪ್ರಜ್ವಲಿತ

ಹಿಲಾಲುಗಳು ತಮ್ಮ ಕಡೆಗೆ ಧಾವಿಸುತ್ತ ಬರುತ್ತಿರುವದನ್ನು ಅವರೆಲ್ಲರೂ ಕಂಡರು. ಡಬ್ಲಿನ್ನನು ಯಾವಾಗ ಬೇಟೆಗೆ ಹೋದರೂ ಇಷ್ಟು ಕತ್ತಲಾಗಿ ತಿರುಗಿ ಬರುತ್ತಿರಲಿಲ್ಲ; ಒಂದರೂ ಅವನನ್ನು ಎದುರುಗೊಳ್ಳಲಿಕ್ಕೆ ಹಿಲಾಲಿನ ದೀಪಗಳು ಈವರೆಗೆಂದೂ ಬಂದಿರಲಿಲ್ಲ. ಅದರಿಂದ ತನ್ನ ದಂಡಿನಲ್ಲಿ ಶತ್ರುಪಕ್ಷದವರು ಬಂಡನ್ನೆಬ್ಬಿಸಿದ್ದು, ಆ ಬಂಡುಗಾರರಲ್ಲಿಯ ಕೆಲವರು ತನ್ನನ್ನು ಹುಡುಕುವದಕ್ಕಾಗಿ ಹೀಗೆ ಪ್ರಜ್ವಲಿತ ಜ್ಯೋತಿಗಳೊಡನೆ ಇತ್ತ ಬರುತ್ತಿರಬಹುದೆಂದು ಡಬ್ಲಿನ್ನನಿಗೆ ಅನಿಸಿತು. ಆದರೂ ಅವನು ಯಾವಾಗಲೂ ಪರಮೇಶ್ವರನಲ್ಲಿ ವಿಶ್ವಾಸವನ್ನಿಟ್ಟು ನಡೆಯುವ ನಿರ್ಧಾರದ ಪ್ರಾಣಿಯಾದ್ದರಿಂದ, ತನ್ನ ಮನಸ್ಸಿನ ಆ ಅನುಮಾನವನ್ನು ತನ್ನ ಸಂಗಡಿಗರೊಬ್ಬರಿಗೂ ತಿಳಿಸದೆ ಸಾಗಿದ್ದನು. ಆದರೆ ಬನ್ಸೂ, ಅಲಿವರ್ದಿಖಾನ ಮುಂತಾದವರ ಮನಸ್ಸಿನಲ್ಲಿಯೂ ಅದೇ ಬಗೆಯ ಸಂಶಯವು ಪ್ರಾಪ್ತವಾಗಲು, ಅಲಿವರ್ದಿಖಾನನು ಯಾರಿಗೂ ಹೇಳದೆ-ಕೇಳದೆ ತನ್ನ ಕುದುರೆಯನ್ನು ಒತ್ತರದಿಂದ ಬಿಟ್ಟು, ಆ ಜ್ಯೋತಿಗಳು ಬರುತ್ತಿರುವ ಕಡೆಗಿನ ಒಂದು ದಿನ್ನೆಯನ್ನು ಹತ್ತಿ ನಿಜಸಂಗತಿಯನ್ನು ತಿಳಿಯಲುಪಕ್ರಮಿಸಿದನು.

ಅಲ್ಪಾವಧಿಯಲ್ಲಿಯೇ ಅವನು ಮರಳಿಬಂದು:—ಸಾಹೇಬ, ಇವರು ಶತ್ರುಪಕ್ಷದವರಲ್ಲ. ನಮ್ಮ ಹುಜೂರರವರು ಇಂದಿನ ಸಂಕಟದೊಳಗಿಂದ ಪಾರಾಗಿ ಬಂದುದನ್ನು ಕಣ್ಮುಟ್ಟ ನೋಡುವ ಸಲುವಾಗಿ ನಮ್ಮ ಹಿತಚಿಂತಕ ದಂಡಾಳುಗಳೇ ಹೀಗೆ ಸಂಭ್ರಮದಿಂದ ಬರುತ್ತಿರುವರು, ಎಂದು ಹೇಳಿದನು. ಅಷ್ಟರಲ್ಲಿ ಆ ಪ್ರಜ್ವಲಿತ ಹಿಲಾಲುಗಳನ್ನು ಹಿಡಿದಿದ್ದ ನೂರಿನ್ನೂರು ಜನರು ಧಾವಿಸುತ್ತ ಬಂದು:—ಜಯ! ಡಬ್ಲಿನ್ನ ಸಾಹೇಬಕೀ ಜಯ!! ಎಂದು ಗಂಭೀರಸ್ವರದಿಂದ ಜಯಜಯಕಾರ ಮಾಡಿದರು. ಡಬ್ಲಿನ್ನನು ತನ್ನ ಟೊಪ್ಪಿಗೆಯನ್ನು ತೆಗೆದು ಹಿಡಿದು:-ನಿಮ್ಮೆಲ್ಲರಿಗೂ ನಾನು ಅತ್ಯಂತ ಕೃತಜ್ಞನಿರುತ್ತೇನೆಂಬ ಭಾವನೆಯನ್ನು ವ್ಯಕ್ತಪಡಿಸಿದನು.

ಡಬ್ಲಿನ್ನನು ಸಪರಿವಾರದೊಡನೆ ಛಾವಣಿಗೆ ತಲುಪಿದ ಬಳಿಕ, ಭುಕನನೆಂಬ ಆತನ ಕೇವಲ ವಿಶ್ವಾಸುಕ ಸೇವಕನು ಅವನೆಡೆಗೆ ಬಂದು ಈ ಬಗೆಯಾಗಿ ವರದಿಯನ್ನು ಕೊಟ್ಟನು:—ಹುಜೂರರ ಅಪ್ಪಣೆಯ ಮೇರೆಗೆ ನಾನು ಛಾವಣಿಯಲ್ಲಿ ಅತ್ತಿತ್ತ ಅಡ್ಡಾಡುತ್ತ ಸಂಶಯಿತ ಜನರ ಮೇಲೆ ನಜರಿಡುತ್ತ ಸಾಗಿರಲು, ನನ್ನ ಕಿವಿಗಳು ಮಾತ್ರ ನಮ್ಮ ಹುಜೂರರ ದಾರಿಯ ಕಡೆಗೇ ವೇಧಿಸಿದ್ದವು. ಸಾಯಂಕಾಲವಾಗಿ ದೀಪಗಳನ್ನು ಹಚ್ಚಿದ ಬಳಿಕಂತೂ ನನ್ನ ಮನಸ್ಸಿನ ಪಿವಂಚ

ನೆಯು ಮಿತಿಮೀರಿತು; ಹಾಗು ನನ್ನ ಮನಸ್ಸಿನಲ್ಲಿ ನಾನಾ ಬಗೆಯ ಕುವಿಚಾರ ಗಳು ಪ್ರಾಪ್ತವಾಗಹತ್ತಿದವು ಅಷ್ಟರಲ್ಲಿ ಅಸ್ಪಷ್ಟಗಳಾದ ಬಂದೂಕಿನ ಕೆಲ ಗುಂಡುಗಳ ಸಪ್ಪಳವು ನನ್ನ ಕರ್ಣಗಳನ್ನು ಪ್ರವೇಶಿಸಿತು. ಆ ಕೂಡಲೆ ನಮ್ಮ ಹುಜೂರರಿಗೆ ಏನೋ ಸಂಕಟ ಪ್ರಾಪ್ತವಾಗಿದೆಯೆಂದು ನನ್ನ ನಿರ್ಧಾರವಾಗಲು, ನಾನೇ ನಮ್ಮ ಕೆಲಜನ ಹಿತಚಿಂತಕ ದಂಡಾಳುಗಳಿಗೆ ಅದನ್ನು ತಿಳಿಸಿ, ಹಿಲಾಲು ಗಳನ್ನು ಹಚ್ಚಿಸಿ ಅವರನ್ನು ನಮ್ಮ ಹುಜೂರರವರ ದಾರಿಗೆ ಕಳಿಸಿದ್ದೆನು.

ನಂದಸಿಂಹನಂತಹ ಆ ನಿಷ್ಕಾರಣ ಶತ್ರುಗಳ ಆ ನೀಚತನವೂ, ಭುಕನ್ ನಂತಹ ಅತ್ಯಂತ ಸ್ವಾಮಿನಿಷ್ಠ ಸೇವಕನ ಆ ಬಗೆಯ ಸ್ವಕಾರ್ಯ-ಸ್ವಾಮಿ ಕಾರ್ಯತತ್ಪರತೆಯೂ ಡಬ್ಲಿನ್ನನನ್ನು ಹೆಚ್ಚಾಗಿ ಚಂಚಲಗೊಳಿಸಿದವು. ಆಗ ಅವನು ಅತ್ಯಂತ ಕೃತಜ್ಞತೆಯಿಂದ ತನ್ನ ಕೈಯೊಳಗಿನ ಬಹು ಬೆಲೆಯುಳ್ಳ ಒಂದು ಪಚ್ಚದ ಉಂಗುರವನ್ನು ತೆಗೆದು ಅದನ್ನು ಭುಕನನ ಕೈಗೆ ತೊಡಿಸಿ, ಅವನನ್ನು ಗೌರವಿಸಿದನು.

---

## ೧೪ನೇ ಪ್ರಕರಣ—ಕೋಟಿಕಾಂಗ್ರಾ.

ಅಂದಿನ ಆ ನೀಚಕೃತ್ಯವು ನಂದಸಿಂಹನದೇ ಎಂದು ಡಬ್ಲಿನ್ನನಿಗೆ ತಿಳಿಯಿತು; ಹಾಗು ಆ ಸಂಶಯಪೀಡಿತ ನಂದಸಿಂಹನಿಗೆ ಆಗ ಬೇಕಾದ ಬಗೆಯ ಶಿಕ್ಷೆಯನ್ನು ವಿಧಿಸಲಿಕ್ಕೆ ಅವನು ಸರ್ವತಂತ್ರ-ಸ್ವತಂತ್ರನೂ ಆಗಿದ್ದನು. ಆದರೂ ಆ ಪಾಪಭೀರುವು ಹಾಗೆ ಒಮ್ಮೆಲೇ ದುಡುಕಲಿಲ್ಲ. ವೈರಿಗಳ ಕೃತ್ಯದ ಪತ್ತೆ ಹಚ್ಚಿ, ಎಲ್ಲರ ನಿದರ್ಶನಕ್ಕೆ ತಂದುಕೊಟ್ಟು, ಆ ಮೇಲೆಯೇ ಅವರಿಗೆ ಯೋಗ್ಯ ಶಿಕ್ಷೆಯನ್ನು ವಿಧಿಸಬೇಕೆಂದು ಅವನು ನಿರ್ಧರಿಸಿದನು. ಅದಕ್ಕಾಗಿ ಅವನು ಅಲಿವರ್ದೀಖಾನನನ್ನೂ ಅವನೊಡನೆ ಕೆಲ ವಿಶ್ವಾಸುಕ ಜನರನ್ನೂ ನಿಯಮಿಸಿ ಅವರಿಗೆ ಬೇಕಾದ ಸಿಧಾ-ಸಾಮಗ್ರಿ-ಹಣ-ಕಾಸು ಮುಂತಾದವುಗಳನ್ನು ಪೂರೈಸಿದನು. ಮರುದಿನ ಬೆಳಗಾಗುವಷ್ಟರಲ್ಲಿ ಅಲಿವರ್ದೀಖಾನನು ತನ್ನ ಜನರೊಡನೆ ಆ ಕೆಲಸಕ್ಕೆ ತೊಡಗಿದನು.

ಡಬ್ಲಿನ್ನನು ಛಾವಣಿಗೆ ಬಂದ ಬಳಿಕ ತನಗೆ ಇಂದು ಯಾವ ತೊಂದರೆಯೂ ಆಗದಂತೆ ನಟಿಸಿ, ಕೆಲಹೊತ್ತು ಕಳೆದನು. ಎಲ್ಲರ ಊಟ-ಉಡಿಗೆ ಮುಂತಾದವುಗಳು ಮುಗಿದ ಬಳಿಕ ತಮ್ಮ ಎಲ್ಲ ದಂಡಾಳುಗಳ ಹಾಜರಿಯನ್ನು

ತನ್ನೆದುರಿಗೆ ತಕ್ಕೊಳ್ಳಬೇಕೆಂದು ತನ್ನ ದಂಡಿನ ಎಲ್ಲ ಮುಖ್ಯಸ್ಥರಿಗೆ ಹುಕುಮು ಮಾಡಿದನು; ಹಾಗು ತಾನು ತನ್ನ ಕುದುರೆಯನ್ನು ಹತ್ತಿ ಬನ್ನೊಡನೆ ಪ್ರತಿಯೊಂದು ದಂಡಿನ ಭಾಗಕ್ಕೂ ನಡೆದನು. ಉಳಿದ ಎಲ್ಲ ವಿಭಾಗಗಳನ್ನು ಮಾಮೂಲಿನಂತೆ ನೋಡಿ, ನಂದಸಿಂಹನ ದಂಡಿಗೆ ನಡೆದನು. ಅವನ ದಂಡಾಳುಗಳ ಹಾಜರಿಯಲ್ಲಿ ೩೪ ಜನ ದಂಡಾಳುಗಳ ಪತ್ತೆಯಿರಲಿಲ್ಲ. ಆಗ ಆ ಬಗ್ಗೆ ವಿಚಾರಣೆಯಾಗಲು, "ಮುಹಮ್ಮದಶಹಾ" ಎಂಬ ಹೆಸರಿನ ನಂದಸಿಂಹನ ಬಲಗೈಯಂತಿದ್ದ ನೀಚನು ಅಲ್ಲಿರಲಿಲ್ಲ. ಮತ್ತೆ ೨-೩ ಜನರೂ ಇರಲಿಲ್ಲ. ಎಷ್ಟು ಶೋಧಿಸಿದರೂ ಅವರ ಪತ್ತೆಹತ್ತಲಿಲ್ಲ. ಆಗ ಡಬ್ಲಿನ್ನನು ಆ ಬಗ್ಗೆ ಹೆಚ್ಚು ಪೃಚ್ಛಾಪೃಚ್ಛ ಮಾಡುತ್ತ ಕೂಡ್ರದೆ, ಅವರು ಮರಳಿ ಬಂದ ಕೂಡಲೆ ನನ್ನ ಕಡೆಗೆ ಕಳಿಸಿರೆಂದು ನಂದಸಿಂಹನಿಗೆ ಹೇಳಿ, ತನ್ನ ಡೇರೆಗೆ ಬಂದು ವಿಶ್ರಾಂತಿಯನ್ನು ಪಡೆಯಹತ್ತಿದನು.

ಬೆಳಗಿನ ಜಾವದಲ್ಲಿ ಮುಹಮ್ಮದಶಹನು ತನ್ನ ಸಂಗಡಿಗರೊಡನೆ ಛಾವಣಿಗೆ ಬರಲು, ಅವರನ್ನು ಆಗಲೆ ಡಬ್ಲಿನ್ನನೆದುರಿಗೆ ತಂದು ನಿಲ್ಲಿಸಿದರು. ಡಬ್ಲಿನ್ನನು ಅವರಿಗೆ ಗೈರಹಾಜರಿಯ ಕಾರಣವನ್ನು ವಿಚಾರಿಸಲು, ಮುಹಮ್ಮದಶಹನು ಒಳ್ಳೇ ಗಾಬರಿಯಿಂದ:—ಹುಜೂರ, ಕುದುರೆಯನ್ನು ಮೇಯಿಸುವದಕ್ಕಾಗಿ ಅಡವಿಗೆ ಹೋಗಿರಲು, ನನ್ನ ಕುದುರೆಯು ಒಮ್ಮೆಲೆ ಕುಂಟು ಬಿದ್ದಿತು. ಅದರಿಂದ ಅದನ್ನು ಸಾವಕಾಶವಾಗಿ ನಡಿಸಿಕೊಳ್ಳುತ್ತ ಬರಲಿಕ್ಕೆ ಇಷ್ಟು ಅವಕಾಶ ಹಿಡಿಯಿತು. ನಾನೊಬ್ಬನೇ ಆ ಅಡವಿಯಲ್ಲಿ ನಿಲ್ಲುವದು ನನಗೆ ಅಂಜಿಕೆಯೆನಿಸಿತು. ಆದ್ದರಿಂದ ಈ ಮೂವರನ್ನೂ ನಾನು ನನ್ನೊಡನೆ ನಿಲ್ಲಿಸಿಕೊಂಡಿದ್ದೆನು; ಎಂದು ಏನೇನೋ ಹೇಳಿದನು. ಡಬ್ಲಿನ್ನನು ಆ ನಾಲ್ವರನ್ನೂ ಬೇರೆ ಬೇರೆ ಕಡೆಗೆ ಕರೆದೊಯ್ದು ಆ ಕುದುರೆಯು ಕುಂಟುಬಿದ್ದ ಕಾರಣವನ್ನು ಕೇಳಿದನು. ಪ್ರತಿಯೊಬ್ಬರು ಆ ಕಾರಣವನ್ನು ಬೇರೆಬೇರೆಯಾಗಿ ಹೇಳಿದರು. ಇದರಿಂದ ಅವನಲ್ಲಿಯ ಅವರ ವಿಷಯದ ಸಂಶಯವು ಕಡಿಮೆಯಾಗದೆ, ವೃದ್ಧಿಂಗತವಾಯಿತು. ಅಲಿವರ್ದಿಖಾನನು ಮರಳಿ ಬಾರದ ಹೊರತು, ತನ್ನ ದಂಡನ್ನು ಅಲ್ಲಿಂದ ಮುಂದೆ ಸಾಗಿಸುವದು ಗಂಡಾಂತರಕ್ಕೆ ಕಾರಣವೆಂದು ಬಗೆದು, ಡಬ್ಲಿನ್ನನು ದಂಡಿನ ಬೀಡನ್ನು ಕಿತ್ತಲಿಲ್ಲ. ಪೂರ್ವದಿನದ ತನ್ನ ಮೇಲಿನ ಪ್ರಾಣಸಂಕಟ ನಿವಾರಣದ ಆನಂದಕ್ಕಾಗಿ ಅವನು ಮರುದಿನ ತನ್ನ ಎಲ್ಲ ದಂಡಾಳುಗಳಿಗೂ "ಶಿರಾ-ಪುರಿ"ಯ ಮಹಾಭೋಜನವನ್ನು ತನ್ನ ಸ್ವಂತ ಖರ್ಚಿನಿಂದ ಮಾಡಿಸಿದನು!

ಮರುದಿನ ಸಂಜೆಗೆ ಅಲಿವರ್ದಿಖಾನನು ಮರಳಿ ಬಂದನು. ಆದರೆ ಅವ ನೊಡನೆ ಹೋಗಿದ್ದ ಅವನ ಸಂಗಡಿಗರಾರೂ ಬರಲಿಲ್ಲ. ಅಲಿವರ್ದಿಖಾನನು ಬಂದವನೇ ಡಬ್ಲಿನ್ನನನ್ನು ಗುಪ್ತವಾಗಿ ಕಂಡು, ಶೋಧದಲ್ಲಿ ತನಗೆ ದೊರಕಿದ್ದ ಒಂದು ಬಿಲ್ಲೆಯನ್ನು ಡಬ್ಲಿನ್ನನೆದುರಿಗೆ ಇಟ್ಟನು. ಆ ಬಿಲ್ಲೆಯು ನಂದಸಿಂಹನ ಸವಾರರ ವಿಶಿಷ್ಟ ಚಿಹ್ನದಿಂದ ಒಪ್ಪುತ್ತಿತ್ತು. ಕೂಡಲೆ ಡಬ್ಲಿನ್ನನು ಅದನ್ನು ತೆಗೆದಿಟ್ಟು ವಿಶೇಷ ಸಂಗತಿಯೇನೆಂದು ಕೇಳಿದನು. "ಹುಜೂರ, ಆ ನೀಚರ ಪತ್ತೆಯು ಇಷ್ಟು ಸುಲಭವಾಗಿ ಹತ್ತಲಾರದು. ಅವರು ಮಹಾ ಕುತಂತ್ರಗಾ ರರಾಗಿರುತ್ತಾರೆ. ಆದರೂ ನಮ್ಮ ಕಡೆಯ ಖೈರಾತಅಲ್ಲಿ ಹಾಗು ಬಯಾಬಅಲ್ಲಿ ಯವರು ನಿರಾಶರಾಗಿಲ್ಲ. ಆ ಬದ್‌ಮಾಷರು ಎಲ್ಲಿಗೇ ಹೋಗಿರಲಿ, ನಾವು ಅವರ ಪತ್ತೆ ಹಚ್ಚದೆ ಬಿಡಲಾರೆವೆಂದು ಅವರು ಪಣ ತೊಟ್ಟಿರುತ್ತಾರೆ. ಅದ ರಿಂದ ಅವರು ಈಗ ಬೇರೆ ಬೇರೆ ದಿಕ್ಕುಗಳಲ್ಲಿ ಶೋಧ ನಡಿಸಿರುತ್ತಾರೆ. ನಾನು ಖೈರಾತ ಅಲ್ಲಿಯೊಡನೆ ಒತ್ತಟ್ಟಿಗೆ ಶೋಧ ನಡಿಸಿರಲು, ಅತ್ತ ಈ ಬಿಲ್ಲೆಯು ದೊರಕಿತು. ಇದನ್ನು ಹುಜೂರರವರಿಗೆ ತೋರಿಸಲಿಕ್ಕೂ ಹುಜೂರರವರ ಮುಂದಿನ ಆಜ್ಞೆಯನ್ನು ಪಡೆಯಲಿಕ್ಕೂ ಇಲ್ಲಿಗೆ ಬಂದೆನು, ಎಂದು ಹೇಳಿದನು.

ಬಳಿಕ ಡಬ್ಲಿನ್ನ, ಬನ್ನೂ, ಅಲಿವರ್ದಿಖಾನ, ಭುಕನ ಮುಂತಾದವರು ಎಷ್ಟೋ ಹೊತ್ತಿನ ವರೆಗೆ ಗುಪ್ತವಾಗಿ ಆಲೋಚಿಸಿದರು. ನಂತರ ಅಲಿವರ್ದಿ ಖಾನನು ಅಲ್ಲಿಗೆ ಎಷ್ಟು ಗುಪ್ತವಾಗಿ ಬಂದಿದ್ದನೋ ಅಷ್ಟೇ ಗುಪ್ತವಾಗಿ ಅಲ್ಲಿಂದ ಹೊರಟು ಹೋಗಿ, ತನ್ನ ಜನರೊಡನೆ ನಂದಸಿಂಹಾದಿಗಳ ಆ ನೀಚ ಕೃತ್ಯದ ಶೋಧವನ್ನು ಒಳ್ಳೇ ಲಗುಬಗೆಯಿಂದ ನಡಿಸಿದನು.

ಡಬ್ಲಿನ್ನನು ತನ್ನ ಮೇಲೆ ಉಂಟಾಗಿದ್ದ ಆ ಆಕಸ್ಮಿಕ ಸಂಕಟವನ್ನು ರಣ ಜಿತಸಿಂಹ ಮಹಾರಾಜರಿಗೆ ಪತ್ರಮುಖಾಂತರ ತಿಳಿಸಿ, ಮರುದಿನ ತನ್ನ ದಂಡಿ ನೊಡನೆ ಕೋಟಕಾಂಗ್ರಾಕ್ಕೆ ನಡೆದನು. ಫಕೀರ ಅಜೀಜುದ್ದೀನನು ಡಬ್ಲಿನ್ನ ನೊಡನೆ ಕಳಿಸಿದ್ದ ತನ್ನ ವಿಶ್ವಾಸುಕ ಸೇವಕರಲ್ಲಿ ಹಾಕಿಮಸಿಂಹನೆಂಬ ಹಿಂದೂ ಸರದಾರನು ಪ್ರಮುಖನಾಗಿದ್ದನು. ಅವನು ಉದಾರನೂ, ಸಚ್ಚರಿತ್ರನೂ ಆಗಿದ್ದು, ಶಿಪಾಯಿಗಳಿಂದ ಅಮೀರ-ಉಮರಾವರ ವರೆಗೆ ಎಲ್ಲರ ಕೂಡ ಅತನು ಸರಳತನದಿಂದಲೂ, ವಿನಯದಿಂದಲೂ, ಪ್ರೇಮದಿಂದಲೂ ನಡಕೊಳ್ಳುತ್ತಿದ್ದನು. ಹಾಂಜೀ-ಹಾಂಜೀ ಮಾಡುವಂತಹ ಜನರನ್ನು ಅವನು ಸೇರುತ್ತಿದ್ದಿಲ್ಲ. ಅವನು ಒಳ್ಳೇ ವ್ಯವಸ್ಥಿತ ಮನುಷ್ಯನಾಗಿದ್ದು ಇಂಗ್ಲಿಷರ ದಂಡಿನ ಪದ್ಧತಿಯು ಅವನಿಗೆ

ಮನಃಪೂರ್ವಕವಾಗಿ ನೇರುತ್ತಿತ್ತು. ಆದರಿಂದ ಅವನು ತನ್ನ ಸ್ವಂತದ ದಂಡಾಳುಗಳನ್ನು ಇಂಗ್ಲಿಷ ಸೋಲ್ಜರರಂತೆ ನಿಪುಣರನ್ನಾಗಿ ಮಾಡಿದ್ದನು. ಅವನು ಸ್ವತಃ ಒಳ್ಳೇ ಶೂರನೂ, ಸಾಹಸಿಯೂ ಆಗಿದ್ದು, ಯುದ್ಧದಲ್ಲಿ ಒಮ್ಮೆ ಮುಂದೆ ಇಟ್ಟ ಹೆಜ್ಜೆಯನ್ನು ಎಂದೂ ಹಿಂದೆಗೆಯುತ್ತಿರಲಿಲ್ಲ. ಯುದ್ಧಕಲೆಯಂತೆ ಸಂಗೀತ-ಶಾಸ್ತ್ರದಲ್ಲಿಯೂ ಅವನು ಪಾರಂಗತನಾಗಿದ್ದನು. ಅವನ ಕಂಠವು ಬಹು ಮಧುರವಾಗಿದ್ದು, ಅವನು ಚೆನ್ನಾಗಿ ಹಾಡುತ್ತಿದ್ದನಲ್ಲದೆ, "ದಿಲರುಬಾ" ಎಂಬ ಆ ದೇಶದ ವಾದ್ಯವನ್ನು ಬಹು ಸರಸವಾಗಿ ಬಾರಿಸುತ್ತಿದ್ದನು. ಇಂಥ ಸದ್ಗುಣಿಯಾದ ಹಾಕಿಮುಸಿಂಹನ ಸ್ವಭಾವ ಪರಿಚಯವು ಡಬ್ಲಿನ್ನನಂತಹ ಗುಣ ಗ್ರಾಹಿಗೆ ಆಗಲಿಕ್ಕೆ ತಡವಾಗುವದೋ? ತುಸ ದಿನಗಳಲ್ಲಿಯೇ ಅವರೀರ್ವರಲ್ಲಿ ದೃಢವಾದ ಮೈತ್ರಿಯುಂಟಾಯಿತು. ದಂಡು ಬೀಡುಬಿಟ್ಟಾಗ ಡಬ್ಲಿನ್ನನು ಹಾಕೀಮುಸಿಂಹನನ್ನು ತನ್ನೆಡೆಗೆ ಕರೆಯಿಸಿಕೊಳ್ಳುತ್ತಲೂ, ಸಮಯವನ್ನರಿತು ತಾನು ಅವನೆಡೆಗೆ ಹೋಗುತ್ತಲೂ ಅವನಲ್ಲಿಯ ಗಾಯನಾದಿ ಕಲೆಗಳನ್ನು ಅಭ್ಯಾಸ ಮಾಡುತ್ತಿದ್ದನು.

ಕೋಟಕಾಂಗ್ರಾ ಪ್ರಾಂತವು ಸಮಿಸಮೀಪಿಸಿದಂತೆ ಡಬ್ಲಿನ್ನ ಹಾಗು ಹಾಕೀಮುಸಿಂಹರ ಗುಪ್ತ ಬೇತುಗಳು ಹೆಚ್ಚಾಗಹತ್ತಿದವು. ಹಕೀಮುಸಿಂಹನು ಇತರ ಸುಗುಣಗಳಿಂದ ಭೂಷಿತನಾಗಿದ್ದಂತೆ ಅವನು ಮಹಾ ಮುತ್ಸದ್ದಿಯೂ ಧೋರಣೀ ಮನುಷ್ಯನೂ ಆಗಿದ್ದನು. ಕೋಟಕಾಂಗ್ರಾ ದುರ್ಗವು ಇನ್ನು ಒಂದೇ ದಿನದ ಫಾಸಲೆಯಲ್ಲಿದ್ದಿತು. ಆಗ ಡಬ್ಲಿನ್ನನು ಯೋಚಿಸಿದ್ದೇನಂದರೆ:— ನಾನು ಸೈನ್ಯ ಸಹಿತವಾಗಿ ಒಮ್ಮೆಲೆ ದುರ್ಗವನ್ನು ಹತ್ತಿ ಹೋಗುವದಕ್ಕಿಂತ ಹಾಕೀಮುಸಿಂಹನನ್ನು ಕೆಲ ಜನ ಸ್ವಾರರೊಡನೆ ಮುಂದೆ ಕೋಟಕಾಂಗ್ರಾ ದುರ್ಗಕ್ಕೆ ಕಳಿಸಿ, ಅಲ್ಲಿಯ ದುರ್ಗಾಧಿಪತಿಯಾಗಿದ್ದ ದಂಡವರಸಿಂಹನಿಗೆ ತನ್ನ ಆಗಮನವನ್ನು ತಿಳಿಸಬೇಕೆಂದನು. ಈ ಆಲೋಚನೆಯು ಹಾಕೀಮುಸಿಂಹನಿಗೂ ಸಂದೋಚಿದ್ದರಿಂದ, ಡಬ್ಲಿನ್ನನು ದಂಡವರಸಿಂಹನಿಗೆ ಒಂದು ಗೌರವಪರ ಪತ್ರವನ್ನು ಬರೆದು ಅವನೊಡನೆ ಕಳಿಸಿಕೊಟ್ಟನು; ಹಾಗು ಹಾಕೀಮುಸಿಂಹನು ತನ್ನ ಪತ್ರದ ಉತ್ತರವನ್ನು ತರುವವರೆಗೆ ತಾನು ತನ್ನ ಎಲ್ಲ ದಂಡಿನ ಕವಾಯತ ಮುಂತಾದುದನ್ನು ಮಾಡಿಸಿ ಸಜ್ಜಾಗಿರಬೇಕೆಂದನು. ಡಬ್ಲಿನ್ನನ ಮಾರ್ಗಕ್ರಮಣದ ಪದ್ಧತಿಯ ಮೂಲಕ ಆತನ ದಂಡಾಳುಗಳಿಗೆ ಕೊಂಚವೂ ದಣುವಾಗಿರಲಿಲ್ಲ. ಲಾಹೋರವನ್ನು ತ್ಯಜಿಸುವಾಗ ದಂಡಾಳುಗಳ ಮೋರೆಯ ಮೇಲೆ

ಯಾವ ಪ್ರಕಾರದ ತೇಜವು ಮಿನುಗುತ್ತಿತ್ತೋ ಅದೇ ಪ್ರಕಾರದ ತೇಜವು ಈಗಲೂ ಅವರ ಮುಖಮಂಡಲದಲ್ಲಿ ತೋರುತ್ತಿತ್ತು. ಇಷ್ಟೇ ಅಲ್ಲ, ಆ ಕೋಟಕಾಂಗ್ರಾ ಪ್ರಾಂತದ ತಂಪು ಹವೆಯು ಮೂಲಕ ಹಾಗು ಅಲ್ಲಿಯ ಸ್ವಾಭಾವಿಕ ಸೃಷ್ಟಿಸೌಂದರ್ಯದ ಮೂಲಕ ದಂಡಾಳುಗಳ ತೇಜವೂ ವೀರ ಶ್ರೀಯೂ ಹೆಚ್ಚಾಗಿದ್ದವು. ಡಬ್ಲಿನ್ನನು ಗುಡ್ಡವನ್ನು ಶಿಸ್ತಿನಿಂದ ಹೇಗೆ ಹತ್ತ ಬೇಕು, ಹೇಗೆ ಇಳಿಯಬೇಕು, ಇಕ್ಕಟ್ಟಿನ ಸ್ಥಳಗಳನ್ನು ಹೇಗೆ ಶೋಧಿಸಬೇಕು, ಮಣ್ಣು ಕಿಲ್ಲೆಗಳನ್ನು ಹೇಗೆ ಸಿದ್ಧಗೊಳಿಸಬೇಕು ಮುಂತಾದ ಗುಡ್ಡಗಾಡು ಪ್ರಾಂತ ಗಳಲ್ಲಿ ಬೇಕಾದ ಶಿಕ್ಷಣವನ್ನು ಆ ತನ್ನ ಎಲ್ಲ ದಂಡಾಳುಗಳಿಗೆ ಕೊಟ್ಟನು.

ದುರ್ಗಕ್ಕೆ ಹೋಗಿದ್ದ ಹಾಕೀಮುಸಿಂಹನು ಮುಂದೆ ನಾಲ್ಕು ದಿವಸಗಳ ನಂತರ ಮರಳಿ ಡಬ್ಲಿನ್ನನೆಡೆಗೆ ಬಂದನು. ಅವನು ದಂಡವರಸಿಂಹನಿಂದ ತಂದ ಉತ್ತರದಲ್ಲಿ ಈ ಬಗೆಯ ಸಂಗತಿಯಿತ್ತು:—

"ಕೋಟಕಾಂಗ್ರಾ ಪ್ರಾಂತವು ಇನ್ನು ಮೇಲೆ ಮೆ|| ಡಬ್ಲಿನ್ನ ಸಾಹೇಬರ ವಶವಾಗುವದೆಂಬದನ್ನು ತಿಳಿದು ಈ ದಂಡವರ ಸಿಂಹನಿಗೆ ಪರಮಾನಂದವಾಗು ತ್ತಲಿದೆ; ಆದರೆ ಸಾಹೇಬರಿಗೆ ತಿಳಿಸಲಿಕ್ಕೆ ಅತ್ಯಂತ ಖೇದವೆನಿಸುವದೇನಂದರೆ, ಪರಮ ಪ್ರತಾಪಿ ಪಂಜಾಬದ ಸಿಂಹನಾದ ರಣಜಿತಸಿಂಹ ಮಹಾರಾಜರಿಂದ ಆ ಬಗೆಯ ಆಜ್ಞೆಯು ನನಗಾಗಿರುವದಿಲ್ಲ. ಅವರು ನನಗೆ ಕಟ್ಟುನಿಟ್ಟಾಗಿ ತಿಳಿ ಸಿಟ್ಟಿರುವದೇನಂದರೆ, ತಮ್ಮ ಕಡೆಯ ಯಾವನೊಬ್ಬ ಸರದಾರ, ಸೇನಾಪತಿಯೇ ಏಕೆ, ಪ್ರತ್ಯಕ್ಷ ತಮ್ಮ ಮಗನೇ ಆಗಲಿ, ತಾವೇ ಆಗಲಿ ಬಂದರೂ ಕೋಟೆಯ ಬಾಗಿಲವನ್ನು ತೆರೆಯಕೂಡದೆಂದು! ನಾನು ಮಹಾರಾಜರ ದಾಸಾನುದಾಸನು; ನಾನು ಅವರ ಆಜ್ಞೆಯನ್ನು ಎಂದಿಗೂ ಉಲ್ಲಂಘಿಸಲಾರೆನು. ಮಹಾರಾಜರು ನನಗೆ ಮತ್ತೊಂದು ಗುಪ್ತ ಸಂದೇಶದ ಮೂಲಕ ತಿಳಿಸಿರುವದೇನಂದರೆ, ಒಂದು ವೇಳೆ ನಾನು ಬೇರೊಬ್ಬನನ್ನು ಇಲ್ಲಿಯ ಕಿಲ್ಲೇದಾರನೆಂದು ನೇಮಿಸಿ ಕಳಿಸಿದರೂ ನನ್ನ ಆ ವಿಷಯದ ಆದೇಶಪತ್ರವು ನಿನಗೆ ತಲುಪುವ ವರೆಗೆ ನೀನು ನಿನ್ನ ಅಧಿಕಾರಸೂತ್ರಗಳನ್ನು ಬೇರೆ ಯಾರಿಗೂ ಒಪ್ಪಿಸಕೂಡದು ಆದುದರಿಂದ ಸಾಹೇಬ, ಈ ದೀನ ದಾಸನು ಈಗ ನಿಮಗೆ ಸ್ಪಷ್ಟವಾಗಿ ತಿಳಿಸುವದೇನಂದರೆ, ನಿಮ್ಮ ಆಜ್ಞೆಯ ಪ್ರಕಾರ ನಡೆಯಲಿಕ್ಕೆ ನಾನು ಸಿದ್ಧನಾಗುವದಿಲ್ಲ. ಆ ಬಗ್ಗೆ ನನ್ನನ್ನು ಕ್ಷಮಿಸಿರಿ."

ದಂಡವರಸಿಂಹನ ಉತ್ತರವನ್ನು ನೋಡಿ ಡಬ್ಲಿನ್ನನಿಗೆ ಆಶ್ಚರ್ಯವೆನಿಸಿ

ದರೂ ಅವನು ಅದನ್ನು ಯಾರ ಕಣ್ಣಿಗೂ ಬೀಳಗೊಡದೆ, ಕೂಡಲೆ ಅವನಿಗೆ ಮತ್ತೊಂದು ಪತ್ರವನ್ನು ಬರೆದು, ಅದನ್ನು ಹಾಕೀಮುಸಿಂಹನೊಡನೆ ಮತ್ತೆ ಕಳಿಸಿದನು. ಈ ಸಾರೆ ಅವನು ಹಾಕೀಮುಸಿಂಹನೊಡನೆ ಬೇಕಂತಲೇ ಎರಡುನೂರು ಜನ ಸ್ವಾರರನ್ನು ಕಳಿಸಿದ್ದನು. ಡಬ್ಲಿನ್ನನು ಬರೆದ ಪತ್ರವು ಈ ತೆರನಾಗಿದ್ದಿತು:-

"ಪ್ರಿಯ ದಂಡವರ ಸಿಂಹರವರ ಸನ್ನಿಧಿಗೆ:—

ನಮ್ಮ ದಂಡವರಸಿಂಹಬಹದ್ದೂರರು ವಿಶೇಷ ಅನುಭವಶಾಲಿಗಳಾಗಿದ್ದು ಸೂಜ್ಞರಿರುತ್ತಾರೆಂದು ನಾನು ಕೇಳಿರುತ್ತೇನೆ ಅದರಂತೆ ಅವರು ಮಹಾರಾಜರ ಏಕನಿಷ್ಠಸೇವಕರಿರುತ್ತಾರೆಂಬದೂ ನನಗೆ ತಿಳದಿರುತ್ತದೆ. ನಾನು ಈ ಕೋಟಕಾಂಗ್ರಾಪ್ರಾಂತದಲ್ಲಿ ಕಾಲಿಟ್ಟಾಗಿನಿಂದ ತಮ್ಮ ಸುಕೀರ್ತಿಯು ಆಗಾಗ್ಗೆ ನನ್ನ ಕಿವಿಗೆ ಬೀಳುತ್ತಿದೆ. ತಮ್ಮ ಪ್ರಜಾವಾತ್ಸಲ್ಯವಂತೂ ಹೊಗಳತಕ್ಕದ್ದಿರುತ್ತದೆ. ಮಹಾರಾಜರ ಆಜ್ಞಾಪಾಲನೆಗಾಗಿ ತಾವು ಎಷ್ಟು ದಕ್ಷರಾಗಿರುವಿರೋ, ಅದರಂತೆ ಈ ಪತ್ರಲೇಖಕನಾದರೂ ದಕ್ಷನಾಗಿರುತ್ತಾನೆ. ಇಷ್ಟೇಅಲ್ಲ, ಮಹಾರಾಜರ ಪ್ರತಿಯೊಂದು ಬಗೆಯ ಆಜ್ಞೆಯನ್ನು ಪರಿಪಾಲಿಸುವದೂ, ಅದನ್ನು ಉಲ್ಲಂಘಿಸುವವರನ್ನು ದಂಡಿಸುವದೂ ನನ್ನ ಇತಿಕರ್ತವ್ಯಗಳಾಗಿರುತ್ತವೆ. ಮಹಾರಾಜರು ತಮ್ಮ ದರ್ಬಾರದಲ್ಲಿ ನನಗಿತ್ತ ಆಜ್ಞೆಯು ತಮಗೆ ಇಷ್ಟರಲ್ಲಿ ತಿಳಿದಿರಲಿಕ್ಕೆ ಸಾಕು. ಅದರಂತೆ ನಡೆದೇ ತೀರುವದು ನನ್ನ ಕರ್ತವ್ಯವಾಗಿರುತ್ತದೆ. ಅವರ ಆಜ್ಞೆಯಂತೆ ನಡೆಯದೆ ಹಾಗೆಯೇ ಹಿಂದಿರುಗಿ ಹೋದರೆ ಅವರು ನನ್ನ ಮುಖಾವಲೋಕನವನ್ನಾದರೂ ಮಾಡಬಹುದೇ? ಮತ್ತು ನಾನಾದರೂ ಈ ಅಸಹ್ಯ ಅಪಮಾನವನ್ನು ಸಹಿಸುವದೆಂತು? ತಾವು ವಯಸ್ಸಿನಿಂದಲೂ, ಜ್ಞಾನದಿಂದಲೂ ವೃದ್ಧರಾಗಿರುತ್ತೀರಿ. ಆದುದರಿಂದ ತಾವೇ ಈ ನನ್ನ ಸಮಸ್ಯೆಯನ್ನು ಚೆನ್ನಾಗಿ ಬಿಡಿಸಿರಿ.

ತಾವು ತಿಳಿಸಿದಂತೆ ತಮಗೆ ಮಹಾರಾಜರ ಕೆಲವೊಂದು ಗುಪ್ತ ಸಂದೇಶವಿರಬಹುದೆಂಬದನ್ನು ಒಪ್ಪುತ್ತೇವೆ; ಆದರೆ ಅದು ಯಾವ ಕಾಲಕ್ಕೆ ಕಳಿಸಲ್ಪಟ್ಟಿತೋ ಆ ಕಾಲದ ದರ್ಬಾರದ ಸ್ಥಿತಿಗತಿಗೂ ಈಗಿನ ಸ್ಥಿತಿಗತಿಗೂ ಎಷ್ಟೋ ಬದಲಾವಣೆಯಾಗಿರುತ್ತದೆ. ಮಹಾರಾಜರಿಗೆ ಆಗ ಯಾವ ನಿಯಮಗಳು ಅತ್ಯವಶ್ಯವೆಂದು ತೋರುತ್ತಿದ್ದವೋ ಅವು ಈಗ ಅನವಶ್ಯಕಗಳೆಂದು ಅವರಿಗೆ ಅನಿಸುತ್ತವೆ. ಈ ಎಲ್ಲ ಸಂಗತಿಗಳನ್ನು ನೀವು ಚೆನ್ನಾಗಿ ಪರ್ಯಾಲೋಚಿಸಿ, ದುರ್ಗವನ್ನು ನಮ್ಮ ಸ್ವಾಧೀನಪಡಿಸತಕ್ಕದ್ದು. ಹಾಗಾಗದಿದ್ದರೆ ನಮಗೆ

ಸರಿಕಂಡ ಮಾರ್ಗವನ್ನವಲಂಬಿಸಿ ದುರ್ಗವನ್ನು ಸ್ವಾಧೀನಪಡಿಸಿಕೊಳ್ಳಬೇಕಾದೀತು. ತಾವು ಪ್ರತಿ ಭೀಷ್ಮರಂತೆ ವೀರರಾಗಿದ್ದು, ತಮ್ಮದಂಡಾಳುಗಳು ನನಗಿಂತ ಹೆಚ್ಚಾಗಿ ರುವದೆಂಬದನ್ನು ನಾನು ಬಲ್ಲೆನು; ಆದರೆ ತಮಗೆ ವಿನಂತಿಪೂರ್ವಕವಾಗಿ ತಿಳಿಸುವ ದೇನಂದರೆ, ನಮ್ಮ ಶಸ್ತ್ರಾಸ್ತ್ರಗಳು ಸುಧಾರಿಸಿದ ಪದ್ಧತಿಯವು. ನಮ್ಮ ಯುದ್ಧ ಪದ್ಧತಿಯೂ ಸುಧಾರಿಸಿದ್ದಾಗಿರುತ್ತದೆ. ಈ ಪತ್ರದೊಡನೆ ನಮ್ಮ ಹೊಸ ತೋಫಿನ ಒಂದು ಗುಂಡನ್ನು ತಮ್ಮ ಅವಲೋಕನಕ್ಕಾಗಿ ಬೇಕಂತ ಕಳಿಸಿರು ತ್ತೇವೆ ಈ ಗುಂಡನ್ನು ನೆಲದ ಮೇಲಿಂದ ಬೇಕಾದಷ್ಟು ಎತ್ತರದ ಪ್ರದೇಶದ ಮೇಲೆ ಹಾರಿಸಬಹುದು; ಹಾಗೂ ಇಚ್ಛಿತ ಸ್ಥಳಕ್ಕೆ ಹೋಗಿ ತಲುಪುತ್ತಲೇ ಇದು ಒಡೆದು, ಯಮದೂತರಂತೆ ಇದರ ಗರ್ಭದಿಂದ ಸಾವಿರಾರು ಲೋಹ ಶಲಾಕಗಳು ಹೊರಬಿದ್ದು ಸುತ್ತ-ಮುತ್ತಲಿನ ಜನಸಮ್ಮರ್ದವನ್ನು ಕ್ಷಣಾರ್ಧ ದಲ್ಲಿಯೇ ಯಮಪುರಿಗೆ ಅಟ್ಟುತ್ತವೆ. ಈ ಗುಂಡಿನಲ್ಲಿ ಆ ಬಗೆಯ ಶಕ್ತಿಯಿರು ವದೋ ಇಲ್ಲವೋ ಎಂಬದನ್ನು ತಿಳಕೊಳ್ಳುವ ಇಚ್ಛೆಯಿದ್ದರೆ ಈ ಪತ್ರ ತಂದಿರುವ ನಮ್ಮ ಸರದಾರ ಹಾಕೀಮಸಿಂಹರಿಗೆ ತಮ್ಮ ಮನೋದಯವನ್ನು ತಿಳಿಸಬೇಕು. ಅಂದರೆ ಇವರು ಅದರ ಪ್ರಯೋಗವನ್ನು ಮಾಡಿ ತೋರಿಸುತ್ತಾರೆ. ಈ ಪತ್ರ ಬರೆಯುವ ನಮ್ಮ ಉದ್ದೇಶವಿಷ್ಟೇ, ಇಂಥ ಸುಧಾರಿಸಿದ ಯುದ್ಧಸಾಮಗ್ರಿಯು ನಮ್ಮ ಬಳಿಯಲ್ಲಿರುವದರಿಂದ, ನಮ್ಮ ಸೈನ್ಯವು ಸಂಖ್ಯಾಬಲದಿಂದ ತಮಗಿಂತ ಅಲ್ಪವಿದ್ದರೂ ನಾವೇ ಜಯಶಾಲಿಗಳಾಗುವದು ಖಂಡಿತವು."

ಡಬ್ಲಿನ್ನನ ಆ ಮಾರುದ್ದ ಪತ್ರದ ಪರಿಣಾಮವು ದಂಡವರ ಸಿಂಹನ ಮನ ಸ್ಸಿನ ಮೇಲೆ ಯತ್ಕಿಂಚಿತ್ತೂ ಆಗಲಿಲ್ಲ. ಯಾಕಂದರೆ ರಾಜಾಜ್ಞೆಗಿಂತ ಸ್ವತಃ ದಂಡವರಸಿಂಹನಿಗೇ ಆ ಕಿಲ್ಲೆಯನ್ನು ಬಿಟ್ಟುಕೊಡುವ ಮನಸ್ಸಿರಲಿಲ್ಲ. ಮೇಲಾಗಿ ಅವನು ಗುಲಾಬಸಿಂಹನ ತಂತ್ರದಿಂದ ನಡೆಯುವ ಮನುಷ್ಯನಾಗಿದ್ದನು. ದಂಡ ವರಸಿಂಹನು ಹೆಸರಿಗೆ ಮಾತ್ರ ಆ ಕೋಟಕಾಂಗ್ರಾ ದುರ್ಗದ ಅಧಿಪತಿಯಾಗಿದ್ದು, ಅಲ್ಲಿಯ ಅಧಿಕಾರಸೂತ್ರಗಳೆಲ್ಲ ಗುಲಾಬಸಿಂಹನ ಹಸ್ತಗತವಾಗಿದ್ದವು. ಪ್ರಜೆ ಗಳನ್ನು ಯುಕ್ತಿಪ್ರಯುಕ್ತಿಗಳಿಂದ ಕಾಡಿ, ಅವರ ಧನಕನಕಗಳನ್ನು ಎತ್ತಿ ಹಾಕು ವದೇ ಗುಲಾಬಸಿಂಹನ ಮುಖ್ಯೋದ್ದೇಶವಾಗಿತ್ತು; ಆದರೆ ಗುಲಾಬನು ಆ ತನ್ನ ವ್ಯವಸಾಯವನ್ನು ತಾನು ಕೋಟಕಾಂಗ್ರಾದಿಂದ ಬಹು ದೂರದಲ್ಲಿದ್ದು ದಂಡವರಸಿಂಹನಂತಹ ನಾಮಧಾರಿ ಅಧಿಕಾರಿಗಳ ಮುಖಾಂತರವಾಗಿ ಚೆನ್ನಾಗಿ ಸಾಧಿಸಿಕೊಳ್ಳುತ್ತಿದ್ದನು. ಡಬ್ಲಿನ್ನನಿಗೆ ಕೋಟಕಾಂಗ್ರಾದ ಗವರ್ನರನ ಅಧಿಕಾರ

ಪ್ರಾಪ್ತವಾದ ಕೂಡಲೆ ಗುಲಾಬಸಿಂಹನು ದಂಡವರಸಿಂಹನಿಗೆ ಬೇರೆ ಪ್ರಕಾರದ ಸಲಹೆಯನ್ನು ಕೊಟ್ಟು ಅವನ ಸಹಾಯಕ್ಕಾಗಿ ಸಾವಿರಾರು ದಂಡಾಳುಗಳನ್ನು ಕಳಿಸಿದ್ದನು. ಹೀಗೆ ದಂಡವರನಿಗೆ ಗುಲಾಬಸಿಂಹನಿಂದ ಅಂತಸ್ಸಹಾಯವು ದೊರಕಿದ್ದರಿಂದ ಮೊದಲೇ ಸೊಕ್ಕಿನ ಸ್ವಭಾವದ ಅವನು ಮತ್ತಿಷ್ಟು ಕೊಬ್ಬೇರಿದ್ದನು. ಡಬ್ಲಿನ್ನನು ಕಟ್ಟಕಡೆಗೆ ಗೊತ್ತುಪಡಿಸಿದ್ದೇನಂದರೆ, ತನ್ನ ದಂಡಿನ ಬೀಡನ್ನು ಇಲ್ಲಿಂದ ಕಿತ್ತಿ ದುರ್ಗದ ಬಳಿಯಲ್ಲಿ ಬಿಡತಕ್ಕದ್ದು; ಕೋಟೆಯ ಭದ್ರತೆಯ ವಿಷಯವಾಗಿಯೂ ದಂಡವರಸಿಂಹನ ದಂಡಿನ ಬಲದ ವಿಷಯವಾಗಿಯೂ ಶಕ್ಯವಾದಷ್ಟು ತಿಳಕೊಳ್ಳತಕ್ಕದ್ದು; ಮತ್ತು ದಂಡವರಸಿಂಹನಿಗೆ ಇನ್ನೊಮ್ಮೆ ವಿನಂತಿ ಮಾಡಿಕೊಳ್ಳತಕ್ಕದ್ದು. ಅದು ಸಾಧಿಸದಿದ್ದರೆ ಅವನೊಡನೆ ಯುದ್ಧ ಹೂಡತಕ್ಕದ್ದು. ಡಬ್ಲಿನ್ನನು ಈ ತನ್ನ ಬೇತನ್ನು ಬೇರೆ ಯಾರಿಗೂ ತಿಳಿಸಲಿಲ್ಲ.

ಡಬ್ಲಿನ್ನನು ಹಾಕೀಮಸಿಂಹನನ್ನು ಕಳಿಸಿ ಬೆಳಗಾಗುತ್ತಲೆ ತನ್ನ ದಂಡಿನ ಠಾಣ್ಯವನ್ನು ಕಿತ್ತಿ ಸಸೈನ್ಯದೊಡನೆ ದುರ್ಗದ ಹತ್ತಿರಕ್ಕೆ ಬಂದನು. ದೂರಿನಿಂದಲೇ ಆ ಕಿಲ್ಲೆಯನ್ನು ನೋಡಿ ಇದು ಅಭೇದ್ಯವಿದೆಯೆಂದೂ ರಣವಿದ್ಯಾವಿಶಾರದನೇ ಇದನ್ನು ಕಟ್ಟಿರುವನೆಂದೂ ಡಬ್ಲಿನ್ನನ ಖಾತ್ರಿಯಾಯಿತು. ಆ ಕಿಲ್ಲೆಯು ಯಾವ ಗುಡ್ಡದ ಮೇಲೆ ಕಟ್ಟಲ್ಪಟ್ಟಿತ್ತೋ ಅದರ ಮೂರೂ ಮಗ್ಗಲುಗಳು ತೀರ ಕಟವಾಡಿಯುವಾಗಿದ್ದು, ಆ ಮೂರೂ ದಿಕ್ಕುಗಳಲ್ಲಿ ಬಾಣಗಂಗಾ ಎಂಬ ಗಿರಿನದಿಯು ಸುತ್ತುಗಟ್ಟಿ ಹರಿಯುತ್ತಿತ್ತು. ಆ ಪರ್ವತದ ನಾಲ್ಕನೇ ಕಡೆಗೆ ಮಾತ್ರ ಸಮಪಾತಳಿಯ ನೆಲವಿದ್ದು ಅದೊಂದೇ ಕಡೆಯಿಂದ ಆ ದುರ್ಗವನ್ನು ಪ್ರವೇಶಿಸಬಹುದಾಗಿತ್ತು; ಆದರೆ ದುರ್ಗಾಧಿಪತಿಯು ಮನಸ್ಸು ಮಾಡಿದರೆ ಆ ಮಾರ್ಗವನ್ನೂ ಅವನು ಸಹಜವಾಗಿ ಮುಚ್ಚಿ ಬಿಡಬಹುದಾಗಿತ್ತು. ಯಾಕಂದರೆ ಆ ಸಪಾಟ ನೆಲವು ಕೇವಲ ಅರ್ಧ ಮೈಲಿನಷ್ಟೇ ವಿಸ್ತಾರವಾಗಿದ್ದು, ಅದರ ಎಡಬಲಗಳಲ್ಲಿ ಸಣ್ಣಪುಟ್ಟ ಗುಡ್ಡಗಳು ಸಾಲುಗೊಂಡಿದ್ದವು ಆ ಎರಡೂ ಬದಿಯ ದಿನ್ನೆಗಳ ಮೇಲೆ ದುರ್ಗಾಧಿಪತಿಯು ತನ್ನ ಸೈನ್ಯವನ್ನು ನಿಲ್ಲಿಸಿ, ಶತ್ರುಗಳ ಮೇಲೆ ಗುಂಡು ಹಾರಿಸಹತ್ತಿದರೆ ಶತ್ರುಗಳು ಒಂದು ಹೆಜ್ಜೆ ಕೂಡ ಮುಂದರಿಯದಂತಿತ್ತು. ಅದು ಅಷ್ಟು ಇಕ್ಕಟ್ಟಿನ ಸ್ಥಳವಾಗಿದ್ದರೂ ದಂಡವರಸಿಂಹನ ಒಬ್ಬ ದಂಡಾಳೂ ಅತ್ತಣ ಯಾವ ದಿನ್ನೆಯಮೇಲೂ ಇರಲಿಲ್ಲ. ತಾನು ಅಸಾವಧಾನನಾಗಿರುವೆನೆಂಬದನ್ನು ಶತ್ರುಪಕ್ಷದವರಿಗೆ ತೋರಿಸುವ ಸಲುವಾಗಿಯೇ ಹಾಗೆ ನಟಿಸಿರಬಹುದೆಂದು ತಿಳಿದು, ಡಬ್ಲಿನ್ನನು ಆ ಪರ್ವತಶ್ರೇಣಿಗಳನ್ನು ಹತ್ತಿ ಅಚೇ

ಬದಿಗೆ ಆತನ ಕಡೆಯುವರಾರೂ ಹುದಗಿಕೊಂಡು ಕುಳಿತಿಲ್ಲೆಂಬದನ್ನು ಮನ ಗಂಡೇ ತನ್ನ ಸೈನ್ಯವನ್ನು ಮುಂದಕ್ಕೆ ಸಾಗಿಸಿದನು.

ದುರ್ಗಕ್ಕೆ ಹೋಗುವ ದಾರಿಯು ಮೊದಲು ಎಷ್ಟು ವಿಸ್ತಾರವಾಗಿದ್ದಿತೋ ಕಡೆಕಡೆಗೆ ಅದು ತೀರ ಸಂಕುಚಿತವಾಗಿತ್ತಲ್ಲದೆ, ಮುಂದೆ ಅದರಲ್ಲಿ ಇಬ್ಭಾಗ ವಾಗಿತ್ತು. ಆ ಎರಡೂ ಭಾಗಗಳು ದುರ್ಗಕ್ಕೆ ಇದ್ದ ಎರಡು ಪ್ರಚಂಡ ಬಾಗಿ ಲಿಗೆ ಹೋಗಿ ಸೇರಿದ್ದವು ಆ ಬಾಗಿಲಿಗೆ ಹೊಂದಿ ದೊಡ್ಡ ದೊಡ್ಡ ಬುರುಜು ಗಳಿದ್ದು ಅವುಗಳಲ್ಲೆಲ್ಲ ತೋಫುಗಳು ಸಜ್ಜಾಗಿ ಹೂಡಲ್ಪಟ್ಟಿದ್ದವು. ಆ ತೋ- ಫಿನ ಏಟುಗಳನ್ನು ಮೈ ಮೇಲೆ ತಕ್ಕೊಂಡು ಆ ದುರ್ಗವನ್ನು ಪ್ರವೇಶಿಸುವದು ಅಸಾಧ್ಯವಾಗಿತ್ತು. ಡಬ್ಲಿನ್ನನಿಗಿಂತ ದಂಡವರಸಿಂಹನ ಸೈನ್ಯವು ಬಹು ಸಂಖ್ಯಾಕ ವಾಗಿದ್ದಿತು. ಅದರ ಹೊರತು ಒಳಗಿನವರಿಗೆ ಒಂದು ವರ್ಷದ ವರೆಗೆ ಕೊಂಚ ವೂ ಕೊರತೆಯಾಗದಂತೆ ದಂಡವರಸಿಂಹನು ಧನ-ಧಾನ್ಯಗಳನ್ನು ಸಂಗ್ರಹಿಸಿಟ್ಟಿ ದ್ದನು. ಇಂಥ ಪರಿಸ್ಥಿತಿಯಲ್ಲಿ ತಾನು ದುರ್ಗವನ್ನು ಮುತ್ತಿ ಕುಳಿತರೆ ಪ್ರಯೋ ಜನವೇನೂ ಆಗದೆಂದೂ, ತನ್ನ ಸೈನ್ಯವು ಮಾತ್ರ ನಿರುತ್ಸಾಹ ಹೊಂದುವ ದೆಂದೂ ಡಬ್ಲಿನ್ನನು ಊಹಿಸಿ, ಯಾವುದೊಂದು ವಿಲಕ್ಷಣ ಸಾಹಸಪಟ್ಟು ದುರ್ಗ ವನ್ನು ಹಸ್ತಗತ ಮಾಡಿಕೊಳ್ಳಬೇಕೆಂದು ಯೋಚಿಸಿದನು.

ಅವನು ತನ್ನ ದಂಡಿನ ಬೀಡಿಗಾಗಿ ಜಯಂತಿಗಿರಿ ಎಂಬ ಚಿಕ್ಕ ಗುಡ್ಡ ವನ್ನು ನಿರ್ಧರಿಸಿದನು. ಯಾಕಂದರೆ ಆ ಗುಡ್ಡವು ದುರ್ಗವನ್ನು ಹಸ್ತಗತಮಾಡಿ ಕೊಳ್ಳಲಿಕ್ಕೆ ಸಾಧನೀಭೂತವಾಗುವಂತಿತ್ತು ಆ ಜಯಂತಿಗಿರಿಯ ಮೇಲೆ ಒತ್ತ ಟ್ಟಿಗೆ ಜಯಂತೀದೇವಿಯ ಪವಿತ್ರ ದೇವಾಲಯವೂ ಅದಕ್ಕೆ ಹೊಂದಿ ಒಂದು ಚಿಕ್ಕ ಮಠವೂ ಇದ್ದವು. ಡಬ್ಲಿನ್ನನು ಜಯಂತಿಗಿರಿಯ ಮೇಲೆ ಠಾಣ್ಯವನ್ನು ಹಾಕಿ ೩-೪ ದಿನಗಳಲ್ಲಿಯೇ ಮಣ್ಣಿನ ಕೋಟೆಯನ್ನು ರಚಿಸಿ ಅದರ ಮೇಲೆ ತನ್ನ ಭಯಂಕರ ತೋಫುಗಳನ್ನು ಏರಿಸಿ ಸಜ್ಜುಗೊಳಿಸಿದನು. ಶೆಲ್ ಎಂಬ ಪ್ರಖ್ಯಾತ ಗುಂಡುಗಳನ್ನು ಹಾರಿಸುವ ದೊಡ್ಡ ದೊಡ್ಡ ತೋಫುಗಳನ್ನು ಅವನು ಬೇಕಂ ತಲೇ ಹಿಂದೆ ಹೂಡಿಸಿದ್ದನು. ಅದರಂತೆ ದುರ್ಗಕ್ಕೆ ಹೋಗುವ ದಾರಿಯ ಎಡಬಲದ ಗುಡ್ಡದ ಸಾಲುಗಳಲ್ಲಿಯೂ ತನ್ನ ಕಡೆಯ ದಂಡನ್ನು ಗುಪ್ತವಾಗಿ ಇರಿಸಿದನು.

ಇಷ್ಟೆಲ್ಲ ಸಿದ್ಧತೆಯನ್ನು ಮಾಡಿಕೊಂಡರೂ ಡಬ್ಲಿನ್ನನಿಗೆ ಅದು ಅಪೂರ್ಣವೂ ನಿರಾಶಾಜನಕವೂ ಆಗಿ ತೋರಿತು. ಶತ್ರುಗಳಿಗೆ ತಿಳಿಯದ ಹಾಗೆ ಆ ದುರ್ಗ ದಲ್ಲಿ ತನ್ನ ಕಡೆಯ ಸಾವಿರಾರು ಜನರನ್ನು ಒಮ್ಮೆಲೆ ಹೊಗಿಸಿ, ಒಳಗಿನಿಂದಲೂ

ಹೊರಗಿನಿಂದಲೂ ಶತ್ರುಗಳನ್ನು ಮುತ್ತಿ ಹಣ್ಣಿಗೆ ತರುವದೇ ಶ್ರೇಯಸ್ಕರವಾದ ಮಾರ್ಗವೆಂದು ಅವನ ಮುಖ್ಯವಾದ ಬೇತಾಗಿತ್ತು; ಆದರೆ ಹಾಗೆ ಶತ್ರುಗಳಿಗೆ ತಿಳಿಯದಂತೆ ಆ ದುರ್ಗವನ್ನು ಸೇರುವದು ಅಶಕ್ಯವೇ ಆಗಿತ್ತು. ಯಾಕಂದರೆ ದುರ್ಗದ ಒಳಗೂ ಹೊರಗೂ ಅಖಂಡವಾದ ಪಹರೆಯಿದ್ದಿತು. ಆಗ ಡಬ್ಲಿನ್ನ ನಿಗೆ ಒಂದು ಯುಕ್ತಿಯು ಸೂಚಿಸಿತು. ಕೂಡಲೆ ಅವನು ತನ್ನ ಕೇವಲ ವಿಶ್ವಾಸದ ಒಬ್ಬಿಬ್ಬರಿಗೆ ಅದನ್ನು ತಿಳಿಸಿ ತಾನು ಬೈರಾಗಿಯ ವೇಷವನ್ನು ಧರಿಸಿದನು. ಹಾಕೀಮಸಿಂಹನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಂಡನು. ಅವರಿಬ್ಬರೂ ಕೂಡಿ ಆ ಹೊಸವೇಷದಿಂದ ಆ ಜಯಂತೀದೇವಿಯ ಗುಡಿಯಿಂದ ಹೊರಬಿದ್ದರು. ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರ ಕಡೆಗಿನ ದಾರಿಗಳನ್ನು ತುಳಿದು ಕಡೆಗೆ ಅವರು ಆ ಬಾಣಗಂಗೆಯ ದಂಡೆಗುಂಟ ಆ ಕೋಟೆಯ ಹಿಮ್ಮಗ್ಗಲಿಗೆ ಬಂದರು. ಅವರು ಮಾರ್ಗಕ್ರಮಿಸುತ್ತಿರುವಾಗ ಆ ಆ ಕಡೆಯ ದುರ್ಗದ ಗೋಡೆಯನ್ನೂ ಅತ್ತ ಕಡೆಯ ಪರ್ವತದ ಕಟವಾಡಿಯನ್ನೂ ಚೆನ್ನಾಗಿ ನಿರೀಕ್ಷಿಸುತ್ತಲೇ ಬಂದಿದ್ದರು. ದುರ್ಗದ ಹಿಮ್ಮಗ್ಗಲಿನಲ್ಲಿ ಆ ಹೊಳೆಯಲ್ಲಿ ಕಾಲುದಾರಿಯಾಗಿತ್ತು. ಅದರಿಂದ ಅವರೀರ್ವರೂ ಆ ನದಿಯನ್ನು ದಾಟಿ ಆ ದುರ್ಗದ ಕೆಳಗಡೆಗೆ ಹೋದರು. ಅಲ್ಲಿ ನೋಡತಕ್ಕದ್ದನ್ನು ತೀವ್ರವೇ ನೋಡಿಕೊಂಡು, ಅವರೀರ್ವರೂ ಪುನಃ ಆ ನದಿಯನ್ನು ದಾಟಿ ಅತ್ತಕಡೆಯ ಒಂದು ವಿಶಾಲವಾದ ವೃಕ್ಷದ ಕೆಳಗೆ ಕುಳಿತರು.

ಡಬ್ಲಿನ್ನನು ಬೈರಾಗಿಯ ವೇಷಧರಿಸಿ ಬರುವಾಗ ತನ್ನ ದುರ್ಬೀಣನ್ನು ತನ್ನ ಸಂಗಡ ತರಲಿಕ್ಕೆ ಮರೆತಿರಲಿಲ್ಲ. ಗಿಡದ ಕೆಳಗೆ ಕುಳಿತ ಬಳಿಕ ಅವನು ಅದನ್ನು ತನ್ನ ಜೋಳಿಗೆಯಿಂದ ಹೊರಗೆ ತೆಗೆದು ಆ ದಿಕ್ಕಿನ ದುರ್ಗದ ಗೋಡೆಯನ್ನು ನಿರೀಕ್ಷಿಸತೊಡಗಿದನು. ಅವನು ನೋಡನೋಡುತ್ತಿದ್ದಂತೆ ಈ ವರೆಗಿನ ಅವನ ಚಿಂತಾಕ್ರಾಂತ ಮುಖವು ಪ್ರಫುಲ್ಲಿತವಾಗಹತ್ತಿತು. ಆಗ ಅವನು ಹರ್ಷಭರದಿಂದ ಹಾಕೀಮಸಿಂಹನನ್ನು ಕುರಿತು:—ಹಾಕೀಮಸಿಂಹ, ದುರ್ಗವನ್ನು ಗುಪ್ತವಾಗಿ ಪ್ರವೇಶಿಸಲಿಕ್ಕೆ ಇದೊಂದೇ ಮಾರ್ಗವಿರುತ್ತದೆ. ಆದರೆ ಈ ದಾರಿಗೆ ಕಿಲ್ಲೆಯನ್ನು ಹತ್ತುವ ದಾರಿಯೆನ್ನುವದಕ್ಕಿಂತ, ಯಮಪುರವನ್ನು ಸೇರುವ ದಾರಿಯೆಂದರೆ ಚೆನ್ನಾಗಿ ಒಪ್ಪಬಹುದಾಗಿದೆ; ಮತ್ತು ಇದು ಇಂಥ ಕಠಿಣ ಮಾರ್ಗವಿರುವದೆಂದೇ ದಂಡವರಸಿಂಹನು ಇತ್ತ ಕಡೆಗೆ ಅಷ್ಟು ಕಠಿಣವಾದ ಪಹರೆಯನ್ನಿಟ್ಟಿರುವದಿಲ್ಲ. ಈ ಪರ್ವತದ ಈ ಗೋಡೆಯು ಕೋಡಿನಂತೆ ಕೇವಲ ನೀಟಾಗಿ ಹೋಗಿರುವದರಿಂದ ಇದನ್ನು ಏರುವದು ದುಸ್ತರವೇ ಸರಿ;

ಆದರೆ ಇದನ್ನು ೩-೪ ಜನರು ಏರಿ ಹೋದರೂ ನಮ್ಮ ಕೆಲಸವು ಆಗುವಂತಿದೆ. ಅಷ್ಟೇ ಜನರ ಸಹಾಯದಿಂದ ನಮ್ಮ ಸಾವಿರಾರು ಜನರನ್ನು ದುರ್ಗದಲ್ಲಿ ಒಯ್ಯಲಿಕ್ಕೂ ದುರ್ಗವನ್ನು ವಶಪಡಿಸಿಕೊಳ್ಳಲಿಕ್ಕೂ ಬರುವಂತಿದೆ ಈ ಮಾರ್ಗದಿಂದ ಮೇಲಕ್ಕೇರಿ ಹೋಗುವಲ್ಲಿ ವೀರರಲ್ಲದೆ ಮತ್ತಾರೂ ಯಶಸ್ವಿಗಳಾಗಲಾರರು.

ಅದಕ್ಕೆ ಹಾಕೀಮಸಿಂಹನು:—ಸಾಹೇಬ, ಈ ಕಟವಾಡಿಯನ್ನು ಏರಿ ಹೋಗುವಂತಹ ವೀರರು ನಮ್ಮ ದಂಡಿನಲ್ಲಿ ಇಲ್ಲೆಂದು ತಿಳಿಯಬೇಡಿರಿ. ಅಂಥವರು ಅಶ್ಯಲ್ಪರು; ಎಂದರೆ ಮೂರು ನಾಲ್ಕು ಜನರೇ ದೊರಕಬಹುದು. ಆದರೆ ತಮ್ಮ ಇಚ್ಛಿತದಂತೆ ಸಾವಿರಾರು ಜನರು ಮಾತ್ರ ಈ ದುರ್ಗವನ್ನು ಸೇರಲಿಕ್ಕೆ ಶಕ್ಯವಾಗಲಿಕ್ಕಿಲ್ಲ.

ಹಾಕೀಮಸಿಂಹನ ಮಾತಿಗೆ ನಕ್ಕು ಡಬ್ಲಿನ್ನನು:—ಸಿಂಹರೇ, ನಮ್ಮ ಕಡೆಯ ಒಬ್ಬ ವೀರನು ಈ ಕಟವಾಡಿಯನ್ನು ಹತ್ತಿ ಮೇಲಕ್ಕೆ ಹೋದರೂ ಸಾಕು. ಬಳಿಕ ಅವನೊಬ್ಬನೇ ಒಂದು ಸಾವಿರವೇಕೆ, ಹತ್ತು ಸಾವಿರ ಜನರನ್ನಾದರೂ ಸಹಜವಾಗಿ ಮೇಲಕ್ಕೆ ಒಯ್ಯಬಹುದು. ನಡೆಯಿರಿ, ಇನ್ನು ಛಾವಣಿಗೆ. ಮುಂದೆ ಮಾಡಬೇಕಾದ ಬೇತನ್ನು ಅಲ್ಲಿಯೇ ಮಾಡೋಣವಂತೆ; ಎಂದಂದು ಅವರೀರ್ವರೂ ಸಂಜೆಯ ಒಳಗಾಗಿ ತಮ್ಮ ಛಾವಣಿಯನ್ನು ಬಂದು ಸೇರಿದರು.

ಛಾವಣಿಗೆ ಬಂದ ಬಳಿಕ ಡಬ್ಲಿನ್ನನು ತನ್ನ ಕೇವಲ ವಿಶ್ವಾಸದ ೮-೧೦ ಜನರಿಗೆ ಏಕಾಂತದಲ್ಲಿ ಭೆಟ್ಟಿಯಾಗಿ, ಅವರಿಗೆ ಹೇಳತಕ್ಕದ್ದನ್ನು ಹೇಳಿ, ಅಂದೇ ರಾತ್ರಿ ಆ ದುರ್ಗವನ್ನು ವಶಪಡಿಸಿಕೊಳ್ಳುವದನ್ನು ನಿರ್ಧರಿಸಿದನು. ಕೂಡಲೆ ಡಬ್ಲಿನ್ನನು ತನ್ನ ಎಲ್ಲ ದಂಡನ್ನು ವ್ಯವಸ್ಥೆಗೊಳಿಸಿ, ಮುಮ್ಮಗ್ಗಲಿನ ಎರಡೂ ಬಾಗಿಲಗಳಮೇಲೆ ದಾಳಿಯನ್ನು ಇಟ್ಟನು. ಆಗ ಆತನ ಸೈನಿಕರು ಒಳ್ಳೇ ಉತ್ಸಾಹದಿಂದ "ಮಹಾರಾಜಾ ರಣಜಿತಕೀ ಜೈ!" "ಗುರೂಜೀಕಿ ಫತ್ತೆ!" ಎಂದು ಜಯಘೋಷ ಮಾಡತೊಡಗಿದರು. ಎಲ್ಲ ಕಡೆಗೂ ಹಿಲಾಲಿನ ಪ್ರಕಾಶವು ಪ್ರಕಾಶಿಸುತ್ತಿತ್ತು; ಹಾಗು ತೋಫುಗಳ ಗುಂಡಿನ ಸಪ್ಪಳವು ಧಡ್ ಧಡೆಂದು ಆಗಿ ವೈರಿಗಳ ಹೃದಯದಲ್ಲಿ ಕಂಪನವನ್ನುಂಟುಮಾಡುತ್ತಿತ್ತು; ಆದರೆ ಇದೆಲ್ಲ ಸಿದ್ಧತೆಯು ದಂಡವರನ ಲಕ್ಷ್ಯವನ್ನು ಇತ್ತ ಕಡೆಗೆ ವೇಧಿಸುವ ಸಲುವಾಗಿ ಮಾತ್ರ ಆಗಿತ್ತು. ನಿಜವಾಗಿ ನೋಡಿದರೆ, ಡಬ್ಲಿನ್ನನ ಕಡೆಯ ತೋಫಿನ ಗುಂಡುಗಳೊಂದೂ ದುರ್ಗದ ಮೇಲಾಗಲಿ ಒಳಗಾಗಲಿ ಹೋಗಿ ಬೀಳುತ್ತಿರಲಿಲ್ಲ. ಅವೆಲ್ಲ ದುರ್ಗದ ಹತ್ತರದ ಕಂದಕದಲ್ಲಿಯೇ ಬಿದ್ದು ಹೋಗುತ್ತಿದ್ದವು. ದಂಡು ಮುಂದು

ಮುಂದು ಹೋಗುತ್ತಿದ್ದಂತೆ ನಟಿಸುತ್ತಿದ್ದರೂ ಅದು ನಿಂತಸ್ಥಳದಿಂದ ಒಂದು ಮೊಳ ಕೂಡ ಮುಂದರಿದಿರಲಿಲ್ಲ. ಡಬ್ಲಿನ್ನನ ಬೇತು ಆತನ ಅಂತರಂಗದ ಜನರ ಹೊರತು ಮಿಕ್ಕವರಿಗೆ ಗೊತ್ತಾಗಿರಲಿಲ್ಲ. ಆದರಿಂದ ನಂದಸಿಂಹನಂತಹ ಆತನ ವಿರೋಧಿಗಳಿಗೆ ದಂಡಿನ ಹಾಗು ತೋಫಿನ ಆ ಅವ್ಯವಸ್ಥೆಯನ್ನು ಕಂಡು:-ಇಂದು ಡಬ್ಲಿನ್ನನಿಗೆ ಯಶವಂತಿಕೆ ದೊರೆಯುವದೇ ಇಲ್ಲ; ಪ್ರಸಂಗವಶಾತ್ ಇವನು ದಂಡವರಸಿಂದ ಸೋತು ಓಡಬಹುದಾಗಿದೆ, ಎಂದು ತರ್ಕಿಸುತ್ತ ತಮ್ಮ ಮನಸ್ಸಿನಲ್ಲಿ ಹಿರಿಹಿರಿ ಹಿಗ್ಗುತ್ತಿದ್ದರು.

ಡಬ್ಲಿನ್ನನು ಅಂದು ಮೂರೂಸಂಜೆಗೆ ಮೇಲೆ ಹೇಳಿದಂತೆ ತನ್ನ ದಂಡನ್ನು ಆ ದುರ್ಗದ ಪ್ರವೇಶದ್ವಾರದ ಕಡೆಗೆ ನಿಲ್ಲಿಸಿ, ಕೆಲ(ವಿಶಿಷ್ಟ)ಸಾವಿರಾರು ಜನರೊಡನೆ ತಾನು ಗುಪ್ತವಾಗಿ ಬೇರೆ ಕಡೆಗೆ ನಡೆದನು. ಅವನು ಎತ್ತ ಹೋದನೆಂಬದು ವಿಶಿಷ್ಟ ಜನರ ಹೊರತು ಮತ್ತಾರಿಗೂ ತಿಳಿಯಲಿಲ್ಲ. ಅವನು ತನ್ನ ಜನರೊಡನೆ ಆ ಕಟ್ಟಡವಿಯಲ್ಲಿ ಅಡ್ಡತಿಡ್ಡಾಗಿ ನಡೆದು, ನಾಲ್ಕು ತಾಸು ರಾತ್ರಿಗೆ ಆ ದುರ್ಗದ ಹಿಮ್ಮಗ್ಗಲಿಗೆ ಬಂದನು. ಅಲ್ಲಿಯ ನದಿಯನ್ನು ದಾಟಿ ಹೋಗುವ ಮೊದಲು ಅವನು ತನ್ನ ಕಡೆಯ ಸಮಸ್ತರಿಗೂ ಒಜಾಯಿಸಿ ಹೇಳಿದನೇನಂದರೆ, ಮಾಡತಕ್ಕ ಎಲ್ಲ ಕೆಲಸಗಳನ್ನು ಯಂತ್ರಗಳಂತೆ ಸುಮ್ಮನೆ ಮಾಡತಕ್ಕದ್ದು. ಬಾಯಿಂದ ಪಿಟ್ಟೆಂದು ಮಾತಾಡಲಾಗದು. ಯಾವನು ಗಟ್ಟಿಯಾಗಿ ಮಾತಾಡುವನೋ ಅವನಿಗೆ ಆಗಿಂದಾಗಲೆ ಕಠಿಣವಾದ ಶಿಕ್ಷೆಯು ವಿಧಿಸಲಾದೀತು. ಹೊಳೆಯೊಳಗಿಂದ ದಾಟಿಹೋಗುವಾಗ ಸ್ವಲ್ಪವೂ ಸಪ್ಪಳವಾಗದ ಹಾಗೆ ದಾಟಿ ಹೋಗತಕ್ಕದ್ದು. ನದಿಯನ್ನು ದಾಟಿಹೋದ ಬಳಿಕ ನಾನು ಗುಡ್ಡದ ಯಾವ ಕಟವಾಡಿಯನ್ನು ತೋರಿಸುವನೋ ಅದನ್ನು ಯಾರು ಚೆನ್ನಾಗಿ ಹತ್ತಬಲ್ಲರೋ ಅದಷ್ಟೇ ಜನರು ಹತ್ತುವ ಪ್ರಯತ್ನಮಾಡತಕ್ಕದ್ದು. ಯಾವನು ಎಲ್ಲಕ್ಕೂ ಮೊದಲು ಹತ್ತುವನೋ, ಹಾಗು ಈ ಹಗ್ಗದ ನಿಚ್ಚಣಿಕೆಯ ತುದಿಯನ್ನು ಅಲ್ಲಿಯ ಗಿಡಕ್ಕೆ ಭದ್ರವಾಗಿ ಕಟ್ಟುವನೋ ಅವನಿಗೆ ಐದ-ನೂರು ಬಂಗಾರದ ಮೊಹರುಗಳು ಇನಾಮವಾಗಿ ಕೊಡಲ್ಪಡುವವು. ಡಬ್ಲಿನ್ನನು ಹೀಗೆ ಹೇಳಿದವನೇ ಹಾಕೀಮ ಸಿಂಹನೊಡನೆ ಹೊಳೆಯಲ್ಲಿ ಇಳಿದನು. ಎಲ್ಲರೂ ಹೊಳೆದಾಟಿ ಹೋದಬಳಿಕ ಡಬ್ಲಿನ್ನನು ಕೆಲಜನ ದಂಡಾಳುಗಳನ್ನು ಹೊಳೆಗೆ ಮರಳಿ ಕಳಿಸಿ, ಅಲ್ಲಿಯ ಮೆತ್ತನ್ನ ಹುಲ್ಲನ್ನು ತರಿಸಿ, ಯಾವ ಕಡೆಯ ಕಟವಾಡಿಯನ್ನು ಹತ್ತಬೇಕಾಗಿತ್ತೋ ಅದರ ಕೆಳಗೆ ದಪ್ಪವಾಗಿ ಹರವಿಸಿದನು. ಬಳಿಕ ಆ ಕಠಿಣ ಪ್ರದೇಶವನ್ನು ಹತ್ತಿಹೋ-

ಗುವವರಲ್ಲಿ ಈರ್ಷೆಯು ಪ್ರಾರಂಭವಾಯಿತು.

ಇನಾಮು ಸಂಪಾದಿಸಬೇಕೆಂಬ ಇಚ್ಛೆಯುಳ್ಳವರೂ, ತಮ್ಮ ಒಡೆಯನ ಕೆಲಸಕ್ಕೆ ನೆರವಾಗಬೇಕೆಂಬ ಇಚ್ಛೆಯುಳ್ಳವರೂ ನಾ ಮುಂದೆ ನಾ ಮುಂದೆ ಎಂದು ಆ ಕಟವಾಡಿಯನ್ನು ಏರಲಾರಂಭಿಸಿದರು. ಹತ್ತಿ ಹತ್ತುವಾಗ ಎಷ್ಟೋ ಜನರು ಬೀಳುತ್ತಿದ್ದರು. ಆದರೂ ಡಬ್ಲಿನ್ನನ ಆಜ್ಞೆಯು ಮೇರೆಗೆ ಒಬ್ಬನೂ ಒದರಲಿಲ್ಲ. ಅಲ್ಪಾವಕಾಶದಲ್ಲಿಯೇ ಒಬ್ಬ ವೀರನು ಮುಂದರಿದು ಆ ಹಗ್ಗದ ನಿಚ್ಚಣಿಕೆಯ ತುದಿಯನ್ನು ದುರ್ಗದ ಗೋಡೆಯಮೇಲಿನ ಕಾರ್ಗತ್ತಲೆಯೊಳಗಿನ ಒಂದು ಗಿಡಕ್ಕೆ ಭದ್ರವಾಗಿ ಕಟ್ಟಿದನು. ಹಾಗೆ ಎಲ್ಲರಕ್ಕೂ ಮುಂದೆ ಹೋಗಿ ಸಾಹಸ ಮಾಡಿದವನು ಬೇರೆ ಯಾರೂ ಆಗಿರದೆ, ಡಬ್ಲಿನ್ನನ ಪರಮಮಿತ್ರನಾದ ಹಾಕೀಮು ಸಿಂಹನೇ ಆಗಿದ್ದನು. ಆ ಸಂಗತಿಯನ್ನು ಕೇಳಿ ಡಬ್ಲಿನ್ನನಿಗೆ ಪರಮಾಹ್ಲಾದವಾಯಿತು. ಕೂಡಲೆ ಡಬ್ಲಿನ್ನನು ಆ ನೂಲಿನ ಹಗ್ಗದ ನಿಚ್ಚಣಿಕೆಯ ಕೆಳದುದಿಯನ್ನು ಕೆಳಗಿನ ಒಂದು ದೊಡ್ಡ ಗಿಡಕ್ಕೆ ಬಿಗಿಯಾಗಿ ಕಟ್ಟಿದನು; ಹಾಗು ಅಲ್ಲಿ ನಿಂತಿದ್ದ ಆ ಸಾವಿರಾರು ಜನರಿಗೂ ಲಗುಬಗನೆ ಮೇಲಕ್ಕೇರಲಿಕ್ಕೆ ಹುಕುಮು ಮಾಡಿದನು. ರಾತ್ರಿಯ ಹನ್ನೆರಡು ಗಂಟೆಗೆ ಡಬ್ಲಿನ್ನನು ಆ ತನ್ನ ಎಲ್ಲ ಸಂಗಡಿಗರೊಡನೆ ಆ ದುರ್ಗದ ಗೋಡೆಯನ್ನೇರಿದನು.

ಮೇಲಕ್ಕೇರಿ ಹೋದಬಳಿಕ ದಂಡವರನ ಎಲ್ಲ ಸೈನ್ಯವೂ ದುರ್ಗದ ಮುಮ್ಮಗ್ಗಲಿಗೆ ಕಲೆತಿರುವ ತನ್ನ ದಂಡಿನ ಕಡೆಗೆ ಹೋಗಿರುವದೆಂಬದು ಡಬ್ಲಿನ್ನನಿಗೆ ಗೋಚರವಾಯಿತು. ದುರ್ಗದ ಹಿಮ್ಮಗ್ಗಲಿಗೆ ಸರ್ವಸಾಧಾರಣವಾದ ಪಹರೆಯು ಕೂಡ ಇರಲಿಲ್ಲ. ಅದು ಡಬ್ಲಿನ್ನನಿಗೆ ನಿದ್ರೆ ಬಂದವನಿಗೆ ಹಾಸಿಕೊಟ್ಟಂತೆಯೇ ಆಯಿತು. ಅವನು ತನ್ನ ಎಲ್ಲದಂಡಾಳುಗಳನ್ನು ಶ್ರೇಣಿಗೊಳಿಸಿ, ಶಿಸ್ತಿನಿಂದ ಅವರೆಲ್ಲರನ್ನು ಕರಕೊಂಡು ದುರ್ಗದೊಳಗೆ ನಡೆದನು. ಮಧ್ಯರಾತ್ರಿಯಾದುದರಿಂದಲೂ, ತಮಗೆ ಎದುರಾಗಿಬಂದಿದ್ದ ಡಬ್ಲಿನ್ನನ ದಂಡು ಹೆಚ್ಚಾಗಿ ಪರಿಬಾರದ್ದರಿಂದಲೂ, ಆಗ ವಿಶೇಷವಾಗಿ ಕತ್ತಲೆಗವಿದದ್ದರಿಂದಲೂ, ದಂಡವರ ಸಿಂಹನ ದಂಡಿನ ಮುಖ್ಯ ಮುಖ್ಯ ಅಧಿಕಾರಿಗಳು ಗೊರಿಕೆ ಹೊಡೆಯುತ್ತ ಮಲಗಿದ್ದರು. ತೋಫುಖಾನೆಯ ಗೋಲಂದಾಜರೂ ದಂಡಾಳುಗಳೂ ಕೆಲಸವಿರದ್ದರಿಂದ ತೂಕಡಿಸುತ್ತಿದ್ದರು. ಡಬ್ಲಿನ್ನನು ತನ್ನ ಜನರೊಡನೆ ದುರ್ಗವನ್ನು ಪ್ರವೇಶಿಸಿ ದುರ್ಗದ ಬಾಗಿಲ ಕಡೆಗೆ ನಡೆದಿರಲು, ನಡುವೆ ಒಂದು ಪಹರೆಯ ಚೌಕಿಯು ಹತ್ತಿತು. ಅದರಿಂದ ಅವರು ಸಾವಕಾಶವಾಗಿ ಹೋಗಿ ಚೌಕಿಯಲ್ಲಿ ದೂರದಿಂದಲೇ ಹಣಿಕಿ ಹಾಕಿದರು. ಪಹರೆಯುವರಿಬ್ಬರೂ ಆ ಕಡೆಗೆ ಮೋರೆ ಮಾಡಿಕೊಂಡು, ಮೈತುಂಬ ಹೊದ್ದುಕೊಂಡು

ತೂಕಡಿಸುತ್ತ ಕುಳಿತಿದ್ದರು. ನಾಲ್ಕೆಂಟು ಜನ ಸಶಸ್ತ್ರ ಶಿಪಾಯಿಗಳನ್ನು ಚೌಕಿಯ ಬಳಿಯಲ್ಲಿ ನಿಲ್ಲಿಸಿ, ಸದ್ದಾಗದಂತೆ ಉಳಿದ ಎಲ್ಲ ಜನರನ್ನೂ ಲಗುಬಗೆಯಿಂದ ಡಬ್ಲಿನ್ನನು ಮುಂದೆ ಸಾಗಿಸಿದನು. ಹಾಗೆ ಎಲ್ಲ ಜನರು ದಾಟಿ ಹೋದರೂ ಆ ಪಹರೆಯವರಿಗೆ ಎಚ್ಚರವಾಗಲಿಲ್ಲ!

ಡಬ್ಲಿನ್ನನು ತನ್ನ ಇಚ್ಛಿತ ಸ್ಥಳಕ್ಕೆ ಹೋಗುತ್ತಲೆ ಒಂದರ ಹಿಂದೊಂದರಂತೆ ಮೂರು ಬಾಣಗಳನ್ನು ಆಕಾಶದಲ್ಲಿ ಹಾರಿಸಿದನು. ಆ ಬಾಣಗಳ ದರ್ಶನದಿಂದ ಜಯಂತಿಗಿರಿಯೊಳಗಿನ ಅವನ ಸೆಲ್ ಗುಂಡುಗಳ ತೋಫುಖಾನೆಯು ಪ್ರಾರಂಭವಾಗಿ, ಅದರ ಗುಂಡುಗಳು ದುರ್ಗದ ಮುಖ್ಯ ಬಾಗಿಲಿನ ಮೇಲಿನ ದಂಡವರಸಿಂಹನ ದಂಡಿನ ಮೇಲೆಯೇ ತಪ್ಪದೆ ಬಂದು ಬೀಳಲಾರಂಭಿಸಿದವು. ಅರೆ ನಿದ್ದೆಯಲ್ಲಿದ್ದ ದಂಡವರನ ಸೈನಿಕರು ಆ ಗುಂಡಿನ ಅಮೋಘ ಶಕ್ತಿಯಿಂದ ಆ ಅವಸ್ಥೆಯಲ್ಲಿಯೇ ಪಟಪಟನೆ ಸತ್ತು ಯಮಲೋಕವನ್ನು ಕುರಿತು ಸಾಗಹತ್ತಿದರು! ದಂಡವರನ ಗೋಲಂದಾಜರು ಮಡಿಯಲು, ಅವನ ತೋಫುಖಾನೆಯು ಕಟ್ಟಾಯಿತು. ದಂಡವರನ ತೋಫುಖಾನೆಯು ಬಂದಾಗಲು, ಕೋಟೆಯ ಹೊರಗಿದ್ದ ಡಬ್ಲಿನ್ನನ ಸೈನಿಕರು ನಂದಸಿಂಹನ ಹುಕುಮನ್ನು ಮನ್ನಿಸದೆ, ದುರ್ಗದ ಬಾಗಿಲಿಗೆ ಧಾವಿಸಿ ಬಂದರು. ಅದೇ ಸಂಧಿಯಲ್ಲಿ ಡಬ್ಲಿನ್ನನು ಮತ್ತೊಂದು ಬಾಣವನ್ನು ಹಾರಿಸಲು, ಅವನ ಸೆಲ್ ಗುಂಡುಗಳ ತೋಫುಖಾನೆಯು ಕಟ್ಟಾಯಿತು. ಆ ಕೂಡಲೆ ಅವನು ತನ್ನ ಒಳಗಿನ ಜನರೊಡನೆ ಓಡುತ್ತ ಕೋಟೆಯ ಬಾಗಿಲಿಗೆ ಬಂದು ಅದನ್ನು ತೆರೆದನು. ಬಾಗಿಲು ತೆರೆಯಲ್ಪಡುತ್ತಲೆ ಡಬ್ಲಿನ್ನನ ಸಾವಿರಗಟ್ಟಲೆ ಸೈನ್ಯವು ದುರ್ಗವನ್ನು ಹೊಕ್ಕು:— ಮಹಾರಾಜಾ ರಣಜಿತಕೀ ಜಯ! ಡಬ್ಲಿನ್ನಸಾಹೇಬಕೀ ಜಯ! ಗುರೂಜಿಕೀ ಫತ್ತೆ! ಎಂದು ಜಯಜಯಕಾರ ಮಾಡಿತು. ಕಿಲ್ಲೆಯಲ್ಲಿ ಲೂಟಿ-ಸುಲಿಗೆಗಳನ್ನಾಗಲಿ, ದಂಗೆಯನ್ನಾಗಲಿ ಕೊಂಚವೂ ನಡಿಸಕೂಡದೆಂದು ತಮ್ಮ ಜನರಿಗೆ ಕಟ್ಟಪ್ಪಣೆ ಮಾಡಿ, ಡಬ್ಲಿನ್ನನು ಶಾಂತಿ ಸೂಚಕವಾದ ಬಿಳೀ ನಿಶಾನೆಯನ್ನು ದುರ್ಗದ ಮೇಲೆ ನಿಲ್ಲಿಸಿ, ದಂಡವರಸಿಂಹನ ಕಡೆಗೂ ಅದರಂತೆ ಒಂದು ಬಿಳೀ ನಿಶಾನೆಯನ್ನು ಕಳಿಸಿದನು.

ಅಭೇದ್ಯವೆಂದು ಈ ವರೆಗೆ ಪ್ರಸಿದ್ಧವಾದ ತನ್ನ ಕೋಟಕಾಂಗ್ರಾ ದುರ್ಗವನ್ನು ಡಬ್ಲಿನ್ನನು ಹೀಗೆ ಆಕಸ್ಮಿಕವಾಗಿ ನುಗ್ಗಿದ್ದನ್ನು ಕಂಡು ಆ ವೃದ್ಧ ದಂಡವರಸಿಂಹನು ತನ್ನ ಪಹರೆಯವರನ್ನು ಬಾಯಿಗೆ ಬಂದಂತೆ ಬೈಯ್ಯಹತ್ತಿದನು;

ತನ್ನ ಅಧಿಕಾರಿಗಳ ಮೇಲೆ ಹರಿಹಾಯ್ದನು. ತನ್ನ ದುರ್ಗವನ್ನು ವಶಪಡಿಸಲಾರೆನೆಂದು ಯಾವನು ಡಬ್ಲಿನ್ನನಿಗೆ ಒಳ್ಳೇ ದಿಮಾಖದಿಂದ ಹೇಳಿಕಳಿಸಿದ್ದನೋ ಆ ಅತ್ಯಂತ ಅಭಿಮಾನಿಯಾದ ವೃದ್ಧ ದಂಡವರಸಿಂಹನು ಸಂತಾಪದಿಂದ ಉರಿಯುಹತ್ತಿದನು. ಅವನು ತನ್ನ ಸೈನಿಕರಿಗೆ ಬಾಯಿಗೆ ಬಂದ ಹಾಗೆ ಅಸಂಬದ್ಧ ಹುಕುಮುಗಳನ್ನು ಮಾಡಹತ್ತಿದನು. ಸೈನಿಕರೆಲ್ಲರೂ ಡಬ್ಲಿನ್ನನ ಸೆಲ್ ಗುಂಡುಗಳ ತೋಫಖಾನೆಯ ಕಡಕದ ಸಹೋಕ ಝೇಂಕಾರದ್ದರಿಂದ ಅವರು ದಾರಿ ಸಿಕ್ಕತ್ತ ಓಡತೊಡಗಿದ್ದರು. ಇಷ್ಟರಲ್ಲಿ ಹಾಕೀಮಸಿಂಹನು ಡಬ್ಲಿನ್ನನ ಪತ್ರ ತಕ್ಕೊಂಡು ದಂಡವರನ ಬಳಿಗೆ ಹೋಗಿ ಅವನಿಗೆ ಅತ್ಯಂತ ವಿನಯದಿಂದ ಮುಜುರೆಮಾಡಿ, ಮೃದುಮಧುರ ಭಾಷಣದಿಂದ ಅವನ ಕುಶಲವನ್ನು ಕೇಳಿದನು. ಹಾಕೀಮಸಿಂಹನ ದರ್ಶನದಿಂದಂತೂ ದಂಡವರನ ಕ್ರೋಧವು ಮೇರೆದಪ್ಪಿತು! ಡಬ್ಲಿನ್ನನಿಗಿಂತ ಇವನನ್ನೇ ಮೊದಲು ತಿಂದು ಬಿಡಲಿಯಾ? ಎಂಬಂತೆ ಅವನಿಗೆ ಅನಿಸಿತು. ಆದರೆ ಹಾಕೀಮಸಿಂಹನ ಸ್ವಾಭಾವಿಕ ವಿನಯಾದಿ ಗುಣಗಳಿಂದ ಅವನ ಸಿಟ್ಟು ಶಾಂತವಾಯಿತು. ಅವನು ರಣನೀತಿಯ ಮೇರೆಗೆ ಹಾಕೀಮಸಿಂಹನನ್ನು ಸನ್ಮಾನದಿಂದ ಕುಳ್ಳಿರಿಸಿಕೊಂಡು, ಅವನು ತಂದ ಪತ್ರವನ್ನು ಓದಲಾರಂಭಿಸಿದನು:—

"ಮಹಾರಾಜ ದಂಡವರಸಿಂಹ ಬಹದ್ದೂರರವರಿಗೆ—

ನಾನು ಈ ರೀತಿಯಾಗಿ ದುರ್ಗವನ್ನು ಪ್ರವೇಶಿಸಿದುದನ್ನು ಕಂಡು ನಿಮಗೆ ಬಹಳ ಸಿಟ್ಟು ಬಂದಿರಬಹುದು; ಆದರೆ ಇದರಲ್ಲಿ ನನ್ನ ತಪ್ಪಿಲ್ಲೆಂಬುದನ್ನು ತಿಳಿದು ನೀವು ನನ್ನನ್ನು ಕ್ಷಮಿಸುವಿರೆಂದು ನಂಬಿರುವೆನು. ನೀವೂ ದರ್ಬಾರದ ನೌಕರರು; ನಾನೂ ದರ್ಬಾರದ ನೌಕರನು. ನಮ್ಮಿಬ್ಬರ ದಂಡಾಳುಗಳೂ ಮಹಾರಾಜರ ಸೈನಿಕರೇ. ಈ ವರೆಗೆ ಆದ ರಕ್ತಪಾತವು ಆಗಿಹೋಯಿತು. ಇನ್ನು ಮೇಲಿನ ಒಂದು ಬಿಂದು ರಕ್ತಪಾತದ ಜಬಾಬದಾರಿಯೂ ನಿಮ್ಮನ್ನೇ ಕೂಡಿರಬೇಕೆಂಬುದನ್ನು ಚೆನ್ನಾಗಿ ಲಕ್ಷ್ಯದಲ್ಲಿಟ್ಟು ನಡೆಯಿರಿ. ಇನ್ನು ನಾವಿಬ್ಬರೂ ಬಡಿದಾಡುವದು ಯೋಗ್ಯವಲ್ಲ. ನಾನು ನನ್ನ ಸಲುವಾಗಿ ಈ ದುರ್ಗವನ್ನು ಆಕ್ರಮಿಸಿರುವದಿಲ್ಲ ಕೇವಲ ರಾಜಾಜ್ಞೆಗಾಗಿ ಆಕ್ರಮಿಸಿರುತ್ತೇನೆ. ಮಹಾರಾಜರ ಹುಕುಮನ್ನು ಅಮಾನ್ಯಮಾಡುವದು ಅನುಚಿತವೆಂದು ನಿಮಗೆ ತಿಳಿಸುವ ಕಾರಣವಿಲ್ಲ ತಮ್ಮ ಲೌಕಿಕವು ಸ್ಥಿರವಾಗಿರಬೇಕೆಂದು ಬಯಸಿಯೇ ನಾನೀ ಮಾರ್ಗವನ್ನು ಅವಲಂಬಿಸಿರುತ್ತೇನೆ; ಹಾಗು ಯೋಗ್ಯವಾದ ಸೂಚನೆಯನ್ನು

ಸಕಾಲಕ್ಕೆ ಕೊಟ್ಟಿರುತ್ತೇನೆ. ತಾವು ಇದನ್ನು ಒಂದು ವೇಳೆ ಅಮಾನ್ಯಮಾಡಿ ದರೆ ದೇವರು ನನಗೆ ಒದ್ಧಿಕೊಟ್ಟಂತೆ ನಾನು ನಡೆಯತಕ್ಕವನು ಇತಿ........"

ಡಬ್ಲಿನ್ನನ ಪತ್ರ ವಾಚನದಿಂದ ದಂಡವರಸಿಂಹನ ಸಿಟ್ಟು ಪೂರಾ ಇಳಿ ಯಿತು. ಇಂಥ ಕುಶಾಗ್ರ ಬುದ್ಧಿಯ ತರುಣನೊಡನೆ ದ್ವೇಷ ಕಟ್ಟಿಕೊಂಡ್ಡು ಪೇಚಾಡುವದಕ್ಕಿಂತ, ಆತನ ಸ್ನೇಹಿತನಾಗಿ ಕ್ಷೇಮನಾಗಿ ಈ ದುರ್ಗದಿಂದ ಹೊರ ಹೊರಡುವದು ಉಚಿತವೆಂದು ತಿಳಿದು, ದಂಡವರನು ಡಬ್ಲಿನ್ನನ ಭೆಟ್ಟಿಗಾಗಿ ನಡೆ ದನು. ಡಬ್ಲಿನ್ನನು ದಂಡವರಸಿಂಹನನ್ನು ಒಳ್ಳೇ ಆದರದಿಂದ ಬರಮಾಡಿ ಕೊಂಡನು; ಹಾಗು ಅವನನ್ನು ಪ್ರಶಂಸಿಸಹತ್ತಿದನು. ಇಷ್ಟರಲ್ಲಿ ಒಬ್ಬ ಸವಾ ರನು ಡಬ್ಲಿನ್ನನ ಬಳಿಗೆ ಬಂದು:—ದುರ್ಗದ ಬಾಗಿಲ ಬಳಿಗೆ ಒಬ್ಬ ಸಾಂಡಣಿ ಸ್ವಾರನು ಬಂದಿದ್ದು, ಅವನ ಬಳಿಯಲ್ಲಿ ದಂಡವರಸಿಂಹರ ಹೆಸರಿನದೊಂದು ಲಕ್ಕೋಟೆಯಿದೆ, ಎಂದು ಹೇಳಿದನು. ಕೂಡಲೆ ಅವನನ್ನು ಒಳಗೆ ಬಿಡಲಿಕ್ಕೆ ಡಬ್ಲಿನ್ನನು ಹುಕುಮು ಮಾಡಲು, ಲಾಹೋರದಿಂದ ಒಂದೇಸವನೆ ಪಯ ಣದ ಮೇಲೆ ಪಯಣಮಾಡುತ್ತ ಬಹು ಶೀಘ್ರವಾಗಿ ಬಂದಿದ್ದ ಆ ಸವಾರನು ದಂಡವರಸಿಂಹನಿಗೆ ಒಂದು ರಾಜಾಂಕಿತ ಲಕ್ಕೋಟೆಯನ್ನು ಕೊಟ್ಟನು. ಡಬ್ಲಿ ನ್ನನಿಗೆ ಹುಕುಮು ಮಾಡಿ ಕಳುಹಿಕೊಟ್ಟ ಬಳಿಕ ೩-೪ ದಿನಗಳ ಮೇಲೆ ಮಹಾ ರಾಜಾ ರಣಜಿತಸಿಂಹ ಹಾಗು ಫಕೀರ ಅಜೀಜುದ್ದೀನ ಇವರಿಗೆ ಹೊಳೆಯಿತೇ ನಂದರೆ:—ಡಬ್ಲಿನ್ನನಿಗೆ ನಾವು ಹುಕುಮು ಮಾಡಿದಂತೆ ಈ ಮೊದಲು ದಂಡ ವರಸಿಂಹನಿಗೂ ಇದೇ ಬಗೆಯ ಹುಕುಮು ಮಾಡಿದ್ದೆವು. ಹೀಗಿದ್ದದರಿಂದ ಅವನು ಡಬ್ಲಿನ್ನನಿಗೆ ತನ್ನ ದುರ್ಗವನ್ನು ಸುಮ್ಮನೆ ಬಿಟ್ಟುಕೊಡಲಾರನು. ಅದ ಕ್ಕಾಗಿ ಕಿಲ್ಲೆಯನ್ನು ಡಬ್ಲಿನ್ನನಿಗೆ ಬಿಟ್ಟು ಕೊಡುವ ವಿಷಯವಾಗಿ ದಂಡವರ ಸಿಂಹನಿಗೆ ತೀವ್ರವಾಗಿ ಹುಕುಮು ಕಳಿಸಬೇಕೆಂದು ಯೋಚಿಸಿ, ಮಹಾರಾಜನು ಆ ಕೂಡಲೆ ಹುಕುಮು ಬರೆಯಿಸಿ, ಒಬ್ಬ ಸಾಂಡಣೀ ಸ್ವಾರನಿಗೆ ಬಹು ತೀವ್ರ ಕೋಟಕಾಂಗ್ರ್ಯಕ್ಕೆ ಹೋಗಲಿಕ್ಕೆ ತಿಳಿಸಿದನು. ಅದೇ ಸ್ವಾರನೇ ಇಂದು ಆ ಹುಕುಮನ್ನು ತಂದು ದಂಡವರನಿಗೆ ಒಪ್ಪಿಸಿದನು.

ಆಗ ದಂಡವರನು ಆ ಪತ್ರವನ್ನು ಒಡೆದು ಓದಿ, ಡಬ್ಲಿನ್ನನಿಗೆ ಹೇಳಿದ ನೇನಂದರೆ:—ದುರ್ಗವನ್ನು ನಿಮ್ಮ ಸ್ವಾಧೀನ ಪಡಿಸಲಿಕ್ಕೆ ಮಹಾರಾಜರಿಂದ ಇದೋ ಈಗ ಅಪ್ಪಣೆಯಾಗಿದೆ. ರಾಜಾಜ್ಞೆಯು ನನಗೆ ಸಂಪೂರ್ಣವಾಗಿ ಮಾನ್ಯವಿರುತ್ತದೆ. ಈ ಪತ್ರವು ಸಕಾಲಕ್ಕೆ ಬಂದು ತಲುಪಿದ್ದು ಬಹು ನೆಟ್ಟ

ಗಾಯಿತು; ಇಲ್ಲದಿದ್ದರೆ ತಾವು ಹೀಗೆ ಬಲಾತ್ಕಾರದಿಂದ ಈ ಕಿಲ್ಲೆಯನ್ನು ಸುಗ್ಗಿದ್ದರೂ ನಾನು ಯುದ್ಧದಲ್ಲಿ ನಿಮ್ಮನ್ನು ಸೋಲಿಸಿ ಹೊರಗಟ್ಟದೆ ಬಿಡುತ್ತಿರಲಿಲ್ಲ; ಎಂದು ಒಳ್ಳೇ ಟಬರಿನಿಂದ ನುಡಿದನು. ದಂಡವರನು ತನಗೆ ಎಷ್ಟು ಆಢ್ಯತೆಯಿಂದ ತಿಳಿಸಿದನೋ ಅದಕ್ಕೂ ಹೆಚ್ಚು ಆಢ್ಯತೆಯಿಂದ ತನ್ನ ಸಂದೇಶವನ್ನು ಇವನಿಗೆ ತಿಳಿಸದಿರಬಾರದೆಂದು ಯೋಚಿಸಿ, ಡಬ್ಲಿನ್ನನು:—ದಂಡವರಜಿ, ಹಾಗಾದರೆ ಈ ಪತ್ರವು ಇಂದು ಬರದೆ ಇನ್ನು ನಾಲ್ಕಾರು ದಿನಗಳಿಗೆ ಬರಬೇಕಾಗಿತ್ತು; ಅಂದರೆ ಇಂಥ ಪರಾಜಿತ ಸ್ಥಿತಿಯಲ್ಲಿಯೂ ತಾವು ಈ ದುರ್ಗವನ್ನು ಹೇಗೆ ರಕ್ಷಿಸಿಕೊಳ್ಳುತ್ತಿದ್ದಿರೆಂಬ ಪದ್ಧತಿಯಾದರೂ ನನಗೆ ನೋಡಿಕೊಳ್ಳಲಿಕ್ಕೆ ದೊರೆಯುತ್ತಿತ್ತು; ತಮ್ಮಂಥ ವೃದ್ಧರಿಂದ ಅನಾಯಾಸವಾಗಿ ದೊರೆಯಬಹುದಾಗಿದ್ದ ಆ ಅಮೂಲ್ಯ ಶಿಕ್ಷಣವು ಈಗ ದೊರೆಯದಿದ್ದದ್ದು ನನ್ನ ದುರ್ದೈವವೇ ಸರಿ! ಎಂದಂದು ಹಿಯ್ಯಾಳಿಸಿದನು.

ಡಬ್ಲಿನ್ನನ ಆ ಸಮಯ ಸೂಚಕ ಭಾಷಣವನ್ನು ಕೇಳಿದ ಉಭಯ ಪಕ್ಷದ ಅಧಿಕಾರಿಗಳಿಗೂ ನಗೆ ಬರದೆ ಇರಲಿಲ್ಲ. ಡಬ್ಲಿನ್ನನ ಆ ಭಾಷಣ ಹಾಗು ಕೈಕೆಳಗಿನವರ ಆ ಪರಿಹಾಸ ಪೂರ್ಣ ನಗೆ ಇವುಗಳಿಂದ ದಂಡವರನು ಸಂತಪ್ತನಾದನು; ಆದರೆ ಆಗ ಮಾಡುವದೇನು? ವಿಷಣ್ಣವದನದಿಂದ ಕೆಲ ಹೊತ್ತು ಸುಮ್ಮನೆ ಕುಳಿತು ಬಿಟ್ಟನು. ಡಬ್ಲಿನ್ನನು ಆ ಮೇಲೆ ತನ್ನ ಯಾವ ಅನುಚಿತ ವರ್ತನದಿಂದಲೂ ಅವನಿಗೆ ತಾಪಗೊಡದೆ, ಅವನನ್ನು ಗೌರವಿಸಿ, ಅವನಿಗೊಳ್ಳೇ ಸಂಭ್ರಮದ ಔತಣವನ್ನು ಕೊಟ್ಟನು. ಅದರಿಂದ ಆ ಮುಂಗೋಪಿಯಾಗಿದ್ದ ದಂಡವರನ ಸಿಟ್ಟು ಪೂರಾ ಇಳಿದು ಹೋಯಿತು. ಸಂತುಷ್ಟನಾದ ದಂಡವರನು ದುರ್ಗದಿಂದ ಹೊರಬೀಳುವ ಮೊದಲು ಆ ದುರ್ಗದೊಳಗಿನ ಮರ್ಮಸ್ಥಳಗಳನ್ನು ಡಬ್ಲಿನ್ನನಿಗೆ ತೋರಿಸಿಕೊಟ್ಟನು. ದಂಡವರನ ಸೈನಿಕರಲ್ಲಿಯು ಬಹು ಜನ ದಂಡಾಳುಗಳು ಆಗಲೆ ದಂಡವರನ ನೌಕರಿಯನ್ನು ಬಿಟ್ಟು, ಡಬ್ಲಿನ್ನನ ಸೈನ್ಯದಲ್ಲಿ ಸೇರ್ಪಡೆ ಹೊಂದಿದರು



## ೧೫ನೇ ಪ್ರಕರಣ—ದುರ್ಗಾಧಿಕಾರವು.

ಯಾವ ದಿವಸ ಬೆಳಗಿನ ಜಾವದಲ್ಲಿ ಲಾಹೋರದಿಂದ ದಂಡವರನಿಗೆ ಪತ್ರಬಂದು, ಅದರಂತೆ ಅವನು ಡಬ್ಲಿನ್ನನಿಗೆ ಆ ಕೋಟಕಾಂಗ್ರಾ ದುರ್ಗವನ್ನು ಬಿಟ್ಟುಕೊಟ್ಟನೋ, ಅಂದೇ ಮಧ್ಯಾಹ್ನದಲ್ಲಿ ಲಾಹೋರದಿಂದ ಮತ್ತೆ ಎರಡು ಪತ್ರಗಳು ಬಂದವು. ಒಂದು ದಂಡವರನಿಗೆ; ಇನ್ನೊಂದು ಡಬ್ಲಿನ್ನನಿಗೆ. ಆವೆರಡೂ ರಾಜಾ ಧ್ಯಾನಸಿಂಹನಿಂದ ಕಳಿಸಲ್ಪಟ್ಟಿದ್ದವು. ಅಂದೇ ಸಾಯಂಕಾಲಕ್ಕೆ ಚಾಂದಖಾನನಿಂದಲೂ ಡಬ್ಲಿನ್ನನಿಗೆ ಒಂದು ಪತ್ರವು ಬಂದಿತು. ಧ್ಯಾನಸಿಂಹನ ಪತ್ರಗಳ ಸಂಗತಿಯೇನಿತ್ತೆಂಬದು ಹೊರಬೀಳದಿದ್ದರೂ, ಡಬ್ಲಿನ್ನನ ವಕೀಲನಾದ ಚಾಂದಖಾನನ ಪತ್ರದ ಸಂಗತಿಯಿಂದ ಅವರ ಅನುಮಾನವು ತೋರಬಹುದಾಗಿತ್ತು. ಅದರಿಂದ ಆದೇ ಪತ್ರದ ಸಾರಾಂಶವನ್ನು ಇಲ್ಲಿ ಕೊಡುವೆವು:—

"ಡಬ್ಲಿನ್ನಸಾಹೇಬ, ತಾವು ಯಾವ ದಿವಸ ಇಲ್ಲಿಂದ ಹೊರಟುಹೋದಿರೋ, ಆ ದಿವಸವನ್ನು ಈ ಲಾಹೋರಿಗರು ಎಂದೂ ಮರೆಯುವಂತಿಲ್ಲ. ತೇಜೋಮಯ ಸೂರ್ಯನು ಪಶ್ಚಿಮಾಂಬುಧಿಯಲ್ಲಿ ಮುಗ್ಗುತ್ತಲೇ ಭೂತಲವೆಲ್ಲವೂ ಅಂಧಕಾರದಿಂದ ವ್ಯಾಪ್ತವಾಗುವಂತೆ, ನಮ್ಮ ಹುಜೂರರವರು ಲಾಹೋರದಿಂದ ಕೋಟಕಾಂಗ್ರಾದ ಕಡೆಗೆ ಸಾಗುತ್ತಲೇ ಈ ಪಟ್ಟಣದಲ್ಲೆಲ್ಲ ಔದಾಸೀನ್ಯವೆಂಬ ಕತ್ತಲೆಯು ಪಸರಿಸಿಬಿಟ್ಟಿತು! ಮಹಾರಾಜರು ತಮ್ಮನ್ನು ಕಳಿಸಲಿಕ್ಕೆ ಬಂದಾಗ ಅವರ ಮುಖದ ಮೇಲೆ ಎಷ್ಟು ವಿಷಣ್ಣತೆಯು ವ್ಯಾಪ್ತವಾಗಿತ್ತೆಂಬದನ್ನು ತಾವಾದರೂ ಮರೆತಿರಲಿಕ್ಕಿಲ್ಲ. ಅಂದಿನ ದರ್ಬಾರವು ಕಳೆಹೀನವಾಗಿ ತೋರುತ್ತಿತ್ತು; ಹಾಗು ಮಹಾರಾಜರು ಆ ಸಂಗತಿಯನ್ನು ಸ್ವಮುಖದಿಂದ ಆಡಿ ಸಹ ತೋರಿದರು!

ಕಾಲ ನಿಯಮದಂತೆ ಆ ಉದಾಸೀನತೆಯು ಮುಂದೆ ನಾಲ್ಕಾರು ದಿವಸಗಳಲ್ಲಿ ಕಡಿಮೆಯಾಯಿತು; ಹಾಗು ನಿಮ್ಮ ವಿರುದ್ಧ ಪಕ್ಷದ ಜನರು ಸಮಯವರಿತು ಮಹಾರಾಜರನ್ನು ನಿಮ್ಮ ವಿರುದ್ಧವಾಗಿ ಏಳುವಂತೆ ಪ್ರಯತ್ನಿಸಹತ್ತಿರುತ್ತಾರೆ; ಆದರೆ ಮಹಾರಾಜರು ಗಂಭೀರ ಸ್ವಭಾವದವರಾದ್ದರಿಂದ ಅವರು ಯಾಗ ಮಾತಿನ ಕಡೆಗೂ ಲಕ್ಷ್ಯಗೊಡುವದಿಲ್ಲ. ದರ್ಬಾರದಲ್ಲಿ ನಿಮ್ಮ ವಿಷಯದ ನಿಂದೆಗೆ ಪ್ರಾರಂಭವಾದರೆ ಒಮ್ಮೊಮ್ಮೆ ನಕ್ಕು, ಒಮ್ಮೊಮ್ಮೆ ಸಂತಾಪಗೊಂಡು ಅದಕ್ಕೆ ತಡೆಯನ್ನುಂಟು ಮಾಡುತ್ತಿರುತ್ತಾರೆ. ನಮ್ಮ ರಣಜಿತಸಿಂಹ ಮಹಾರಾಜರಿಗೆ ಮನುಷ್ಯ ಸ್ವಭಾವದ ಪರೀಕ್ಷೆಯು ಚೆನ್ನಾಗಿ ಇದೆ. ಆದರಿಂದ ಅವ

ಕಲ್ಲಿ ಉಂಟಾಗಿರುವ ನಿಮ್ಮ ವಿಷಯದ ಆದರವು ಎಂದೂ ಯಾತರಿಂದಲೂ ಕಡಿಮೆಯಾಗುವಂತಿಲ್ಲ. ವಿರುದ್ಧ ಪಕ್ಷದವರು ಎಷ್ಟು ಅಕಾಂಡತಾಂಡವ ಮಾಡಿದರೂ, ಸಾಹೇಬರ ದಂಡಿನ ಶಿಸ್ತಿನ ಪ್ರಯಾಣದ ಪ್ರಶಂಸೋದ್ಗಾರಗಳು ಆಗಾಗ್ಗೆ ದರ್ಬಾರದಲ್ಲಿ ಪ್ರವೇಶಿಸಿ ಎಲ್ಲರನ್ನೂ ಬೆರಗುಗೊಳಿಸುತ್ತಿರುತ್ತವೆ. ಸೈನ್ಯದವರಿಂದ ಎಲ್ಲಿಯಾದರೂ ಆದ ಪ್ರಜೆಗಳ ಯತ್ಕಿಂಚಿತ್ತು ಹಾನಿಯನ್ನು ಕೂಡ ಹುಜೂರರವರು ಸರಕಾರೀ ಖಜೀನೆಯಿಂದ ತುಂಬಿ ಕೊಟ್ಟ ಸಂಗತಿಯು ದರ್ಬಾರಕ್ಕೆ ತಲುಪಿ ಮಹಾರಾಜರನ್ನು ಸಂತುಷ್ಟಗೊಳಿಸಿರುತ್ತದೆ! ಈ ಸಂಗತಿಯನ್ನು ಕೇಳಿ ಮಹಾರಾಜರು ಪ್ರೇಮ ಸಂತುಷ್ಟಮನಸ್ಕರಾಗಿ ದರ್ಬಾರ ದಲ್ಲಿ ರಾಜಾ ಧ್ಯಾನಸಿಂಹರನ್ನು ಕುರಿತು:—ರಾಜಾಜೀ, ಡಬ್ಲಿನ್ನ ಸಾಹೇಬನು ನಿಜವಾಗಿಯೂ ಕಾರ್ಯದಕ್ಷನೂ ಸಚ್ಚರಿತ್ರನೂ ಆಗಿರುತ್ತಾನೆ. ಪ್ರತ್ಯಕ್ಷ ನಮ್ಮ ಸ್ವಾರಿಯಲ್ಲಿ ಯಾವ ಸೈನ್ಯವು ತನ್ನ ನೈಸರ್ಗಿಕವಾದ ಉಚ್ಛೃಂಖಲ ವೃತ್ತಿ ಯನ್ನು ತೊರೆಯುವದಿಲ್ಲವೊ, ಅಂಥ ಸೈನ್ಯವು ಡಬ್ಲಿನ್ನ ಸಾಹೇಬನ ಹುಕುಮು ಗಳನ್ನು ತಪ್ಪದೆ ಪಾಲಿಸುತ್ತಿರುವದನ್ನು ನೋಡಿದರೆ ಸಾಹೇಬನು ಒಳ್ಳೇ ಕರ್ತೃತ್ವ ಶಾಲಿಯಿರುವನೆಂದು ಖಾತ್ರಿಯಾಗುತ್ತದೆ. ನಮ್ಮ ಕೋಟಕಾಂಗ್ರಾ ಪ್ರಾಂತಕ್ಕೆ ತಕ್ಕ ಅಧಿಕಾರಿಯೇ ದೊರೆತನು! ಎಂದು ಹುಜೂರರವರನ್ನು ಸ್ತುತಿಸಿದರು.

ಮಹಾರಾಜರ ಈ ನುಡಿಗಳನ್ನು ಕೇಳಿ ತಮ್ಮ ವಿರುದ್ಧ ಪಕ್ಷದವರಿಗೆ ಏನೆನಿಸಿರಬಹುದೆಂಬದನ್ನು ನಾನು ವರ್ಣಿಸಲಸಮರ್ಥನು; ಆದರೆ ಅದರಿಂದ ನಮ್ಮ ಹುಜೂರರವರ ಪಕ್ಷಕ್ಕೆ ಮಾತ್ರ ಅತ್ಯಂತ ಆನಂದವಾಯಿತು. ತುಸ ದಿವಸಗಳಲ್ಲೇ ನಮ್ಮ ಸಾಹೇಬರ ಮೇಲೆ ಒದಗಿದ್ದ ಪ್ರಾಣಸಂಕಟದ ಸುದ್ದಿಯು ದರ್ಬಾರವನ್ನು ಪ್ರವೇಶಿಸಿತು. ಅಷ್ಟರಲ್ಲಿ ಹುಜೂರರವರ ಪತ್ರವೂ ಬಂತು ಅದನ್ನು ನೋಡಿ ವಿರುದ್ಧ ಪಕ್ಷದವರು ಆ ಸಂಗತಿಯನ್ನು ವಿಪರ್ಯಾಸಗೊಳಿಸಲಾರಂಭಿಸಿದರು; ಆದರೆ ಮಹಾರಾಜರು ಅವರಿಗೆ ಏನೂ ಹೇಳಲಿಲ್ಲ. ಹುಜೂರರವರ ಸ್ವಾರಿಯು ಕೋಟಕಾಂಗ್ರಾದ ಸಮೀಪಿಸಿದ ಹಾಗೆ ದರ್ಬಾರದಲ್ಲಿ ಸುದ್ದಿಗಳೇಳಹತ್ತಿದವೇ ನಂದರೆ:—ಏನಾದರೂ ದಂಡವರನು ದುರ್ಗವನ್ನು ಹುಜೂರರವರ ವಶಪಡಿಸ ಲಾರನೆಂದೂ, ಕಡೆಗೆ ಡಬ್ಲಿನ್ನಸಾಹೇಬನು ಹತಕರ್ಮನಾಗಿ ದರ್ಬಾರಕ್ಕೆ ಮರಳಿ ಬರುವನೆಂದೂ, ಆಗ ದರ್ಬಾರದಲ್ಲಿ ಅವನ ಅವಹೇಲನೆಯು ಒಹು ಚೆನ್ನಾಗಿ ಆಗುವದೆಂದೂ ಮುಂತಾದ ಸುದ್ದಿಗಳು ಮಹಾರಾಜರ ಕಿವಿಗೆ ತಲುಪಿದವು. ಹೀಗೆ ಒದದ್ದು ಒಂದು ಬಗೆಯಿಂದ ವಿಹಿತವೇ ಆಯಿತೆಂದೆನ್ನಬಹುದು,

ಯಾಕಂದರೆ, ಆದರಿಂದ ಮಹಾರಾಜರೂ ಫಕೀರಜೀಯುವರೂ ಜಾಗ್ರತರಾದರು. ಕೂಡಲೆ ಮಹಾರಾಜರು ದಂಡವರನಿಗೆ ಈ ಮೊದಲು ಕೊಟ್ಟ ಹುಕುಮನ್ನು ರದ್ದುಪಡಿಸಿದ ಆಜ್ಞೆಯನ್ನು ಕಳಿಸಿದರು. ಅದು ನನ್ನ ಈ ಪತ್ರದ ಮೊದಲೇ ಅಲ್ಲಿಗೆ ಬಂದಿರಲಿಕ್ಕೆ ಸಾಕು.

ನಮ್ಮ ಹುಜೂರರವರ ಮಾರ್ಗದಲ್ಲಿ ವಿಘ್ನಗಳನ್ನುಂಟು ಮಾಡುವವರಲ್ಲಿ ಧ್ಯಾನಸಿಂಹನ ಅನುಜನಾದ ಗುಲಾಬಸಿಂಹನೇ ಪ್ರಮುಖನೆಂಬ ಸಂಗತಿಯು ರಣಜಿತಸಿಂಹರಿಗೆ ಹೊಳೆಯಲು, ಅವನ ಬಂದೋಬಸ್ತ ಮಾಡಲಿಕ್ಕೆ ಅವರು ಬೇರೆ ಉಪಾಯವನ್ನೇ ಕೈಕೊಂಡರು. ಕೂಡಲೆ ಅವರು ಧ್ಯಾನಸಿಂಹನನ್ನು ಕುರಿತು:—ರಾಜಾಜೀ, ನಾವು ನಿಮ್ಮ ಜಹಾಗೀರನ್ನು ಬಹು ದಿನಗಳಿಂದ ನೋಡಿರುವದಿಲ್ಲ. ನಾಳೆಯೇ ನಾವು ನಿಮ್ಮ ಜಹಗೀರಿನ ಮುಲುಖನ್ನು ನೋಡಿಬರುವದಕ್ಕೆಂದು ಹೊರಡತಕ್ಕವರಿರುತ್ತೇವೆ. ಆದುದರಿಂದ ಸಾಧ್ಯವಾದಷ್ಟು ಬೇಗನೆ ಸಿದ್ಧತೆಗೊಳಿಸಿರಿ. ನಮ್ಮ ಸ್ವಂತದ ಸೈನ್ಯವನ್ನೂ ನಾವು ಅಲ್ಲಿಗೆ ಒಯ್ಯತಕ್ಕವರಿರುತ್ತೇವೆ; ಎಂದು ಅಪ್ಪಣೆ ಮಾಡಿದ್ದನ್ನು ಕೇಳಿ, ರಾಜಾ ಧ್ಯಾನಸಿಂಹನು ಚಕಿತನಾದನು. ಚಿಂತಾಗ್ರಸ್ತನಾದ ಅವನು ವಿನಮ್ರಭಾವದಿಂದ:—ಮಹಾರಾಜರ ಆಜ್ಞೆಯನ್ನು ಶಿರಸಾವಹಿಸಿರುತ್ತೇನೆ; ಆದರೆ ಈಗ ಭೀಕರವಾದ ಬೇಸಿಗೆ....ಧ್ಯಾನಸಿಂಹನು ಮತ್ತೆ ಏನೋ ಹೇಳತಕ್ಕವನು. ಅಷ್ಟರಲ್ಲಿ ಮಹಾರಾಜರು ಅವನನ್ನು ತಡೆದು, ನಿಶ್ಚಯಾತ್ಮಕ ದನಿಯಿಂದ:—ನಿಮ್ಮ ಈ ಹುರುಳಿಲ್ಲದ ತಡೆಗಳಿಗೆ ನಾವು ಅಂಜುವವರಲ್ಲ. ನಾವು ನಾಳೆ ಬೆಳಿಗ್ಗೆ ಹೊರಡತಕ್ಕವರೇ. ಈಗ ಭಯಂಕರವಾದ ಬೇಸಿಗೆಕಾಲವೆಂಬುದೂ, ಪ್ರಯಾಣವು ಬಹು ದೂರದ್ದೆಂಬುದೂ ನಮಗೆ ಗೊತ್ತಿಲ್ಲವೆ? ಆದರೆ ನಿಮ್ಮ ನಾಡಂತೂ ಒಳ್ಳೇ ತಂಪಿನದೂ ಆರೋಗ್ಯದಾಯಕವಾದದ್ದೂ ಆಗಿದೆ. ಅಲ್ಲಿಗೆ ಹೋದ ನಾಲ್ಕೆಂಟು ದಿನಗಳಲ್ಲೇ ನಮ್ಮ ಎಲ್ಲ ತಾಪವೂ ಕಡಿಮೆಯಾಗಿ, ನಮಗೆ ಒಳ್ಳೇ ಆರಾಮವೆನಿಸಬಹುದು. ಆದುದರಿಂದ ನೀವು ಈಗಲೆ ಕೋರ್ಟನೀಸಾಹೇಬನಿಗೂ ಖೋಸಾಲಸಿಂಹನಿಗೂ ನಮ್ಮ ಸ್ವಾರಿಯ ಸಿದ್ಧತೆಗೊಳಿಸಲಿಕ್ಕೆ ತಿಳಿಸಿರಿ. ಬಿಸಿಲಗಾಲವಾದ್ದರಿಂದ ಬೇಗನೆ ಬೆಳಗಿನ ಜಾವದ ೩-೪ಗಂಟೆಗೇ ಪ್ರಯಾಣ ಬೆಳೆಸೋಣ, ಎಂದು ಅಪ್ಪಣೆ, ಮಾಡುತ್ತಲೆ "ಜೀ ಹ ಕುಂ" ಎಂದೆನ್ನುತ್ತ ಧ್ಯಾನಸಿಂಹನು ದರ್ಬಾರದಿಂದ ಹೊರಟು ನಡೆದನು. ಅವನೊಡನೆ ಕೇವಲ ಅವನ ಪುಚ್ಛದಂತಿದ್ದ ಕೆಲ ಸಭಿಕರೂ ಹೊರಟುಹೋದರು. ಅವರೆಲ್ಲರ ಕಡೆಗೆ ಸಂತಾಪ ಮಿಶ್ರಿತವಾದ

ದೃಷ್ಟಿಯಿಂದ ನೋಡುತ್ತ ಮಹಾರಾಜರು ತಮ್ಮ ದರ್ಬಾರದ ಮುಖ್ಯ ಕೆಲಸಕ್ಕೆ ತೊಡಗಿದರು.

ಕೆಲಹೊತ್ತಿನ ಮೇಲೆ ಧ್ಯಾನಸಿಂಹನು ದರ್ಬಾರವನ್ನು ಮತ್ತೆ ಪ್ರವೇಶಿಸಿ ತನ್ನ ಸ್ಥಳದ ಮೇಲೆ ಕುಳಿತನು. ಅವನ ಹಿಂದೆಯೇ ಬಂದ ೩-೪ ಜನ ಸರದಾರರು ಸಿದ್ಧತೆಯೆಲ್ಲವೂ ಆಗಿದೆಯೆಂದು ಅವನಿಗೆ ತಿಳಿಸಿದರು. ಆ ಕೂಡಲೆ ಧ್ಯಾನ ಸಿಂಹನು ಒಳ್ಳೇ ನಮ್ರಭಾವದಿಂದ ಎದ್ದುನಿಂತು, ಮಹಾರಾಜರೆದುರಿಗೆ ಕೈಜೋಡಿಸಿ:—ಮಹಾರಾಜ, ನಾನು ತಮ್ಮ ದಾಸಾನುದಾಸನು. ಮಹಾರಾಜರ ಕೃಪೆಯಿಂದಲೇ ಕಿಂಕರನಾಗಿದ್ದ ನಾನು ಈ ಘನತರ ಪದವಿಗೇರಿರುವೆನು. ನನಗೂ ನನ್ನ ತಮ್ಮಂದಿರಿಗೂ ದಯಪಾಲಿಸಿದ ಜಹಗೀರಿನ ಮುಲುಖುಗಳಿಗೆ ಮಹಾರಾಜರ ಪಾದಧೂಳಿಯು ಬೀಳುವ ಸುಯೋಗವೊದಗಿರುವದನ್ನು ಕಂಡು ನಮ್ಮೆಲ್ಲರಿಗೆ ಅತ್ಯಂತ ಸೌಭಾಗ್ಯವೆನಿಸಿರುತ್ತದೆ; ಆದರೆ ಈ ಬಡವರ ಗುಡಿಸಿಲುಗಳಿಗೆ ತಲುಪಲಿಕ್ಕೆ ಮಹಾರಾಜರಿಗೇನು ತುಸ ಖರ್ಚು ತಗಲುವದೋ? ಮಹಾರಾಜರು ಸ್ವಾರಿಯ ಮೇಲೆ ಹೊರಟರೆ ಹೆಚ್ಚು ಖರ್ಚು ತಗಲುತ್ತದೆ. ಆ ಅನವಶ್ಯಕ ಖರ್ಚು ಆಗಬಾರದೆಂದು ನನ್ನ ಮನೀಷೆಯಿದೆ. ದೇವರ ದಯೆಯಿಂದ ಈ ವರ್ಷ ನಮ್ಮ ಜಹಗೀರುಗಳ ಆದಾಯವೂ ಚೆನ್ನಾಗಿ ಆಗಿರುತ್ತದೆ. ಮಹಾರಾಜರು ಜಹಗೀರಿಗೆ ಬಂದರೆ ಯಾವ ವಿಶೇಷವಾದ ನಜರಾಣೆಯನ್ನು ನಾನು ಮಹಾರಾಜರಿಗೆ ಅರ್ಪಿಸಬೇಕೆಂದಿದ್ದೆನೋ ಅದನ್ನು ಈಗಲೇ ಇಲ್ಲಿಯೇ ಅರ್ಪಿಸುತ್ತೇನೆ. ಮಹಾರಾಜರ ಅಜ್ಞೆಯಾದರೆ ಇಂದೇ ಒಂಬತ್ತು ಲಕ್ಷ ಹೊನ್ನುಗಳನ್ನು ತಂದು ಮಹಾರಾಜರ ಪಾದದೆಡೆಗೆ ಸುರುವುತ್ತೇನೆ, ಎಂದು ಅಂದನು.

ಇದಕ್ಕೆ ಮಹಾರಾಜರು ಏನೆನ್ನುವರೋ? ಎಂದು ದರ್ಬಾರಿಗಳ ಲಕ್ಷ್ಯವು ಅತ್ತಕಡೆಗೆ ವೇಧಿಸಿತು. ಮಹಾರಾಜರು ಇನ್ನು ಏನೋ ಹೇಳತಕ್ಕವರಿದ್ದರು; ಅಷ್ಟರಲ್ಲಿ ಧ್ಯಾನಸಿಂಹನ ಹಸ್ತಕರು ಹೊನ್ನಿನ ಕೊಡಗಳನ್ನು ತಂದು ತಂದು ಮಹಾರಾಜರ ಎದುರಿಗೆ ಸುರುವಲಾರಂಭಿಸಿದರು! ಒಂಬತ್ತು ಲಕ್ಷ ಹೊನ್ನುಗಳೆಂದರೇನು ಸ್ವಲ್ಪವೇ? ಹತ್ತುಹತ್ತು ಸಾವಿರ ಹೊನ್ನಿಗೆ ಒಂದು ಕೊಡದಂತೆ ತೊಂಬತ್ತು ಹೊನ್ನು ತುಂಬಿದ ಕೊಡಗಳು ಯಾವಾಗ ಮಹಾರಾಜರೆದುರಿಗೆ ಒಂದು ಬಿದ್ದವೋ ಅವನ್ನು ನೋಡಿ ಮಹಾರಾಜರು ತಮ್ಮ ಸ್ವಭಾವಧರ್ಮದಂತೆ ಧ್ಯಾನಸಿಂಹನನ್ನು ಪರಿತುಷ್ಟರಾದರು. ಚಕಚಕಿತ ನಾಣ್ಯಗಳ ದರ್ಶನದಿಂದ ಮಹಾರಾಜರಿಗೆ ಎಷ್ಟು ಸಂತುಷ್ಟತೆಯು ಪ್ರಾಪ್ತವಾಗುತ್ತಿತ್ತೆಂಬುದು ನಮ್ಮ

ಹುಜೂರರವರಿಗೆ ಅರಿಯದ ವಿಷಯವಾಗಿಲ್ಲ.

ಆ ನಾಣ್ಯಗಳ ದರ್ಶನದಿಂದ ಮಹಾರಾಜರು ಸಂತುಷ್ಟರಾದರೂ ಆಗ ಧ್ಯಾನಸಿಂಹನಿಗೆ ಏನೂ ಹೇಳಲಿಲ್ಲ. ಖಜೇನದಾರನಾದ ವೇಣೀರಾಮನನ್ನು ಕರೆದು, ಆ ಒಂಬತ್ತು ಲಕ್ಷ ನಾಣ್ಯಗಳನ್ನು ಎಣಿಸಿ ಬೊಕ್ಕಸದಲ್ಲಿರಿಸಹೇಳಿದರು. ವೇಣೀರಾಮನು ನಾಣ್ಯಗಳನ್ನು ಕೊಂಡುಕೊಂಡು ಹೋದ ಬಳಿಕ, ಧ್ಯಾನಸಿಂಹನು ಮಹಾರಾಜರನ್ನು ತುಷ್ಟಗೊಳಿಸುವ ಸಲುವಾಗಿ ಮತ್ತೆ:—ಮಹಾರಾಜರ ಅತ್ಯಂತ ವಿಶ್ವಾಸಕ್ಕೆ ಪಾತ್ರನಾದ ಕರ್ನಲ್ಲ ಡಬ್ಲಿನ್ನ ಸಾಹೇಬರಿಗೆ ದುರ್ಗವನ್ನು ಅನಿರ್ಬಂಧವಾಗಿ ಬಿಟ್ಟುಗೊಡುವ ಬಗ್ಗೆ ದಂಡವರನಿಗೆ ಆಜ್ಞಾಪತ್ರವನ್ನು ಕಳಿಸುತ್ತೇನೆ. ಅದರಂತೆಯೇ ದುರ್ಗವು ಕೈಸೇರಲಿಕ್ಕೆ ಏನಾದರೂ ತೊಂದರೆಯುಂಟಾಯಿತೇನೆಂಬದನ್ನು ತಿಳಿಸುವ ಬಗ್ಗೆ ಡಬ್ಲಿನ್ನಸಾಹೇಬರಿಗೂ ಪತ್ರ ಬರೆಯುತ್ತೇನೆ; ಎಂದು ಅನ್ನಲು, ಮಹಾರಾಜರು ಮತ್ತಷ್ಟು ಸಂತುಷ್ಟರಾಗಿ ಧ್ಯಾನಸಿಂಹನನ್ನು ಕುರಿತು:—ಹೌದು; ನೀವು ಅಂದಂತೆ ಡಬ್ಲಿನ್ನಸಾಹೇಬರಿಗೆ ಪತ್ರ ಬರೆಯಿರಿ; ಹಾಗು ಅದೇ ಪತ್ರದಲ್ಲಿ ನಮ್ಮ ವಾಸ್ತವ್ಯಕ್ಕಾಗಿ ಕೋಟ-ಕಾಂಗ್ರಾ ಪ್ರಾಂತದಲ್ಲಿ ಒಂದು ಅತಿ ತಂಪಿನ ಹಾಗು ಆರೋಗ್ಯಕರವಾದ ಸ್ಥಳವನ್ನು ನೋಡಿಡಲಿಕ್ಕೆ ತಿಳಿಸಿರಿ. ಈಗ ಪ್ರಖರವಾದ ಬೇಸಿಗೆಯಿದ್ದ ಮೂಲಕ ಲಾಹೋರವನ್ನು ಬಿಟ್ಟು ಅತ್ತ ಹೋಗುವ ಇಚ್ಛೆಯು ನಮಗಿಲ್ಲ; ಆದರೂ ಅತ್ತ ಹೊರಡುವ ಪ್ರಸಂಗವು ಯಾವಾಗ ಬಂದೀತೆಂಬ ನಿಯಮವಿಲ್ಲ, ಎಂದು ಅಂದರು. ರಾಜಾ ಧ್ಯಾನಸಿಂಹನ ಆ ಪತ್ರವು ಈ ಮೊದಲೇ ನಮ್ಮ ಹುಜೂರರವರ ಕೈಸೇರಿರಬಹುದು.

ಈ ಮೇಲೆ ವಿವರಿಸಿದ ಸಂಗತಿಯ ಮರ್ಮವು ನಮ್ಮ ಹುಜೂರರವರ ಚಿತ್ತಕ್ಕೆ ವೇದ್ಯವಾಗಿರಬಹುದು. ಆದರೂ ನನಗೆ ಹೊಳೆದಿರುವ ಸೂಕ್ಷ್ಮವನ್ನು ತಿಳಿಸದೆ ಇರಲಾರೆನು. ಮಹಾರಾಜರು ತಾವು ಹೀಗೆ ಆಕಸ್ಮಿಕವಾಗಿ ಕೋಟ-ಕಾಂಗ್ರಾಕ್ಕೆ ಹೊರಡುವೆವೆಂಬದನ್ನು ಧ್ಯಾನಸಿಂಹನಿಗೆ ಏಕೆ ತಿಳಿಸಿದರೆಂಬದೂ, ಧ್ಯಾನಸಿಂಹನು ಮಹಾರಾಜರ ಆ ನಿಶ್ಚಯವನ್ನು ತಿಳಿದು ಚಿಂತಿತನಾಗಿ ಒಮ್ಮೆಲೆ ಅವರೆದುರಿಗೆ ಒಂಬತ್ತು ಲಕ್ಷ ಹೊನ್ನುಗಳನ್ನೇಕೆ ಸುರುವಿದನೆಂಬದೂ, ಅದರಿಂದಲೂ ಮಹಾರಾಜರು ಆಗತಕ್ಕಷ್ಟು ಸಂತುಷ್ಟರಾಗದ್ದರಿಂದ ಮೇಲೆ ವಿವರಿಸಿದಂತೆ ಧ್ಯಾನಸಿಂಹನು ಪತ್ರಗಳನ್ನು ಏಕೆ ಕಳಿಸಿದನೆಂಬದೂ ನಮ್ಮ ಹುಜೂರರವರಿಗೆ ತಿಳಿದಿರಲೇಬೇಕು. ಕೋಟಕಾಂಗ್ರಾದಲ್ಲಿ ದಂಡವರನು ಇದ್ದೂ ಇಲ್ಲ

ದಂತಿರುತ್ತಾನೆ. ಅಲ್ಲಿಯ ಎಲ್ಲ ಕಾರಭಾರವನ್ನು ಗುಲಾಬಸಿಂಹನೇ ಅಪ್ರತ್ಯಕ್ಷವಾಗಿ ಸಾಗಿಸುತ್ತಿದ್ದು, ಅವನು ಆ ಸುಸಂಪನ್ನ ರಾಷ್ಟ್ರವನ್ನು ಸುಲಿದು ಸೂರೆಗೊಂಡಿರುತ್ತಾನೆ. ಇದೆಲ್ಲ ಮಹಾರಾಜರಿಗೆ ಚೆನ್ನಾಗಿ ಅವಗತವಾಗಿರುತ್ತದೆ. ಗುಲಾಬಸಿಂಹನ ಹಾವಳಿಯ ಮೂಲಕ ಅಲ್ಲಿಯ ಪ್ರಜೆಗಳೆಲ್ಲ ದರಿದ್ರರಾಗಿದ್ದು, ದರ್ಬಾರದ ಉತ್ಪನ್ನವೂ ಕಡಿಮೆಯಾಗಿರುತ್ತದೆ. ಅಂತೇ ಮಹಾರಾಜರು ಆ ಪ್ರಾಂತಕ್ಕೆ ನಮ್ಮ ಹುಜೂರರವರನ್ನು ಗವರ್ನರರೆಂದು ನೇಮಿಸಿರುತ್ತಾರೆ. ಇಂಥ ಸ್ಥಿತಿಯಲ್ಲಿ ರಾಜಾಜ್ಞೆಯನ್ನೂ ಕಟ್ಟಿ ಎಳೆದು, ಗುಲಾಬಸಿಂಹನು ತನ್ನ ತಂತ್ರವನ್ನು ಅಲ್ಲಿ ಇನ್ನೂ ನಡೆಸಿರುವದು ಮಹಾರಾಜರ ಕಿವಿಗೆ ಬಿದ್ದಿದೆ. ಅದರಿಂದ ಮಹಾರಾಜರ ಸಿಟ್ಟು ಅನಾವರವಾಗಿ, ತಾವು ಸ್ವತಃ ಆ ಪ್ರಾಂತಕ್ಕೆ ಹೋಗಿ, ಅಲ್ಲಿ ನಮ್ಮ ಸಾಹೇಬರಿಗೆ ಪ್ರಾಪ್ತವಾಗಿರುವ ಅಡಚಣಿಗಳನ್ನು ದೂರೀಕರಿಸಬೇಕೆಂದು ನಿಶ್ಚಯಿಸಿದರು. ಇದು ರಾಜಾ ಧ್ಯಾನಸಿಂಹನಿಗೆ ಹೊಳೆಯಲು, ಅವನು ಗುಲಾಬಸಿಂಹನಿಂದಾದ ತಪ್ಪಿಗಾಗಿ ಅಷ್ಟು ದೊಡ್ಡ ಕಾಣಿಕೆಯನ್ನು ಆಗಲೇ ಮಹಾರಾಜರಿಗೆ ಒಪ್ಪಿಸಿದನು. ಇದರಿಂದ ದರ್ಬಾರಿಗಳಲ್ಲಿ ಕೆಲವರು ಚಕಿತರಾದರೂ ಮಹಾರಾಜರು ವಿಸ್ಮಯಪಡಲಿಲ್ಲ. ಮಹಾರಾಜರು ತಿಳಿದದ್ದೇನಂದರೆ, ನಿಜವಾದ ಮುಖ್ಯ ಅಪರಾಧಿಯು ಧ್ಯಾನಸಿಂಹನಲ್ಲ; ಇವನು ಅವನ ಸಹಾಯಕಾರಿಯು. ಅದರಿಂದ ಇವನಿಗೆ ಇಷ್ಟು ದಂಡದ ಶಿಕ್ಷೆಯು ಸಾಕಾಗಿರುವದು; ಹೀಗೆಂದು ತಿಳಿದು ಅವರು ಆ ಹಣವನ್ನು ಖಜಾನೆಗೆ ಕಳಿಸಿದರು. ಬಳಿಕ ಧ್ಯಾನಸಿಂಹನು ತಮಗೆ ಪತ್ರ ಕಳಿಸಿದ್ದರಿಂದ ಇನ್ನು ಗುಲಾಬಸಿಂಹನು ತಮಗೆ ಲವಮಾತ್ರವೂ ತ್ರಾಸಕೊಡಲಾರನೆಂಬುದು ಮಹಾರಾಜರ ಖಾತ್ರಿಯಾಯಿತು. ಅಂತೇ ಅವರು ಈಗ ತಮ್ಮ ಸ್ವಾರಿಯ ಬೇತನ್ನು ರಹಿತಪಡಿಸಿರುತ್ತಾರೆ; ಹಾಗು ಅವರು ಧ್ಯಾನಸಿಂಹನಿಗೆ ನಿಮ್ಮ ಪತ್ರದಲ್ಲಿ ಮುದ್ದಾಮು ಹೇಳಿ ಬರೆಸಿ "ನಮ್ಮ ಸ್ವಂತಕ್ಕಾಗಿ ಕೋಟಕಾಂಗ್ರಾದಲ್ಲಿ ತಕ್ಕ ತಂಪಿನ ಸ್ಥಳವನ್ನು ನೋಡಿಡಬೇಕೆಂದು" ತಿಳಿಸಿದ ಸಂಗತಿಯು ಅರ್ಥವಾದರೂ ಧ್ಯಾನಸಿಂಹನಿಗೆ "ಧ್ಯಾನಸಿಂಹ, ಗುಲಾಬಸಿಂಹನು ಕೋಟಕಾಂಗ್ರಾದಲ್ಲಿ ಕಾಲಿಟ್ಟನೆಂದರೆ, ನಾವು ಸ್ವತಃ ಅಲ್ಲಿಗೆ ಹೋಗಿ ಅವನಿಗೆ ತಕ್ಕ ಶಿಕ್ಷೆ ಮಾಡುವೆವೆಂಬದನ್ನು ಲಕ್ಷ್ಯದಲ್ಲಿಡು," ಎಂದು ಹೇಳಿದಂತಾಗಿರುತ್ತದೆ.

ಹುಜೂರ, ಹೀಗೆ ತಮ್ಮ ರಾಶಿಯ ಮೇಲೆ ಬರುವದರಲ್ಲಿದ್ದ ಗ್ರಹಣವು ನಡುವೇ ಬಯಲಾಗಿದೆ; ಆದರೆ ಇನ್ನೊಂದು ಸಂಗತಿಯೇನಂದರೆ, ಧ್ಯಾನ

ಸಿಂಹನು ಈಗ ಮಹಾರಾಜರಿಗೆ ನಜರಾಣೆ ಕೊಟ್ಟಿರುವ ಹಣವನ್ನು ಹುಜೂರರ ಖಾತೆಗೆ ಖರ್ಚು ಬರೆದಿರಬಹುದಾಗಿದೆ; ಹಾಗು ಪ್ರಸಂಗವಶಾತ್ ಅದನ್ನು ಹುಜೂರರಿಂದ ವಸೂಲಮಾಡುವ ಬೇತು ಮಾಡಿರಬಹುದಾಗಿದೆ. ಆದುದರಿಂದ ಹುಜೂರರವರು ಈಗಲೇ ಆ ಬಗ್ಗೆ ಯೋಗ್ಯ ಬಂದೋಬಸ್ತನ್ನು ಮಾಡಿಡ ಬೇಕು. ಸಾಹೇಬ, ನನ್ನ ಅಲ್ಪಬುದ್ಧಿಯು ಮೇರೆಗೆ ನನಗೆ ತಿಳಿದ ಇಷ್ಟೆಯು ಸಂಗತಿ ಯನ್ನು ಹುಜೂರರಿಗೆ ತಿಳಿಸಿರುತ್ತೇನೆ ಅಲಿವರ್ದೀಖಾನ, ಬನ್ನು, ಧನ್ನು, ಭುಕನ ಹಾಗು ಹಾಕೀಮ್‌ಸಿಂಹ ಮುಂತಾದವರಿಗೆ ನನ್ನ ಸಲಾಮುಗಳನ್ನು ತಿಳಿಸಬೇಕು.''

ಚಾಂದಖಾನನ ಪತ್ರವಾಚನದ ತರುವಾಯ ಡಬ್ಲಿನ್ನನು ಕೆಲ ಹೊತ್ತಿನ ವರೆಗೆ ಸ್ತಬ್ಧವಾಗಿ ಕುಳಿತು ವಿಚಾರ ಮಗ್ನನಾದನು. ಖಾನನು ಆ ಪತ್ರವನ್ನು ಫಾರ್ಸೀ ಭಾಷೆಯಲ್ಲಿ ಬಹು ವಿಸ್ತೃತವಾಗಿ ಬರೆದಿದ್ದನು. ಅವನ ಆ ಮಾರುದ್ದನ್ನ ಪತ್ರದ ಬಗ್ಗೆ ಡಬ್ಲಿನ್ನನು ಬೇಸರಗೊಳ್ಳದೆ ಅದನ್ನು ಮೂರುಮೂರುಸಾರೆ ಓದಿ ದನು. ಆ ಪತ್ರವಾಚನದಿಂದ ತಾನು ಪ್ರತ್ಯಕ್ಷ ರಣಜಿತನ ದರ್ಬಾರದಲ್ಲಿದ್ದು ಅಲ್ಲಿ ನಡೆದ ಆ ಸಂಗತಿಗಳನ್ನು ನೋಡಿದಂತೆ ಅವನಿಗೆ ಭಾಸವಾಗಹತ್ತಿತು. ತನಗೆ ಫಾರ್ಸೀ ಭಾಷೆಯು ಬರುತ್ತಿರುವ ಬಗ್ಗೆ ಅಂದು ಅವನಿಗೊಳ್ಳೇ ಸಾಫಲ್ಯವೆನಿಸಿತು. ನಿಷ್ಕಾರಣವಾಗಿ ತನ್ನನ್ನು ದ್ವೇಷಿಸುವವರ ಬಗ್ಗೆ ಡಬ್ಲಿನ್ನನು ಹೆಚ್ಚಾಗಿ ಅಂಜದೆ, “ನಿಂದಕಾಚೆ ಘರ ಅಸಾವೇ ಸೇಜಾರ'' ಎಂಬಂತೆ ಈ ಜನರೇ ತನಗೆ ಬುದ್ಧಿಗಲಿ ಸುವ ಗುರುಗಳೆಂದು ತಿಳಕೊಂಡು, ತನ್ನ ಸ್ವೀಕೃತಕಾರ್ಯಕ್ಕೆ ತೊಡಗಿದನು.

ಅಂದು ರಾತ್ರಿ ಅವನು ಅದೇ ವಿಷಯುವನ್ನು ಯೋಚಿಸುತ್ತ ಮಲಗಿ ರಲು, ಬೆಳಗಿನ ಜಾವದಲ್ಲಿ ಒಂದು ಕನಸು ಕಂಡನು. ಕನಸಿನಲ್ಲಿ ತನ್ನ ಭಾಗ್ಯ ರವಿಯು ಏರುತ್ತ ನಡೆದಿರುವದನ್ನೂ, ಮಹಾರಾಜರ ಕೃಪಾಛತ್ರವು ತನ್ನ ತಲೆಯ ಮೇಲೆ ಸ್ಥಿರವಾಗಿ ನಿಂತಿರುವದನ್ನೂ, ಒಳಿಯಲ್ಲೇ ಒಬ್ಬ ವಿನಯಸಂಪ ನ್ನಳಾದ ಸುಂದರ ತರುಣಿಯು ನಿಂತಿರುವದನ್ನೂ ಅವನು ಕಂಡನು. ಅವನು ಇನ್ನು ಆ ತರುಣಿಯೊಡನೆ ಏನೋ ಮಾತಾಡಬೇಕೆಂದಿದ್ದನು; ಅಷ್ಟರಲ್ಲಿ ಅವ ನಿಗೆ ಫಕ್ಕನೆ ಎಚ್ಚರವಾಯಿತು. ಅವನಿಗೆ ಆ ಸ್ವಪ್ನದ ಅರ್ಥವೆಲ್ಲ ಮನನ ವಾಯಿತು; ಆದರೆ ಆ ಬಗೆಯು ಸ್ತ್ರೀಪ್ರಾಪ್ತಿಯು ಮಾತ್ರ ಅಸಂಭವವಾಗಿ ತೋರಿತು. ಅದು ಸ್ವಪ್ನವೇ ಆದ್ದರಿಂದ ಅವನು ಆ ಬಗ್ಗೆ ವಿಶೇಷ ಪೃಚ್ಛಾ- ಪೃಚ್ಛ ಮಾಡುತ್ತ ಕೂಡ್ರಲಿಲ್ಲವೆಂದು ಬೇರೆ ಹೇಳುವ ಕಾರಣವಿಲ್ಲ.

ಮರುದಿನ ದಂಡವರನು ದುರ್ಗದೊಳಗಿಂದ ಹೊರಟುಹೋದನು. ದಂಡವರನು ಹುಟ್ಟಾ ಸರಳ ಪ್ರಕೃತಿಯವನು; ಅಂತೇ ನಾನು ಗುಲಾಬಸಿಂಹ ಹಾಗು ನಂದಸಿಂಹರ ಹೇಳಿಕೆಯ ಮಾತಿನ ಮೇಲೆ ನಿಮ್ಮನ್ನು ದ್ವೇಷಿಸಿದೆನೆಂದೂ ಇನ್ನು ಮೇಲೆ ನಾನು ನಿಮ್ಮೊಡನೆ ಪರಮ ಮೈತ್ರಿಯಿಂದ ನಡೆಕೊಳ್ಳುವೆನೆಂದೂ ಹೋಗುವಾಗ ಆತನು ಡಬ್ಲಿನ್ನನಿಗೆ ಹೇಳದಿರಲಿಲ್ಲ. ದಂಡವರನು ಹೊರಟುಹೋದ ಬಳಿಕ, ಡಬ್ಲಿನ್ನನು ಆ ದುರ್ಗದ ಮೇಲೆ ಹತ್ತಿಬರಬಹುದಾದ ಎಲ್ಲ ಆಯಕಟ್ಟಿನ ಸ್ಥಳಗಳನ್ನು ಚೆನ್ನಾಗಿ ಭದ್ರಪಡಿಸಿ, ಅಲ್ಲಲ್ಲಿ ಸಂತತವಾದ ಪಹರೆಯನ್ನಿರಿಸಿದನು. ಪ್ರತಿಯೊಂದು ಬುರುಜಿನ ಮೇಲೂ ದಂಡಿನ ಚಿಕ್ಕಚಿಕ್ಕ ಶಾಖೆಗಳನ್ನು ಇಟ್ಟು, ಒಂದೊಂದು ಸೆಲ್‌ಗುಂಡಿನ ತೋಫನ್ನು ಹೂಡಿ ಸಜ್ಜು ಮಾಡಿಟ್ಟನು.

ಡಬ್ಲಿನ್ನನು ಕೋಟಕಾಂಗ್ರಾ ದುರ್ಗದಲ್ಲಿ ನೆಲಿಸಿ, ಆ ಪ್ರಾಂತದ ಗವರ್ನರನಾದ ಬಳಿಕ ಆತನ ದಿವಾಣನಾದ ನಮ್ಮ ಚೈತನ್ಯದಾಸನು ಸುಮ್ಮನೆ ಕೂಡ್ರುವವನೇ? ಆದರೆ ಯುದ್ಧನಡೆದಾಗ ಮಾತ್ರ ಅವನ ಹೌಹಾರಿ ಹೋಗಿತ್ತು. ಜಯಂತಿಗಿರಿಯಲ್ಲಿ ಡಬ್ಲಿನ್ನನ ಸೈನ್ಯವು ಬೀಡು ಬಿಟ್ಟು ತೋಫುಗಳನ್ನು ಹಾರಿಸಹತ್ತಿದ ಬಳಿಕ ಹಾಗು ಕಿಲ್ಲೆಯೊಳಗಿನ ತೋಫುಗಳ ಗುಂಡುಗಳು ಧಡಲ್ ಧಡಲ್ ಎಂದು ಬಂದು ಬೀಳಹತ್ತಿದ ಬಳಿಕ ಚೈತನ್ಯದಾಸನು ಅಲ್ಲಿ ನಿಲ್ಲುವನೇತಕ್ಕೆ? ಅವನು ಓಡಿ ಓಡಿ ಹೋಗಿ ಆ ಜಯಂತಿಗಿರಿಯ ದೇರೆ ಪಕ್ಕದಲ್ಲಿದ್ದ ಜಯಂತಿದೇವಾಲಯವನ್ನು ಹೊಕ್ಕು ಕುಳಿತನು. ಅಲ್ಲಿ ಹಲವು ಜನ ಬಾವಾ-ವೈರಾಗಿಗಳು ಕಲೆತಿದ್ದು, ಅವರಾದರೂ ಅದೇ ಯುದ್ಧದ ಬಗ್ಗೆ ಚರ್ಚಿಸುತ್ತ ಕುಳಿತಿದ್ದರು. ಇಷ್ಟರಲ್ಲಿ ಡಬ್ಲಿನ್ನಸಾಹೇಬರ ದಿವಾಣನಾದ ಚೈತನ್ಯದಾಸನ ಸ್ವಾರಿಯೂ ಅಲ್ಲಿಗೆ ಹೋಗಿ ತಲುಪಿದ್ದರಿಂದ ಅವರ ಆ ಸಂವಾದಕ್ಕೆ ಹೆಚ್ಚು ಕಳೆಯೇರಿತು.

ಆಗ ಅಲ್ಲಿಯ ಗೋಸಾವಿಗಳು ಚೈತನ್ಯದಾಸನಿಗೆ ಹೇಳಿದರೇನಂದರೆ, ನಿಮ್ಮ ಸಾಹೇಬರಿಗೆ ಜಯದೊರೆಯುವ ಸಲುವಾಗಿ ನೀವು ಈ ನಮ್ಮ ಶ್ರೀ ಜಯಂತಿ ದೇವತೆಗೆ ಮುಡುಪು ಕಟ್ಟಿರಿ, ಅನುಷ್ಠಾನವನ್ನು ಪ್ರಾರಂಭಿಸಿರಿ; ಹಾಗೂ ಜಯಪ್ರಾಪ್ತವಾದ ಕೂಡಲೆ ಬ್ರಾಹ್ಮಣ-ವೈರಾಗಿಗಳ ಭೋಜನ, ದಕ್ಷಿಣೆ ಮುಂತಾದವುಗಳನ್ನು ಯಥಾಸಾಂಗವಾಗಿ ನೆರವೇರಿಸಿರಿ, ಎಂದು ಹೇಳಿದರು. ಭಾವಿಕನಾದ ಚೈತನ್ಯನಿಗೆ ಆ ಸಂಗತಿಯು ರುಚಿಸಿತು. ದೊಡ್ಡ ದೊಡ್ಡ ತೋಫುಗಳ ಗುಂಡುಗಳಿಗೆ ಸೈನ್ಯವನ್ನು ಆಹುತಿಗೊಟ್ಟು ಜಯದ ಆಶೆಪಡುವ

ದಕ್ಕಿಂತ ಜಪ-ತಪಾದಿ ಅನುಷ್ಠಾನದಿಂದ ಅದನ್ನು ಸಂಪಾದಿಸುವದು ಪರಮ ಶ್ರೇಯಸ್ಕರವೆಂದು ಅವನಂತಹ ಕೈಲಾಗದ, ಆದರೆ ಅತ್ಯಂತಭಾವಿಕ ಮನುಷ್ಯನಿಗೆ ಅನಿಸಿದ್ದರಲ್ಲಿ ತಪ್ಪೇನು?

ಯಾವ ಕಾರ್ಯಗಳಿಗಾದರೂ ದುಡ್ಡು ಬೇಕಷ್ಟೇ? ಹಾಗೆ ಜೀವದ ಆಶೆಯಿಂದ ಓಡಿಬಂದ ಚೈತನ್ಯನ ಬೊಕ್ಕಣದಲ್ಲಿ ಆಗ ಒಂದು ಕಾಸು ಕೂಡ ಇರಲಿಲ್ಲ. ಅವನ ಸ್ಥಿತಿಯನ್ನು ಕಂಡು ಅಲ್ಲಿಯ ಕೆಲ ಸಾಧು-ಬೈರಾಗಿಗಳು ಅವನಿಗೆ ಸಲಹೆ ಕೊಟ್ಟದ್ದೇನಂದರೆ:—ದಿವಾಣಜಿ, ನಿಮಗೆ ಈಗ ಕೆಲ ದುಡ್ಡನ್ನು ನಾವು ಸಾಲವಾಗಿ ಕೊಡುತ್ತೇವೆ ಅನುಷ್ಠಾನವು ಮುಗಿದು, ದೇವಿಯ ಕೃಪೆಯಿಂದ ನಿಮ್ಮ ಸಾಹೇಬರಿಗೆ ಜಯಪ್ರಾಪ್ತಿಯಾದರೆ ನಮ್ಮ ದುಡ್ಡನ್ನು ಬಡ್ಡಿಸಹಿತವಾಗಿ ನಮಗೆ ಮರಳಿ ಕೊಡುವಿರಂತೆ. ಎಂದು ಹೇಳಿದ್ದನ್ನು ಕೇಳಿ, ಚೈತನ್ಯನು ತಥಾಸ್ತು, ಎಂದು ಅಂದು ಕೆಲಜನ ಬ್ರಾಹ್ಮಣರನ್ನು ಅನುಷ್ಠಾನಕ್ಕೆ ನಿಯಮಿಸಿದನು. ದಂಡವರನು ಡಬ್ಲಿನ್ನನಿಗೆ ಕಿಲ್ಲೆಯನ್ನು ಬಿಟ್ಟುಗೊಡಲಿಕ್ಕೂ ಆ ಬ್ರಾಹ್ಮಣರ ಅನುಷ್ಠಾನವು ಮುಗಿಯಲಿಕ್ಕೂ ಗಂಟೇ ಬಿದ್ದಿತು. ತಾನು ದೇವಿಗೆ ಅನುಷ್ಠಾನವನ್ನು ಹಚ್ಚಿದ್ದರಿಂದಲೇ ತಮ್ಮ ಸಾಹೇಬರಿಗೆ ಇಷ್ಟು ಸುಲಭವಾಗಿ ವಿಜಯಪ್ರಾಪ್ತವಾಯಿತೆಂದು ಅಂದುಕೊಳ್ಳುತ್ತಾ, ಚೈತನ್ಯನು ತನ್ನ ಆ ಧನಕೋ ಬೈರಾಗಿಗಳೊಡನೆ ದುರ್ಗವನ್ನು ಪ್ರವೇಶಿಸಿ ಡಬ್ಲಿನ್ನ ಸಾಹೇಬನಿಗೆ ಒಳ್ಳೇ ಆಸ್ಥೆಯಿಂದ ಮುಜುರೆ ಮಾಡಿ, ತನ್ನ ಹರಕು-ಮುರುಕಾದ ಇಂಗ್ಲಿಷ ಭಾಷೆಯಲ್ಲಿ ಅನುಷ್ಠಾನದ ವಿಷಯವಾಗಿ ಏನೇನೋ ಹೇಳಿದನು. ಡಬ್ಲಿನ್ನನಿಗೆ ಅವನ ಮಾತಿನ ಅರ್ಥವು ಚನ್ನಾಗಿ ಆಗದಿದ್ದರೂ, ಭಾವವನ್ನರಿತು ನಗೆಮೊಗದಿಂದ ಆ ಬೈರಾಗಿಗಳ ಹಣಕೊಟ್ಟು ಕಳಿಸಿದನು.

ಮರುದಿವಸದಿಂದ ಚೈತನ್ಯನು ತಾನು ಕೋಟಕಾಂಗ್ರಾದ ಗವರ್ನರನ ಮುಖ್ಯದಿವಾಣನೆಂದು ಡಬ್ಲಿನ್ನನ ಹತ್ತರವೇ ಕುಳಿತು ತನ್ನ ಕಚೇರಿಯನ್ನು ಮಾಡಹತ್ತಿದನು. ಡಬ್ಲಿನ್ನನು ದುರ್ಗದಲ್ಲಿ ನೆಲಿಸಹತ್ತಿದ ಬಳಿಕ ಆ ಪ್ರಾಂತದ ಸಣ್ಣ-ದೊಡ್ಡ ಜಹಗೀರದಾರರೂ ಶೇಟ-ಸಾವುಕಾರರೂ ಡಬ್ಲಿನ್ನನ ಭೆಟ್ಟಿಗೆ ಬರಲಾರಂಭಿಸಿದರು. ಆಗ ಚೈತನ್ಯನು ಡಬ್ಲಿನ್ನನನ್ನು ಒತ್ತಟ್ಟಿಗೆ ಕರೆದು:—ಸಾಹೇಬ, ತಾವಿನ್ನು ಒಳ್ಳೇ ಭವ್ಯವಾದ ಪೋಷಾಕನ್ನು ಧರಿಸಿ ಬಹು ಆಸ್ಥೆಯಿಂದ ದರ್ಬಾರದಲ್ಲಿ ಕೂಡ್ರುತ್ತಿರಬೇಕು. ಬಂದ ಜನರೊಡನೆ ತಾವು ಹೆಚ್ಚಾಗಿ ಮಾತಾಡಬಾರದು. ನಾನು ಅವರ ಎಲ್ಲ ಅಂಬೋಣವನ್ನು ಕೇಳಿಕೊಂಡು ತಮಗೆ ನಿವೇದಿ

ಸುತ್ತೀನೆ. ತಾವು ಕಟ್ಟಕಡೆಗೆ ಅಲ್ಪ ಸ್ವಲ್ಪ ಮಾತಾಡಿ, ಅವರ ಮುಜುರೆಗಳನ್ನು ತಕ್ಕೊಂಡು, ಗೋಣು ಅಲ್ಲಾಡಿಸಿ, ಅವರಿಗೆ ಅಪ್ಪಣೆಕೊಟ್ಟು ಕಳಿಸಬೇಕು, ಎಂಬದಾಗಿ ಸಲಹೆ ಕೊಡಹತ್ತಿದನು. ಡಬ್ಲಿನ್ನನು ಆತನ ಆ ವಿಚಿತ್ರವಾದ ಆದರೆ ಕಪಟರಹಿತವಾದ ಮಾತುಗಳನ್ನು ಕೇಳಿ ಹೊಟ್ಟೆಹಿಡಿಸಲಾರದಷ್ಟು ನಕ್ಕನು. ಅವನು ಚೈತನ್ಯನ ಮಾತಿಗೆ ಕಿವಿಗೊಡದೆ, ತನ್ನ ಪೂರ್ವ ಪದ್ಧತಿಯಂತೆಯೇ ತೀರ ಸಾದಾ ಪೋಷಾಕಿನಿಂದ ಕಚೇರಿಯಲ್ಲಿ ಕುಳಿತು, ಬಂದವರನ್ನು ಒಳ್ಳೇ ಸನ್ಮಾನದಿಂದ ಕಾಣುತ್ತಿದ್ದನು. ಅವರ ಅಂಬೋಣವನ್ನು ಕೇಳಿಕೊಂಡು ಅವರೊಡನೆ ಮನಬಿಚ್ಚಿ ಮಾತಾಡಿ, ಅವರ ಗರಜುಗಳನ್ನು ಪೂರೈಸುತ್ತಿದ್ದನು.

ಡಬ್ಲಿನ್ನನು ಕೋಟಕಾಂಗ್ರಾದ ಗವರ್ನರನಾದ ಬಳಿಕ ಅವನಿಗೆ ಒಂದು ಕ್ಷಣ ಸಹ ವಿಶ್ರಾಂತಿದೊರೆಯದಾಯಿತು. ಆ ಪ್ರಾಂತದೊಳಗೆ ಮಾಡಬೇಕಾದ ಪ್ರತಿಯೊಂದು ಬಗೆಯ ವ್ಯವಸ್ಥೆಯಲ್ಲಿ ಹಾಕೀಮಸಿಂಹನು ಅವನಿಗೆ ಬಲಗೈಯಂತೆ ಸಹಾಯಕನಾಗಿರುತ್ತಿದ್ದನು. ಡಬ್ಲಿನ್ನನು ಸ್ವತಃ ಒಳ್ಳೇ ಧೈರ್ಯಶಾಲಿಯೂ, ಶಾಂತಸ್ವಭಾವದವನೂ, ಪ್ರಸಂಗವಲ್ಲಿ ಯಾತಕ್ಕೂ ಅಂಜದವನೂ, ಸಂಕಟಸಮಯದಲ್ಲಿ ಇಮ್ಮಡಿ ಸಾಹಸಿಗನೂ ಆದ್ದರಿಂದ ಅವನು ಆ ಪ್ರಸಂಗದಲ್ಲಿ ಯಾತಕ್ಕೂ ಅಂಜದೆ, ಅಲ್ಲಿಯ ಪ್ರಜೆಗಳ ಕಲ್ಯಾಣವು ವಿಶರಿಂದ ಬೇಗನೆ ಆದೀತೋ ಆ ಪ್ರಕಾರದ ಯತ್ನಮಾಡುವದಕ್ಕೆ ತೊಡಗಿದನು. ಕೋಟಾಕಾಂಗ್ರಾ ಪ್ರಾಂತದ ಮುಲ್ಕೀ ವ್ಯವಸ್ಥೆಯನ್ನು ನೋಡಲಿಕ್ಕೆ ಈ ವರೆಗೆ ದಂಡವರಸಿಂಹನು ಯಾವ ಜನರನ್ನು ನಿಯಮಿಸಿದ್ದನೋ ಡಬ್ಲಿನ್ನನಾದರೂ ಅವರನ್ನೇ ಇಟ್ಟುಕೊಂಡು, ಅವರಿಂದಲೇ ತನ್ನ ಮನಸ್ಸಿನ ತಕ್ಕಂತೆ ಲೆಕ್ಕ ಪತ್ರಗಳನ್ನು ಇಡಿಸಹತ್ತಿದನು. ಸ್ವಲ್ಪ ವೇಳೆಯಲ್ಲಿ ಬಹಳ ಕೆಲಸವಾಗುವದಕ್ಕೆಂದು ಅವನು ಬೇರೆ ಬೇರೆ ಬಾಬುಗಳ ಲೆಕ್ಕವನ್ನು ತುಂಬುವದಕ್ಕಾಗಿ ಬೇರೆ ಬೇರೆ ನಮೂನೆಗಳನ್ನು ಹಾಕಿಕೊಟ್ಟನು. ಮೊದಮೊದಲು ಕಾರಕೂನ ಜನರಿಗೆ ಡಬ್ಲಿನ್ನಸಾಹೇಬನ ಆ ಕೋಷ್ಟಕಗಳ ಪದ್ಧತಿಯು ಬಹು ಕಠಿಣವಾಗಿ ತೋರಿದರೂ, ಅಲ್ಪಾವಕಾಶದಲ್ಲಿಯೇ ಅವರೆಲ್ಲರೂ ಸಾಹೇಬನ ಆ ಪದ್ಧತಿಯಲ್ಲಿ ನುರಿತು ತತ್ಪರರಾದರು. ಆ ಪದ್ಧತಿಯಿಂದ ಪ್ರತಿಯೊಂದು ಬಾಬಿನ ಜಮಾಖರ್ಚುಗಳು ಕೈಗನ್ನಡಿಯಂತೆ ಸ್ಪಷ್ಟವಾಗಿ ತೋರಹತ್ತಿದವು ಪ್ರತಿನಿತ್ಯ ಪ್ರತಿಯೊಂದು ಬಾಬಿನ ಜಮಾ ಖರ್ಚು ಸಿಲ್ಕುಗಳು ಸ್ಪಷ್ಟವಾಗಿ ಹೊರಡಹತ್ತಿದವು.

ಹೀಗೆ ಡಬ್ಲಿನ್ನನು ಮುಲ್ಕೀಖಾತೆಯ ವ್ಯವಸ್ಥೆಯನ್ನು ಕ್ಷಿಪ್ರದಲ್ಲಿಯೇ

ಸುಧಾರಿಸಿಕೊಂಡ ಬಳಿಕ ಅವನು ಆ ಪ್ರಾಂತವನ್ನೆಲ್ಲ ಸಂಚರಿಸಿ, ಅಲ್ಲಿಯ ಐತಿಹಾಸಿಕ, ಭೂಗೋಲಿಕ, ಸಾಮಾಜಿಕ, ಧಾರ್ಮಿಕ ಹಾಗೂ ನೈತಿಕ ವಿಷಯದ ಮಾಹಿತಿಯನ್ನು ಸಂಪಾದಿಸಿದನು. ಆ ಮಾಹಿತಿಯನ್ನು ಸಂಪಾದಿಸಿ ಅವನು ಸುಮ್ಮನೆ ಕೂಡ್ರಲಿಲ್ಲ. ಅವನು ಆ ಸಂಗತಿಯೆಲ್ಲ ಒಮ್ಮೆಲೆ ಒಡೆದುಕಾಣುವಂತಹ ಒಂದು ನಕಾಶವನ್ನು ತಯಾರಿಸಿದನು. ಕೇವಲ ಗುಡ್ಡಗಾಡು ಪ್ರದೇಶದಲ್ಲಿ ಯಾವ ಪೈರನ್ನು ಮಾಡಿದರೆ ಅಲ್ಲಿಯವರಿಗೆ ಚೆನ್ನಾಗಿ ಲಾಭದಾಯಕವಾಗಿ ಸರಕಾರಕ್ಕೂ ಆದಾಯವಾದೀತೆಂಬದನ್ನು ನಿಶ್ಚೈಸಿ, ಅದರಂತೆ ಯೋಜಿಸಿದನು.

ಡಬ್ಲಿನ್ನನು ತನ್ನ ಮನಸ್ಸಿನ ತಕ್ಕಂತೆ ಆ ಪ್ರಾಂತದ ನಕಾಶವನ್ನು ಸಿದ್ಧಪಡಿಸಿದ ಮೇಲೆ ಆ ಪ್ರಾಂತದಲ್ಲಿ ಮೂರು ಮುಖ್ಯ ಭಾಗಗಳನ್ನು ಮಾಡಿದನು. ಹಾಗೂ ಆ ಮೂರೂ ಭಾಗಗಳಲ್ಲಿ ಏಳೇಳು ಪೋಟ ವಿಭಾಗಗಳನ್ನು ರಚಿಸಿದನು. ಅಂದರೆ ಅವನು ಆ ಕೋಟಕಾಂಗ್ರಾ ಪ್ರಾಂತದಲ್ಲಿ ೩ ಜಿಲ್ಲೆಗಳನ್ನೂ ೨೧ ತಾಲೂಕುಗಳನ್ನೂ ರಚಿಸಿದನು. ಪ್ರತಿಯೊಂದು ಜಿಲ್ಲೆಗೆ ಒಬ್ಬೊಬ್ಬ ಸುಭೇದಾರನೂ, ತಾಲೂಕಿಗೆ ಒಬ್ಬೊಬ್ಬ ಫೌಜದಾರನೂ ಹೀಗೆ ಅಮುಲ್ದಾರರನ್ನು ನಿಯಮಿಸಿದನು. ಪ್ರತಿಯೊಂದು ಗ್ರಾಮದ ಗ್ರಾಮಸ್ಥರ ಪದ್ಧತಿಯನ್ನು ಮೊದಲಿನಂತೆಯೇ ಕಾಯಮವಾಗಿಟ್ಟು, ಅಲ್ಲಿ ಗ್ರಾಮಪಂಚಾಯತಿ ಸಂಸ್ಥೆಯನ್ನೂ ಅವನು ಆಗ ಸ್ಥಾಪಿಸಲಿಕ್ಕೆ ಮರೆಯಲಿಲ್ಲ. ಗ್ರಾಮಪಂಚಾಯತಿಯವರು ಊರೊಳಗಿನ ಜಗಳ-ತಂಟೆಗಳನ್ನು ಸಮಾಧಾನಕಾರವಾಗಿ ತೀರಿಸಬೇಕು. ಅವರಲ್ಲಿ ಅವು ಬಗೆಹರಿಯದಿದ್ದರೆ, ತಾಲೂಕಿನ ಫೌಜದಾರನು ಅವುಗಳನ್ನು ತೀರಿಸಬೇಕು. ಫೌಜದಾರನಿಂದಲೂ ಯೋಗ್ಯವಾಗಿ ನಿಕಾಲೆಯಾಗದ ನ್ಯಾಯಗಳು ಸುಭೆದಾರನ ಕಡೆಗೆ. ಅಲ್ಲಿಯೂ ನಿರ್ಣಯವಾಗದ ನ್ಯಾಯಗಳು ತನ್ನ ಕಡೆಗೆ ಬರುವ ವ್ಯವಸ್ಥೆಯನ್ನು ಮಾಡಿದನು.

ಕಳ್ಳರ-ಕಾಕರ ಉಪದ್ರವವು ಗ್ರಾಮನಿವಾಸಿಗಳಿಗೆ ತಗಲಬಾರದೆಂದು ಪ್ರತಿಯೊಂದು ಗ್ರಾಮದಲ್ಲಿ ಸ್ವಯಂಸೇವಕರ ಸೈನ್ಯವು ಸಜ್ಜಾಗಿರುವಂತೆ ವ್ಯವಸ್ಥೆಯಿರಿಸಿದನು. ಯಾವ ಅಧಿಕಾರಿಯೂ ಲಂಚ-ರುಸುವತ್ತುಗಳನ್ನು ತಕ್ಕೊಳ್ಳಬಾರದೆಂದೂ, ಯಾವ ಪ್ರಜೆಗಳೂ ಅಧಿಕಾರಿಗಳಿಗೆ ಲಂಚ-ರುಸುವತ್ತುಗಳನ್ನು ಕೊಡಬಾರದೆಂದೂ ಕಟ್ಟಪ್ಪಣೆ ಮಾಡಿದನು; ಹಾಗು ಹಾಗೆ ಕೊಡ-ತಕ್ಕೊಳ್ಳುವವರ ಹೆಸರು ತಿಳಿಸಿದವರಿಗೆ ಇಂತಿಷ್ಟು ಇನಾಮು ಸಿಗುವದೆಂದು ಜಾಹೀರಪಡಿಸಿದನು. ಡಬ್ಲಿನ್ನನ ಈ ಕಠಿಣತರವಾದ ಶಿಸ್ತಿನ ವ್ಯವಸ್ಥೆಯಿಂದ ಕೋಟ-

ಕಾಂಗ್ರಾ ಪ್ರಾಂತವು ಬಹು ತೀವ್ರವಾಗಿ ಸುಧಾರಿಸಿತು. ಪ್ರಜೆಗಳು ಡಬ್ಲಿನ್ನ ನನ್ನು ಕೊಂಡಾಡಹತ್ತಿದರು. ಡಬ್ಲಿನ್ನನು ಪ್ರತಿ ಮೂರು ತಿಂಗಳಿಗೊಮ್ಮೆ ತನ್ನ ಅಧಿಕಾರದೊಳಗಿನ ಪ್ರತಿಯೊಂದು ಊರಿಗೆ ಸ್ವತಃ ಹೋಗಿ, ಅಲ್ಲಿಯ ಪ್ರಜೆಗಳನ್ನು ಕಂಡು ಅವರ ಸುಖ-ದುಃಖಗಳನ್ನು ವಿಚಾರಿಸಿ, ಅವರ ಅನಾನು ಕೂಲತೆಗಳನ್ನು ದೂರೀಕರಿಸುತ್ತಿದ್ದನು. ಸಾಹೇಬನ ಆ ವ್ಯವಸ್ಥೆಯಿಂದ ಅತ್ತಣ ಪ್ರಜೆಗಳೆಲ್ಲರೂ ಬೆರಗಾಗಿ ಡಬ್ಲಿನ್ನನಲ್ಲಿ ಅತ್ಯಂತ ಪ್ರೇಮ-ಆದರಭಾವ ಗಳುಳ್ಳವರಾಗಹತ್ತಿದರು ಡಬ್ಲಿನ್ನನು ತಾನು ಏಕಾಂಗಿಯಾಗಿ ತನ್ನ ಕುದುರೆಯ ಮೇಲೆ ತಿರಗಾಡುತ್ತಿದ್ದನು. ತನ್ನ ಸರಬರಾಯಿಗೆ ಪ್ರಜೆಗಳಿಂದ ಒಂದು ಹುಲ್ಲಿನ ಕಡ್ಡಿಯನ್ನಾಗಲಿ, ಒಂದಿಷ್ಟು ಹಾಲು-ತುಪ್ಪವನ್ನಾಗಲಿ ಪುಕ್ಕಟೆಯಾಗಿ ತಕ್ಕೊಳ್ಳು ತ್ತಿರಲಿಲ್ಲ. ಅದರಿಂದ ಅವನ ಕೈಕೆಳಗಿನ ಸುಭೇದಾರ-ಫೌಜದಾರರ ಸರಬರಾ ಯಿಯ ಭಾರವು ಅದಾರ ಮೇಲೆ ಬೀಳಬೇಕಾಗಿದೆ?

ಈ ಮೊದಲು ಗುಲಾಬಸಿಂಹನು ಆ ಪ್ರಾಂತದವರನ್ನು ಮನಬಂದಂತೆ ಸುಲಿದು ಸೂರೆಗೊಂಡಿದ್ದರಿಂದ, ಅಲ್ಲಿಯ ಎಷ್ಟೋ ಜನರು ಅನನ್ಯಗತಿಕರಾಗಿ ದ್ದರು. ಅವರು ಡಬ್ಲಿನ್ನನ ಕಡೆಗೆ ಬಂದು ತಮ್ಮ ಹೊಟ್ಟೆ-ಬಟ್ಟೆಗಳ ವ್ಯವಸ್ಥೆ ಯನ್ನು ಮಾಡಬೇಕೆಂದು ಕೇಳಿಕೊಳ್ಳಹತ್ತಿದರು. ಅಂಥ ಜನರ ಸಂಖ್ಯೆಯು ಅಲ್ಪವಿತ್ತೆಂತಲ್ಲ ಆ ಸಾವಿರಗಟ್ಟಲೆ ಜನರ ವ್ಯವಸ್ಥೆಯನ್ನು ಹೇಗೆ ಮಾಡಬೇಕೆಂಬದು ಮೊದಮೊದಲು ಡಬ್ಲಿನ್ನನಿಗೆ ತೋಚದಾಯಿತು. ಕಡೆಗೆ ಅವನು ಆ ಪ್ರಾಂತದ ಶ್ರೀಮಂತ ಜನರದೊಂದು ದರ್ಬಾರವನ್ನು ನೆರೆಸಿ, ಈ ಪ್ರಾಂತದಲ್ಲಿಯ ಕೆಲ ನದಿ-ನದಗಳಿಗೆ ಒಡ್ಡುಗಳನ್ನು ಕಟ್ಟಿಸಿ ಕಾಲುವೆಗಳನ್ನು ತಂದರೆ, ನಿಮ್ಮ ಭೂಮಿ ಗಳಿಗೆ ನೀರಿನ ಪೂರೈಕೆಯಾಗುವದಲ್ಲದೆ, ಈ ಬಡ ಜನರಿಗೆ ಹೊಟ್ಟೆಗೆ ಕೊಟ್ಟು ದುಡಿಸಿದ ಹಾಗೆಯೂ ಆಗುತ್ತದೆ. ನಿಮ್ಮ ಆ ದುಡ್ಡನ್ನು ೧೦-೮ ವರ್ಷಗಳಲ್ಲಿ ಸರಕಾರೀ ಖಜಾನಿಯಿಂದ ನಿಮಗೆ ಮರಳಿ ಕೊಡಿಸುತ್ತೇನೆ, ಎಂದು ಹೇಳಿ ಆ ಉದ್ಯೋಗಕ್ಕೆ ಪ್ರಾರಂಭಿಸಿದನು.

ಹೀಗೆ ಡಬ್ಲಿನ್ನನ ಕಾರ್ಯತತ್ಪರತೆ, ಬುದ್ಧಿ ಕೌಶಲ್ಯಗಳ ಮೂಲಕ ಆ ಪ್ರಾಂತದ ಸ್ಥಿತಿಯು ಬಹು ಬೇಗನೆ ಸುಧಾರಿಸಿತು. ಅಲ್ಲಿಯ ಬಡ ಜನರಿಗೆ ಹೊಟ್ಟೆ ಹೊರೆಯುವ ಉದ್ಯೋಗಗಳು ದೊರೆಯಹತ್ತಿದವು. ಅರಾಜಕತೆಯು ಹೇಳಹೆಸರಿಲ್ಲದಾಯಿತು. ವ್ಯಾಪಾರೋದ್ಯೋಗಗಳು ಹೆಚ್ಚಿದವು. ಸ್ವಲ್ಪ ಖರ್ಚಿ ನಲ್ಲಿ ಪ್ರಜೆಗಳಿಗೆ ಯೋಗ್ಯವಾದ ನ್ಯಾಯವು ಸಿಗಹತ್ತಿತು. ಜನರಲ್ಲಿ ಸದಾಚರಣೆ

ಪ್ರವೃತ್ತಿಯು ಮನೆಮಾಡಿತು. ಎಲ್ಲೆಲ್ಲಿಯೂ ಕ್ಷಾತ್ರತೇಜವು ಮಿನುಗ ಹತ್ತಿತು. ಗುಲಾಬಸಿಂಹನ ಜನರು ಬರಬರುತ್ತ ಅಲ್ಲಿಯ ಪ್ರಜೆಗಳಿಗೆ ಹೆದರಿ ನಡೆಯಹತ್ತಿದರು. ಒಟ್ಟಿಗೆ ಹೇಳುವದೇನಂದರೆ, ಆಗಿನ ಕೋಟಕಾಂಗ್ರಾ ಪ್ರಾಂತವು ಈಗಿನ ಜರ್ಮನಿ-ಜಪಾನಗಳೋಪಾದಿಯಲ್ಲಿ ವಿರಾಜಿಸುತ್ತಿತ್ತೆಂದು ನಿರ್ಬಾಧವಾಗಿ ಹೇಳಬಹುದು. ಡಬ್ಲಿನ್ನನ ಕೀರ್ತಿಯು ಆ ದೇಶದಲ್ಲೆಲ್ಲ ಹಬ್ಬಿ ಅದು ರಣಜಿತಸಿಂಹ ಮಹಾರಾಜರ ಕಿವಿಯ 'ವರೆಗೂ ತಲುಪಿತು. ಅದನ್ನು ಕೇಳಿ ಅವರಿಗೆ ಆನಂದವು-ಕಲ್ಪನಾತೀತವಾದ ಆನಂದವು-ಆಯಿತು. ಮಹಾರಾಜರಂತೆ ಆ ಆನಂದದ ಭಾಗಿದಾರರು ಆ ಲಾಹೋರದಲ್ಲಿ ಹಲ-ಕೆಲವರಿದ್ದರು. ಅವರಲ್ಲಿ ಚಾಂದಖಾನ, ಫಕೀರ ಅಜೀಜುದ್ದೀನ ಇವರು ಪ್ರಮುಖರಾಗಿದ್ದರು.

---

## ೧೬ನೇ ಪ್ರಕರಣ:—ತಾಯಿನಾಡಿಗಾಗಿ!

ಲಾಹೋರದಿಂದ ಕೋಟಕಾಂಗ್ರಾಕ್ಕೆ ಬರುವಾಗ ದಾರಿಯಲ್ಲಿ ತನ್ನನ್ನು ಕೊಲ್ಲಲಿಕ್ಕೆ ಮಾಡಿದ ಗುಪ್ತಕಟ್ಟಿನಲ್ಲಿ ನಂದಸಿಂಹನ ಅಂಗವು ಹೆಚ್ಚಾಗಿರುವದೆಂಬದು ಡಬ್ಲಿನ್ನನಿಗೆ ಅಂದೇ ತಿಳಿದಿದ್ದರೂ, ಅದನ್ನು ಪುರಾವೆಯಿಂದ ಸಿದ್ಧಮಾಡದ ಹೊರತು ಅವನು ನಂದಸಿಂಹನ ಮೇಲೆ ಕೈಮಾಡುವಂತಿರಲಿಲ್ಲ. ಅದರಿಂದ ಆ ದುಷ್ಟಕಾರ್ಯಾಸಕ್ತರಾದ ಜನರ ಪತ್ತೆಹಚ್ಚಿ, ಬಳಿಕ ಅವರಿಗೆ ತಕ್ಕ ಶಾಸನ ಮಾಡಬೇಕೆಂದು ಬಗೆದು, ಡಬ್ಲಿನ್ನನು ಆ ಜನರ ಪತ್ತೆಹಚ್ಚಲಿಕ್ಕೆ ಅಲಿವರ್ದಿಖಾನನನ್ನು ನೇಮಿಸಿದ ಸಂಗತಿಯು ನಮ್ಮ ವಾಚಕರಿಗೆ ತಿಳಿದೇ ಇದೆ. ಅಲಿವರ್ದಿಖಾನನು ಆ ಕೆಲಸಕ್ಕೆ ಪ್ರವೃತ್ತನಾಗಿ ಒಂದು ತಿಂಗಳಾದರೂ ಅವನು ಹಿಂದಿರುಗಲಿಲ್ಲ. ಅದರಿಂದ ಡಬ್ಲಿನ್ನನಿಗೆ ಅವನ ಬಗ್ಗೆ ವಿಶೇಷವಾದ ಚಿಂತೆಯುಂಟಾಯಿತು. ಅವನ ಶೋಧಕ್ಕಾಗಿ ಕೆಲ ಜನರನ್ನು ಕಳಿಸಬೇಕೋ ಹೇಗೆಂದು ಅವನು ಯೋಚಿಸುತ್ತಿರಲಿಕ್ಕೆ ಅಲಿವರ್ದಿಖಾನನ ತೀಕ್ಷ್ಣಬುದ್ಧಿ, ಕಾರ್ಯತತ್ಪರತೆ, ಶೌರ್ಯ, ಸಾಹಸಾದಿ ಗುಣಗಳು ಅವನ ಎದುರಿಗೆ ಬಂದು ನಿಂತು ಅವನನ್ನು ನಿಶ್ಚಿಂತನನ್ನಾಗಿ ಮಾಡುತ್ತಿದ್ದವು. ಇಷ್ಟರಲ್ಲಿ ಅಲಿವರ್ದಿಖಾನನು ಒಂದು ದಿನ ಬೆಳಿಗ್ಗೆ ಆಕಸ್ಮಿಕವಾಗಿ ಬಂದನು. ಅವನು ತನ್ನೊಡನೆ ೬-೮ ಜನ ಅಪರಾಧಿಗಳನ್ನು ಹಿಡಿದು ತಂದಿದ್ದನು.

ಅಲಿವರ್ದಿಖಾನನು ಡಬ್ಲಿನ್ನನ ಅಪ್ಪಣೆಯ ಮೇರೆಗೆ ಆ ಜನರನ್ನು ಕಚ್ಚಾ ಕೈದಿನಲ್ಲಿರಿಸಿ, ಡಬ್ಲಿನ್ನನನ್ನು ಒತ್ತಟ್ಟಿಗೆ ಕರೆದೊಯ್ದು ಆ ನೀಚರ ಸಂಗತಿಯನ್ನು ಹೀಗೆ ತಿಳಿಸಿದನು:—ಹುಜೂರ, ಈ ಎಲ್ಲ ಜನರು ಸದಾ ಖೂನಿನಂಥ ಭಯಂಕರ ಕಾರ್ಯಾಸಕ್ತರೇ ಸರಿ. ಈ ಜನರ ಗುಂಪು ದೊಡ್ಡದಿದ್ದು, ಯಾವ ಯಾವ ವ್ಯಕ್ತಿಗಳಲ್ಲಿ ದ್ವೇಷವಿರುತ್ತದೆಂಬದರ ಪಾಳತಿಯನ್ನೇ ಇವರು ಮಾಡುತ್ತಿರುತ್ತಾರೆ. ಅದರ ಪತ್ತೆಯಾಯಿತೆಂದರೆ ಮೆಲ್ಲನೆ ತಮಗೆ ಅನುಕೂಲವಾದ ವ್ಯಕ್ತಿಯೊಡನೆ ಬೆರೆತು, ಆ ವ್ಯಕ್ತಿಯ ವಿರುದ್ಧ ಪಕ್ಷದವರನ್ನು ಕೊಲೆಮಾಡುವರು. ನಾವು ಲಾಹೋರದಿಂದ ಹೊರಟಾಗಿನಿಂದಲೂ ಇವರು ನಂದಸಿಂಹನ ದಂಡಿನಲ್ಲಿ ಸೇರ್ಪಡೆಹೊಂದಿದ್ದರು. ಈ ಜನರು ಧರ್ಮಾಧರ್ಮ ಜ್ಞಾನವಿಹೀನರು. ತಾವು ಹಿಂದುಗಳೋ ಮುಸಲ್ಮಾನರೋ ಎಂಬದು ಕೂಡ ಇವರಿಗೆ ಗೊತ್ತಿಲ್ಲ! ಇವರು ನಂದಸಿಂಹನ ಕೇವಲ ಹಸ್ತಕನಾದ ಮಹಮ್ಮದಶಕನ ಸಲಹೆಯಿಂದ ನಮ್ಮ ಹುಜೂರರ ಪ್ರಾಣಹೀರಲಿಕ್ಕೆ ಅಂದು ಆ ಅರಣ್ಯದಲ್ಲಿ ತತ್ಪರರಾಗಿದ್ದರು; ಆದರೆ ದೈವವಶಾತ್ ಅಂದು ನಮ್ಮ ಹುಜೂರರು ಇವರ ಕೈಯಿಂದ ಪಾರಾಗಿಬಂದರು! ತಮ್ಮ ಸ್ವೀಕೃತಕಾರ್ಯವು ಸಾಧಿಸದ್ದರಿಂದ ಇವರು ತಮ್ಮ ಒಡೆಯನಾದ ನಂದಸಿಂಹನಿಗೆ ಮೋರೆ ತೋರಿಸಲಾರದೆ, ಅಡವಿಯಲ್ಲಿ ಗಚ್ಛಹೇಳಿಸಿದರು; ಆದರೆ ನಮ್ಮ ಕಡೆಯ ಖೈರಾತಅಲ್ಲಿ ಹಾಗು ಬಯಾಬಲಅಲ್ಲಿಯವರು ಕಳ್ಳರ ಹೆಜ್ಜೆಯ ಗುರುತುಗಳನ್ನು ಹಿಡಿಯುವ ಕಲೆಯಲ್ಲಿ ಪಾರಂಗತರು. ಅಂಥವರಿಗೆ ಈಗ ತಿಂಗಳಗಟ್ಲೆ ಇವರು ಮಂಕುಬೂದಿಯನ್ನು ಹಚ್ಚಿರುವರೆಂದ ಬಳಿಕ ಇವರೆಷ್ಟು ನಿಷ್ಣಾತ ಕಳ್ಳರಿರಬಹುದೆಂಬದು ನಮ್ಮ ಹುಜೂರರಿಗೆ ಬೇರೆ ತಿಳಿಸುವ ಅವಶ್ಯಕತೆಯಿಲ್ಲ.

ಹುಜೂರ, ನಾವು ಇವರ ಪದಚಿಹ್ನಗಳ ಸುಳುವಿನಿಂದ ಬೆನ್ನಟ್ಟಿ ನಡೆದ ವಷ್ಟೇ? ಹೊಸ ದಿನಗಳಲ್ಲೇ ನಾವು ಇವರನ್ನು ಬೆನ್ನಟ್ಟಿ ಬರುತ್ತಿರುವದು ಇವರಿಗೆ ತಿಳಿಯಲು ಇವರು ನಮ್ಮ ಕಣ್ಣಲ್ಲಿ ಧೂಳನ್ನೊಗೆದು ಸುಳುವಿಲ್ಲದಂತಾದರು. ಆದರೂ ನಾವು ಇವರ ಪತ್ತೆಹಚ್ಚಿ ಇವರ ಸನಿಸನಿಯಕ್ಕೆ ಹೋದೆವು. ಇವರು ಮೂಲತಃ ಈ ನಾಡಿನ ಕಾಡಿನಲ್ಲೇ ಸಂಚರಿಸತಕ್ಕವರು; ಮೇಲಾಗಿ ಇವರಿಗೆ ಪ್ರಾಣಭಯ! ಅಂದಮೇಲೆ ಇವರು ಒಮ್ಮೆಲೆ ನಮಗೆ ಸಿಗುವರೇ? ನಡುನಡುವೆ ನಾನು ಬಹು ನಿರಾಶೆಗೊಂಡಿದ್ದೆನು. ಖೈರಾತಅಲ್ಲಿ-ಬಯಾಬಲಅಲ್ಲಿಗಳ ಮೇಲೆ ಕ್ರೋಧಸಂತಪ್ತನಾಗಿದ್ದೆನು. ಈ ಅಲ್ಲೀದ್ವಯರು ಸುಮ್ಮ ಸುಮ್ಮನೆ

ನನ್ನನ್ನು ಎಡಹಾಕಿಸುತ್ತಿರುವರೆಂದು ಬಗೆದು, ನಾನು ಅವರಿಗೆ ಬಾಯಿಗೆ ಬಂದಂತೆ ಸಿಟ್ಟು ಸಹ ಮಾಡಿದೆನು; ಆದರೆ ಖೈರಾತಅಲ್ಲಿಯು ಕಡೆಗೆ ಆ ಜನರನ್ನು ಪತ್ತೆಹಚ್ಚಿಕೊಟ್ಟನು.

ನಂದಸಿಂಹನು ಮುಹಮ್ಮದಶಹನ ಮುಖಾಂತರ ಇವರಿಗೆ ೫೦೦ ರೂ ಪಾಯಿಗಳನ್ನು ಕೊಟ್ಟದ್ದರಿಂದ ಇವರು ಈ ಕೆಲಸಕ್ಕೆ ಪ್ರವೃತ್ತರಾದರಂತೆ; ಬರ ಬರುತ್ತ ಇವರ ಹೆಜ್ಜೆಗಳ ಸುಳುವು ನಮಗಾರಿಗೂ ಹತ್ತದಾಯಿತು. ಆಗ ಈ ಬದಮಾಷರು ತಮ್ಮ ಹೆಜ್ಜೆಗಳ ಗುರುತು ನಮಗೆ ಹತ್ತಬಾರದೆಂದು ಆ ಅಡವಿ ಯೊಳಗಿನ ಈ ಗಿಡದಿಂದ ಆ ಗಿಡಕ್ಕೆ ಆ ಗಿಡದಿಂದ ಮತ್ತೊಂದು ಗಿಡಕ್ಕೆ ಹೀಗೆ ಗಿಡ-ಗಿಡಗಳನ್ನು ಹಾರುತ್ತಲೆ ಆ ಕಠಿಣವಾದ ಅರಣ್ಯವನ್ನು ಪಾರಾದರು! ಹೀಗೆ ಇವರು ಒಂದೇಸವನೆ ಓಡಹತ್ತಿದ್ದರಿಂದ ಇವರ ಊಟ ಉಪಚಾರಗಳಿಗೆ ತೊಂದರೆಯಾಯಿತು, ಇವರು ನಾಲ್ಕು ನಾಲ್ಕು ದಿನ ಉಪವಾಸ ಮಾಡ ಬೇಕಾಯಿತು. ಉಪವಾಸದಿಂದ ಕಂಗಾಲರಾದ ಈ ಜನರು ಒಂದು ಸಣ್ಣ ಹಳ್ಳಿಯನ್ನು ಹೊಕ್ಕು ಅಲ್ಲಿಯ ಜನರ ಕೂಳನ್ನು ಎತ್ತಿಹಾಕುವ ಸಂಭ್ರಮ ನಡಿಸಿರಲಿಕ್ಕೆ ನಾವು ಅಲ್ಲಿಗೆ ಹೋದೆವು. ಕೂಡಲೆ ನಾವು ಆ ಊರವರ ಸಹಾಯ ದಿಂದ ಇವರ ಸುತ್ತಲೂ ಮುತ್ತಿ ಇವರನ್ನು ಸೆರೆಹಿಡಿದು ಇಲ್ಲಿಗೆ ತಂದಿರುವೆವು.

ಅಲಿವರ್ದಿಖಾನನ ಆ ನುಡಿಗಳನ್ನು ಕೇಳಿ ಡಬ್ಲಿನ್ನನು ಕೆಲಕಾಲ ಸಚಿಂ ತನಾಗಿ ಕುಳಿತನು. ಬಳಿಕ ಮುಂದೇನು ಮಾಡಬೇಕೆಂಬದನ್ನು ಆಲೋಚಿಸಿ, ಅವನು:—ಅಲಿವರ್ದಿಖಾನ, ಈ ನೀಚರ ವಿಚಾರವನ್ನು ಗುಪ್ತವಾಗಿ ಮಾಡಿ ಪ್ರಯೋಜನವಿಲ್ಲ. ಯಾಕಂದರೆ ಇವರ ವಿಚಾರಣೆಯಲ್ಲಿ ನಂದಸಿಂಹನ ಮೇಲೆ ಆರೋಪಹೊರುವದು ಸಹಜವು. ಅವನು ಜಾತಿಯಿಂದ ಶೀಖನು. ಮೇಲಾಗಿ ನಂದಸಿಂಹನ ಪಕ್ಷದ ಪ್ರಮುಖರು ಲಾಹೋರದ ದರ್ಬಾರಿನಲ್ಲಿ ಕಡಿಮೆಯಿಲ್ಲ. ಆದ್ದರಿಂದ ಈ ಪ್ರಾಂತದ ಕೆಲ ಪ್ರಮುಖರನ್ನು ನಾಳಿನ ದರ್ಬಾರದಲ್ಲಿ ಕೂಡಿಸಿ, ಅವರೆದುರಿಗೆ ಈ ಪ್ರಕರಣದ ವಿಚಾರವನ್ನು ನಡಿಸುವದು ತಕ್ಕದ್ದಾಗಿದೆ, ಎಂದು ಹೇಳಿದನು.

ಮರುದಿನ ಕೋಟಕಾಂಗ್ರಾದುರ್ಗದೊಳಗಿನ ಭವ್ಯವಾದ ದಿವಾಣಖಾನೆ ಯಲ್ಲಿ ಆ ನೀಚರ ವಿಚಾರಣೆಯು ನಡೆಯಿತು. ಹತ್ತಿಪ್ಪತ್ತು ಪ್ರತಿಷ್ಠಿತ ಜನರು ಡಬ್ಲಿನ್ನನ ಎಡಬಲಗಳಲ್ಲಿ ಕುಳಿತಿದ್ದರು; ಸುತ್ತಲಿನ ಎಷ್ಟೋ ಗ್ರಾಮಗಳ ಜನರು ಆ ವಿಚಾರಣೆಯನ್ನು ಕೇಳಲಿಕ್ಕೆ ಅಂದಿನ ದರ್ಬಾರಿಗೆ ಬಂದಿದ್ದರು. ಹತ್ತರವೇ

ತನ್ನ ಎಲ್ಲ ಸೈನ್ಯವನ್ನು ಡಬ್ಲಿನ್ನನು ಶಿಸ್ತಿನಿಂದ ನಿಲ್ಲಿಸಿದ್ದನು. ಬಳಿಕ ಆ ಏಳು ಜನ ಅಪರಾಧಿಗಳನ್ನೂ ಆ ನ್ಯಾಯಾಸನದ ಎದುರಿಗೆ ತಂದು ನಿಲ್ಲಿಸಿದರು. ಡಬ್ಲಿನ್ನನು ಆ ಪ್ರತಿಷ್ಠಿತ ಸಭಿಕರಿಗೂ ನೆರೆದ ಜನರಿಗೂ ಆ ಬದಮಾಷರ ಸಂಗತಿಯನ್ನು ಹೇಳಿದನು. ನಂತರ ಅವನು ಆ ಗುಪ್ಪೇಗಾರರನ್ನು ಕುರಿತು:—ನೀವು ಅಪರಾಧಿಗಳೋ, ನಿರಪರಾಧಿಗಳೋ? ಎಂಬದನ್ನು ಗಟ್ಟಿಯಾಗಿಹೇಳಿರಿ, ಎಂದು ಕೇಳಿದನು.

ಆ ಪ್ರಶ್ನೆಯನ್ನು ಕೇಳಿ ಅವರಲ್ಲಿಯ ಬಹು ಜನರು ನಾಚಿಕೆಯಿಂದ ತಲೆ ಕೆಳಗೆ ಹಾಕಿದರು. ಒಬ್ಬಿಬ್ಬರು "ಅಪರಾಧಿಗಳು" ಎಂದು ಮೆಲ್ಲನೆ ನುಡಿದರು. ನಿಮ್ಮ ಸಂಗತಿಯೇನೆಂದು ಸಭಿಕರಲ್ಲಿಯ ಒಬ್ಬ ಪ್ರತಿಷ್ಠಿತ ಗೃಹಸ್ಥನು ಆ ಅಪರಾಧಿಗಳನ್ನು ಕೇಳಲು, ಅವರು ಅಳುಮೋರೆಯಿಂದ ನಡೆದ ಸಂಗತಿಯನ್ನು ವಿವರಿಸಿ ಹೇಳಹತ್ತಿದರು. ಆ ನೀಚರ ಆ ಸಂಗತಿಯಲ್ಲಿ ಮುಹಮ್ಮದಶಹ, ನಂದಸಿಂಹ ಮುಂತಾದವರ ಆಗ್ರಹದಿಂದಲೇ ತಾವು ಹುಜೂರರನ್ನು ಕೊಲ್ಲುವ ಆ ಉದ್ಯೋಗಕ್ಕೆ ಪ್ರವೃತ್ತರಾದೆವೆಂಬ ವಿಷಯವು ಸ್ಪಷ್ಟವಾಯಿತು. ಆಗ ಡಬ್ಲಿನ್ನನು ನಂದಸಿಂಹಾದಿಗಳಿಗೆ ಈ ಬಗ್ಗೆ ನಿಮ್ಮ ಅಂಬೋಣವೇನೆಂದು ಕೇಳಲು, ಅವರು ಯಾವುದನ್ನೂ ಹಚ್ಚಿಕೊಳ್ಳದೆ, ನಮಗೆ ಈ ಬಗ್ಗೆ ಏನೂ ಗೊತ್ತಿರುವದಿಲ್ಲ; ನಾವು ಸಂಪೂರ್ಣ ನಿರಪರಾಧಿಗಳಾಗಿರುತ್ತೇವೆ, ಎಂದು ಹೇಳಿಬಿಟ್ಟರು!

ನಂದಸಿಂಹನು ಇಷ್ಟೇಹೇಳಿ ಸುಮ್ಮನಾಗಲಿಲ್ಲ; ನನ್ನ ನಿಮ್ಮ ಪೂರ್ವದ ದ್ವೇಷಕ್ಕಾಗಿ ನೀವು ಈ ನೀಚರ ಮುಖಾಂತರ ಹೀಗೆ ಬೇಕಂತ ನುಡಿಸಿ, ದರ್ಬಾರದಲ್ಲಿ ನನ್ನ ಅಪಮಾನಮಾಡುವದಕ್ಕೆಂದೇ ನೀವು ಈ ಆಟವನ್ನು ಹೂಡಿರುತ್ತೀರೆಂದು ಡಬ್ಲಿನ್ನನಿಗೆ ದೋಷಕೊಡಹತ್ತಿದನು.

ಆದರೆ ನಂದಸಿಂಹನ ಆ ಆರೋಪವನ್ನು ಕೇಳಿ ಎಲ್ಲ ಸಭಿಕರೂ ದಂಡಾಳುಗಳೂ "ನಂದಸಿಂಹನ ಆರೋಪವು ಯಥಾರ್ಥವಾದದ್ದಲ್ಲ. ಈತನೇ ನಿಜವಾದ ಅಪರಾಧಿಯು" ಎಂದು ಒಮ್ಮೆಲೆ ಕೂಗಿದರು. ಆದರೂ ಡಬ್ಲಿನ್ನನು ದುಡುಕದೆ, ಎಲ್ಲರನ್ನೂ ಶಾಂತಗೊಳಿಸಿ, ಸಭಿಕರಲ್ಲಿಯ ಐದುಜನ ವಯೋವೃದ್ಧ ಹಾಗು ಜ್ಞಾನವೃದ್ಧರಾದ ಜನರನ್ನು ಕುರಿತು ಒಳ್ಳೇ ವಿನಯದಿಂದ:—ಸರದಾರರೇ, ಇದು ನ್ಯಾಯಾಸನವು. ಇಲ್ಲಿ ಯಾರ ಭಿಡೆ-ಮುರವತ್ತುಗಳಿಗೂ ನಿಮ್ಮ ವಿವೇಕವನ್ನು ಮಾರಿಕೊಳ್ಳಬೇಡಿರಿ. ಈ ವರೆಗೆ ನಡೆದ ವಿಚಾರಣೆಯಿಂದ ಅಪರಾಧಿಗಳು ಯಾರು? ನಿರಪರಾಧಿಗಳು ಯಾರು? ಎಂಬದನ್ನು ನಿಮ್ಮ ಸದಸದ್ವಿವೇಕಬುದ್ಧಿಗೆ ತೋರುವಂತೆ ತಟ್ಟನೆ ಹೇಳಿಬಿಡಿರಿ, ಎಂದು ವಿಜ್ಞಾಪಿಸಿಕೊಂಡನು.

ಕೂಡಲೆ ಅವರೆಲ್ಲರೂ ಐಕ್ಯಮತದಿಂದ ನಂದಸಿಂಹನೇ ಮುಖ್ಯವಾದ ಅಪರಾಧಿಯಾಗಿದ್ದು, ಉಳಿದವರು ಇವನ ಅನುಯಾಯಿಗಳಾಗಿದ್ದಾರೆ, ಎಂಬ ತಮ್ಮ ಸ್ಪಷ್ಟ ಮತವನ್ನು ವ್ಯಕ್ತಪಡಿಸಿದರು. ಆಗ ಡಬ್ಲಿನ್ನನು ಎದ್ದು ನಿಂತು:—ಸಭಿಕರೇ, ದಂಡಾಳುಗಳೇ, ಪ್ರಜೆಗಳೇ, ನಾನು ಈ ವರೆಗೆ ಜೀವಿಸಿದ್ದು ನನ್ನ ತಾಯಿನಾಡಿಗಾಗಿ; ಈ ದೇಶಕ್ಕೆ ಬಂದು ಈ ಅಧಿಕಾರಸೂತ್ರವನ್ನು ಧರಿಸಿದ್ದು ತಾಯಿನಾಡಿಗಾಗಿ; ಹಾಗು ಈ ಬದ್‌ಮಾಷ ಜನರಿಗೆ ತಕ್ಕ ಶಿಕ್ಷೆಯನ್ನು ವಿಧಿಸುವದಾದರೂ ತಾಯಿನಾಡಿಗಾಗಿಯೇ! ಸರದಾರರೇ, ನಾನು ಇವರನ್ನು ಈಗ ಕ್ಷಮಿಸಿಬಿಟ್ಟರೂ ಬಿಡಬಹುದು; ಆದರೆ ಈ ಕಂಟಕಸದೃಶಜನರಿಂದ ಯಾರಿಗೂ ಎಂದಿಗೂ ಕೊಂಚವೂ ಹಿತವಾಗದು; ಅಲ್ಲದೆ ಇವರಿಂದ ಜನರಿಗೆ ಹೆಚ್ಚು ಸಂಕಟಗಳೇ ಪ್ರಾಪ್ತವಾಗುವ ಸಂಭವವಿರುತ್ತದೆ. ಆದ್ದರಿಂದ ಇವರಿಗೆ ತಕ್ಕ ಶಿಕ್ಷೆಯನ್ನು ಈಗಲೆ ವಿಧಿಸುವೆನು. ಆದರೂ ನಂದಸಿಂಹ, ನೀವು ರಣಜಿತರ ಪ್ರತಿಷ್ಠಿತ ಸರದಾರರು; ಆದದ್ದು ಆಗಿ ಹೋಯಿತು. ಇಂಥ ಕೃತ್ಯವು ಮುಂದೆ ಆಗದಂತೆ ಜಾಮೀನು ಕೊಡುವದಾದರೆ, ನಿಮ್ಮ ಅಪರಾಧವನ್ನು ಕ್ಷಮಿಸಲಾಗುವದು, ಎಂದು ಹೇಳಿ, ನಂದಸಿಂಹನ ಉತ್ತರಕ್ಕಾಗಿ ಕುಸ ತಡೆದನು.

ಆಗ ನಂದಸಿಂಹನು ಕೆರಳಿದ ಹುಲಿಯಂತೆ ಒಳ್ಳೇ ದರ್ಪದಿಂದ:— "ಹೋಗೋ, ಫಿರಂಗೀ-ನಾಯಿ, ನಿನ್ನಂತಹ ದರಿದ್ರನೆದುರಿಗೆ ನಾನು ಕ್ಷಮೆ ಬೇಡಬೇಕೇ? ಹೋಗು, ನೀನು ನಿನ್ನ ಮನಸ್ಸಿಗೆ ಬಂದಂತೆ ಮಾಡು! ನಿನ್ನ ಅಧಿಕಾರವಿದ್ದಷ್ಟು ಶಿಕ್ಷೆ ಕೊಡು; ಆದರೆ ಈ ನಂದಸಿಂಹನು ನಿನ್ನನ್ನು ಕಡೆಗಾಣಿಸುವ ಯೋಚನೆಯನ್ನು ಮಾಡಿಟ್ಟೇ ಇಲ್ಲಿಗೆ ಬಂದಿರುವನೆಂಬದನ್ನು ಚೆನ್ನಾಗಿ ಲಕ್ಷದಲ್ಲಿಟ್ಟು ಮಾಡಬೇಕಾದ್ದನ್ನು ಮಾಡು" ಎಂದು ನುಡಿದನು. ನಂದಸಿಂಹನ ಆ ದರ್ಪೋಕ್ತಿಗಳನ್ನು ಕೇಳಿ, ನೆರೆದ ಜನರೆಲ್ಲರೂ ಏಕಸಮಯಾವಚ್ಛೇದವಾಗಿ "ಈ ನೀಚ ನಂದಸಿಂಹನನನ್ನು ಗಲ್ಲಿಗೇರಿಸಿರಿ! ಈ ಹರಾಮಖೋರನನ್ನು ಜೀವಂತ ಹುಗಿಸಿರಿ!! ಈ ಪ್ರಾಣಘಾತುಕನನ್ನು ಗುಂಡು ಹಾಕಿ ಕೊಲ್ಲಿಸಿರಿ!!!" ಎಂದು ಕೂಗಿಕೊಂಡರು.

ಬಳಿಕ ಡಬ್ಲಿನ್ನನು ಮತ್ತೆ ಎದ್ದು ನಿಂತು, ಎಲ್ಲರನ್ನೂ ಶಾಂತಗೊಳಿಸಿ:— ಅಂದಿನ ವಿಚಾರಣೆಯ ತಿರಾವನ್ನೋದತೊಡಗಿದನು. ಅವನು ತನ್ನ ಆ ತಿರಾವಿನಲ್ಲಿ ಮೊದಲು ರಣಜಿತಸಿಂಹನ ರಾಜ್ಯದ ಸುವ್ಯವಸ್ಥೆಯನ್ನೂ, ನ್ಯಾಯನಿಷ್ಠುರತೆಯನ್ನೂ ಜನರಿಗೆ ಮನದಟ್ಟಾಗುವಂತೆ ತಿಳಿಸಿ, ನಂತರ ಅಂದಿನ ಆ ಪ್ರಕರಣದ

